# ಕಸ್ತೂರಿ



ಕನ್ನಡ ಡೈಜೆಸ್ಟ್



ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಆರ್.ಎ. ಉಪಾಧ್ಯ


# ಬೆಳಕಿಂಡಿ

★ ಬೀಜ ಅಂಕುರಿಸಿ ಮಹಾವೃಕ್ಷವಾಗಬೇಕಾದರೆ ಅದು ಮಣ್ಣು ಪಾಲಾಗಿ ಹೋಗಬೇಕಾಗುತ್ತದೆ. ಅದ್ದರಿಂದ ಫಲವೂ ಪೂರ್ಣ ಬಲಿದಾನದಿಂದಲೇ ಲಭಿಸಬಲ್ಲದು.

*-ಸ್ವಾಮಿ ರಾಮತೀರ್ಥ*

★ ಬಹಳಷ್ಟು ಹಣ ದೈವವುಳ್ಳವರಿಗೆ, ಮಿತವಾದ ಹಣ ಕಷ್ಟ ಜೀವಿಗೆ; ಇದೇ ಪ್ರಕೃತಿ ನಿಯಮ. *-ಚೀನಾ ಗಾದೆ*

★ ಅಂತರಾತ್ಮವು ನಮ್ಮ ತಪ್ಪಿಗೆ ನ್ಯಾಯಾಧೀಶನಂತೆ ಶಿಕ್ಷಿಸುವ ಮೊದಲು ಸ್ನೇಹಿತನಂತೆ ಎಚ್ಚರಿಕೆಯನ್ನು ಕೊಡುತ್ತದೆ.

*-ರಾಬರ್ಟ್ ಹಾಲ್*

★ ಪ್ರತಿಯೊಬ್ಬನೂ ತನ್ನ ಹಿಂದಿನ ತಪ್ಪುಗಳಿಗೆ ಅನುಭವವೆಂಬ ದೊಡ್ಡ ಹೆಸರನ್ನೇ ಕೊಡುತ್ತಾನೆ. *-ಆಸ್ಕರ್ ವೈಲ್ಡ್*

★ [illegible]ಸುವ ಕಲ್ಲಿನ ಕೆಳಗಿರುವ ಕಲ್ಲೇ ಈಶ್ವರ, ಮೇಲೆ ಸದಾ ಸುತ್ತಲರುವ ಕಲ್ಲೇ ಪ್ರಕೃತಿ. *-ಅ.ನ.ಕೃ.*


**ಚಂದಾ ದರಗಳು**

| | | |
|---|---|---|
| ಬಿಡಿ ಸಂಚಿಕೆ | ... | 3=00 |
| 1 ವರ್ಷಕ್ಕೆ | ಅಂಚೆ ಸೇರಿ | 34=00 |
| 2 ವರ್ಷಕ್ಕೆ | ... | 65=00 |
| 3 ವರ್ಷಕ್ಕೆ | ... | 100=00 |

**ಚಂದಾದಾರರಿಗೆ ಸೂಚನೆ**

'ಕಸ್ತೂರಿ' ತಿಂಗಳ 1 ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5 ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

KASTURI OCTOBER 1989

ಮುಖ ಪುಟ:
ದೀಪಧಾರಿಣಿ
ಬಿಳಿಗಿರಿ ರಂಗನ
ದೇವಸ್ಥಾನದ ಶಿಲ್ಪ



ಕಸ್ತೂರಿ ಕಾರ್ಯಾಲಯ
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-580020



### ನೆಲಕ್ಕೆ ಬಿದ್ದ ನಕ್ಷತ್ರ

ದಿ.ಮೀನಾಕುಮಾರಿಯ ಜೀವನವನ್ನು ವಿಭಿನ್ನ ಬಗೆಯಲ್ಲಿ ನಿರೂಪಿಸಿರುವ ಖಜಾನೆ ಕೃಷ್ಣಮೂರ್ತಿಯವರ 'ನೆಲಕ್ಕೆ ಬಿದ್ದ ನಕ್ಷತ್ರ' ಲೇಖನ ಕೆಲ ಸಂಗತಿಗಳನ್ನು ವೈಭವೀಕರಿಸಿದ್ದರೂ ಚೆನ್ನಾಗಿದೆ.

ಆದರೆ ಈ ಲೇಖಕರಿಗೊಂದು ವಿನಂತಿಃ ದಿ.ಮೀನಾಕುಮಾರಿಯಂಥ ಅಪ್ರತಿಮ ಪ್ರತಿಭೆಯ ಕುರಿತು ಬರೆಯುವಾಗ, (ಉದಾ: ಪಾಕೀಜಾ, ದಿಲ್ ಅಪನಾ ಔರ್ ಪ್ರೀತ್ ಪರಾಯಾ, ಸಾಹೀಬ್ ಬೀಬಿ ಔರ್ ಗುಲಾಂ ಮುಂತಾದ ಚಿತ್ರಗಳಲ್ಲಿನ ಅವಳ ಅಭಿನಯ) ಅವುಗಳ ಬಗ್ಗೆ ಈ ಕಾಲದವರಿಗೆ ಏನೂ ಗೊತ್ತಿಲ್ಲ ಎಂಬ ಧೋರಣೆಯನ್ನಿಟ್ಟುಕೊಳ್ಳಬೇಡಿ. ಯಾಕೆಂದರೆ ಯಾವುದೇ ಒಂದು ಮೌಲಿಕ ಚಿತ್ರ ಸದಾಕಾಲಕ್ಕೂ ಎಲ್ಲರ ಮನದಲ್ಲಿ ಹಸಿರಾಗಿ ನಿಲ್ಲುವಂಥದು.

ಇನ್ನು ಆಕೆಯ ದುರಂತಮಯ ಬದುಕಿನ ಕುರಿತು. ಅಮ್ರೋಹಿಯೊಂದಿಗೆ ನಡೆದ ಅವಳ ಪ್ರೇಮ, ಕಲಹಗಳ ಕುರಿತು.. ಪುಣೆಯ ಸಸೂನ್ ಆಸ್ಪತ್ರೆಯಲ್ಲಿ ಮೀನಾ ಇದ್ದಾಗ ಆಮ್ರೋಹಿಯೊಂದಿಗೆ ನಡೆದ ಆಕೆಯ ಪ್ರೇಮ ಪತ್ರವ್ಯವಹಾರ, ದೂರವಾಣಿ ಸಂಭಾಷಣೆಗಳು "ನನಗೆಂದಿಗೂ ಸ್ಮರಣೀಯ"ವೆಂದು ಸ್ವತಃ ಮೀನಾ ಒಂದೆಡೆ ಹೇಳಿದ್ದಾಳೆ.

ಈ ಲೇಖನದಲ್ಲಿ ಧರ್ಮೇಂದ್ರ ಆಕೆಯ ಬಾಳಿನಲ್ಲಿ ಪ್ರವೇಶಿಸಿದ ಖಳನಾಯಕ ಎಂಬಂತೆ ಬರೆಯಲಾಗಿದೆ. ಆದರೆ ವಸ್ತುಸ್ಥಿತಿ ತದ್ವಿರುದ್ಧ. ಮೀನಾ ಮನಸ್ವೀ ಆರಾಧಿಸಿದ ಕೆಲವೇ ಜನರಲ್ಲಿ ಧರ್ಮೇಂದ್ರ ಒಬ್ಬ. 'ಫೂಲ್ ಔರ್ ಪತ್ಥರ್' ಚಿತ್ರದಂತೆಯೇ ಅವರಿಬ್ಬರ ಪ್ರಣಯ ಸಾಗಿತ್ತು.

ಹುಬ್ಬಳ್ಳಿ　　　　ಮನೋಜ ಪಾಟೀಲ

ಸಪ್ಟಂಬರ್ 89 ಕಸ್ತೂರಿಯ 'ನೆಲಕ್ಕೆ ಬಿದ್ದ ನಕ್ಷತ್ರ' ಲೇಖನ ನೋಡಿದಾಗ ಇದೇನು ಸಿನೇತಾರೆಯೊಬ್ಬಳ ಕುರಿತು ಪ್ರಕಟಿಸಿದ್ದಾರಲ್ಲ - ಎಲ್ಲ ಪತ್ರಿಕೆಗಳಲ್ಲಿರುವುದನ್ನೇ ಇವರೂ ಪ್ರಕಟಿಸಿರಬಹುದು ಎಂದು ಉದಾಸೀನತೆಯಿಂದ ಲೇಖನ ಓದಲಾರಂಭಿಸಿದ ನನಗೆ ಅದನ್ನು ಓದಿ ಮುಗಿಸಿದಾಗ ತಂತಾನೇ ಕಣ್ಣೀರು ಮಿಡಿದಿತ್ತು.

ಮರಾಠಿ ಕತೆಗಾರ 'ಜಿಎ' ಅವರ ಪರಿಚಯವನ್ನು ಕೊಟ್ಟ ಸಂಚಿಕೆಯಲ್ಲೇ ಅವರದೊಂದು ಕಥೆಯ ಅನುವಾದವನ್ನು ಪ್ರಕಟಿಸಬಹುದಿತ್ತಲ್ಲ.. ಇನ್ನು ಬರುವ ಸಂಚಿಕೆಯೊಂದರಲ್ಲಾದರೂ ಜಿಎಯವರ ಕಥೆಯನ್ನು ನಾನು ಎದುರು ನೋಡುವೆ.

ಅಂದ ಹಾಗೆ 'ಕಾಂಬೇಕರ ರಸ್ತೆ ಕೊಲೆ ಪ್ರಕರಣ' ವರ್ಷವೊಂದರ ಹಿಂದೆ 'ಸೇಡು' ಎಂಬ ಹೆಸರಿನಲ್ಲಿ ಪ್ರಕಟವಾಗಿದ್ದ ನೆನಪು ನನಗೆ..

ಚುಂಚನಹಳ್ಳಿ　　　　ಬಿ.ಎಸ್.ಶ್ರೀನಿವಾಸಾಚಾರ್ಯ

ನನ್ನ ಮನಮಿಡಿಸಿದ ಲೇಖನ 'ನೆಲಕ್ಕೆ ಬಿದ್ದ ನಕ್ಷತ್ರ'.

ಲಕ್ಷ್ಮೇಶ್ವರ　　　　ಕೊ-ರಾಮ

ಮೈಸೂರಿನ ಸುತ್ತಮುತ್ತ 'ಪಾಕೀಜಾ' ಚಿತ್ರದ ಚಿತ್ರೀಕರಣ ಸಂದರ್ಭದಲ್ಲಿ ಮೀನಾಳೊಂದಿಗೆ ನಿಂತುಕೊಂಡು ನನ್ನ ಕಚ್ಚಾ ಕ್ಯಾಮರಾದಲ್ಲಿ ಸೆರೆಹಿಡಿಸಿಕೊಂಡ ಛಾಯಾ ಚಿತ್ರವನ್ನೂ ಮತ್ತೆ ಮತ್ತೆ ನೋಡುವಂತೆಯೇ ಈ ಲೇಖನವನ್ನೂ ಮತ್ತೆ ಮತ್ತೆ ಓದಿದೆ.

ಮೈಸೂರು　　　　ಮೈಸೂರು ನಾಗರಾಜಶರ್ಮ

## ಸೇಬು ಯಾವಾಗ ಬಂತು?

1989ರ ಮಾರ್ಚ್ 'ಕಸ್ತೂರಿಯಲ್ಲಿ ಸ್ಯಾಮ್ಯುಯೆಲ್ ಸ್ಪ್ರೋಕ್ಸ್ ಲೇಖನದಲ್ಲಿ ಅವರೇ ಭಾರತಕ್ಕೆ ಮೊಟ್ಟಮೊದಲಿಗೆ ಸೇಬನ್ನು ತಂದರು ಎಂದು ಹೇಳಲಾಗಿದೆ.

ಆದರೆ 1989 ಅಗಸ್ಟ್ ಸಂಚಿಕೆಯ 'ಫಲಶ್ರುತಿ' ಯಲ್ಲಿ ದಿ.ಡಾ.ಬಿ.ಜಿ.ಎಲ್.ಸ್ವಾಮಿಯವರು ಭಾರತಕ್ಕೆ ಮೊಗಲರ ಕಾಲದಲ್ಲಿ ಸೇಬು ಬಂತೆಂದು ಹೇಳಿದ್ದಾರಲ್ಲ? ಯಾವುದು ಸರಿ?

ಸಾಗರ ಅನುಸೂಯ ಜೆ.ಡಿ.

## ಯಾರು ಇವರು?

ಸಪ್ಟಂಬರ್ 89ರ ಪುಸ್ತಕ ಭಾಗದಲ್ಲಿ ಪ್ರಕಟವಾದ 'ಠಕ್ಕರು'ದಲ್ಲಿ ವಿಲಿಯಂ ಸ್ಯಾವೇಜ್ ಮುಂತಾದ ಹೆಸರುಗಳು ಬರುತ್ತವೆ. ಆದರೆ ಈ ವಿಲಿಯಂ ಯಾರು? ಲಾರ್ಡ್ ವಿಲಿಯಂ ಬೆಂಟಿಂಕ್‌ನು ಠಕ್ಕರ, ಸಂತಾಲರ ಹುಟ್ಟಡಗಿಸಿದನಲ್ಲ ಅವನೇ ಇವನೇ? ಅಲ್ಲದೆ, ಈ ಠಕ್ಕರು ಯಾಕೆ ಹೀಗಿದ್ದರು?

ಈ ಠಕ್ಕರು ಶಾಕ್ತರಿರಬಹುದೆ? ಅಘೋರಿಗಳಾಗಿರಬಹುದೆ? ಯಾಕೆಂದರೆ ಕಾಳಿ ಮಾತೆಯ ಆರಾಧನೆಯ ಹೆಸರಿನಲ್ಲಿ ಘೋರ ಕೃತ್ಯಗಳಲ್ಲಿ ತೊಡಗಿರುತ್ತಾರೆ ಶಾಕ್ತರು. ಇಂಥ ಜನ ಜಗತ್ತಿನ ಎಲ್ಲೆಡೆಗೂ ಬೇರೆ ಬೇರೆ ಹೆಸರಲ್ಲಿ ತುಂಬಿಕೊಂಡಿದ್ದಾರೆ.

ರಾಮದುರ್ಗ ಕಯಾದುಕುವರ

(ತಮ್ಮ ಊಹೆ ತಪ್ಪು. ವಿಲಿಯಂ ಸ್ಯಾವೇಜ್ ಈ ಕಾದಂಬರಿಯ ಕಥಾನಾಯಕ. ಆತನಿಗೂ ಲಾರ್ಡ್ ವಿಲಿಯಂ ಬೆಂಟಿಂಕ್‌ನಿಗೂ ಸಂಬಂಧವೇ ಇಲ್ಲ. ಅಲ್ಲದೆ ಆಗ ನಡೆದ ಘಟನೆಗಳನ್ನು ಯಥಾವತ್ತಾಗಿ ಬಳಸಿಕೊಂಡು ಬರೆದ ಕಾದಂಬರಿ ಇದು ಎಂಬುದು ತಮ್ಮ ಗಮನದಲ್ಲಿರುವುದು ಒಳಿತು. ಇನ್ನು ಕಾಳಿ ಪೂಜೆಯನ್ನು ಮಾಡುವವರೆಲ್ಲರೂ ಶಾಕ್ತರಲ್ಲ-ಶಾಕ್ತರಲ್ಲದವರೂ ಕಾಳಿ ಪೂಜಕರಾಗಿರುವುದುಂಟು. - ಸಂಪಾದಕ)

## ಬೇಟೆ

ಅಜ್ಜಂಪುರ ಜಿ. ಸೂರಿಯವರು ಅನುವಾದಿಸಿದ 'ಬೇಟೆ' ಉಸಿರು ಬಿಗಿ ಹಿಡಿದು ಓದುವಷ್ಟು ರೋಚಕವಾಗಿದೆ. ಮಾನವನಲ್ಲಿಲ್ಲದ ಒಮ್ಮತ ಪಕ್ಷಿಗಳಲ್ಲಿರುವುದು ಸ್ಪಷ್ಟವಾಗಿ ವ್ಯಕ್ತಗೊಳ್ಳುತ್ತದೆ. ಅಷ್ಟೇ ಅಲ್ಲ, ಹಗೆ-ದ್ವೇಷ-ಪ್ರತೀಕಾರಗಳ ಪ್ರತೀಕವಾದ ಮಾನವನ ಅವಗುಣಗಳು ಕೆಲವು ಪಕ್ಷಿಗಳಲ್ಲೂ ಇವೆ ಎಂಬ ನಗ್ನಸತ್ಯವನ್ನು ನೈಜವಾಗಿ ಈ ಕಥೆ ನಿರೂಪಿಸುತ್ತದೆ. ಕಥೆಯ ವಿಚಿತ್ರ ಪಕ್ಷಿಯು ವೆಂಕೂ ನಾಯ್ಕುನನ್ನು ಹಿಂಸಿಸಿ ಆಕ್ರಮಣ ಮಾಡುವ ಸನ್ನಿವೇಶ ಭಯಾನಕ.

ಬೆಂಗಳೂರು ಜಿ.ವಿ.ಪ್ರಭು

ತುಂಬ ಹೃದಯ ಸ್ಪರ್ಶಿ ಕಥೆಯಿದು.

ಚೊಳಚಗುಡ್ಡ ವಿದ್ಯಾನಂದ ಪೂಜಾರ
ಕುಕನೂರು ಹೊಳೆಬಸಯ್ಯ ವಸ್ತ್ರದ

## ನಾನೊಬ್ಬ ಸುಂದರ

ಸಪ್ಟಂಬರ್ ಸಂಚಿಕೆಯಲ್ಲಿ ಮೂಡಿ ಬಂದ ಹರಟೆ ನಾನೊಬ್ಬ ಸುಂದರ ನಿಜಕ್ಕೂ ಮನತಟ್ಟುವಂತಿತ್ತು. ಎಷ್ಟೇ ಕುರೂಪಿ ಇದ್ದರೂ ಕನ್ನಡಿಯ ಮುಂದೆ ನಿಂತು ನಾನೂ ಸುಂದರ ಎಂದು ಮುಖ ತೀಡಿಕೊಳ್ಳುವ ಅನೇಕರನ್ನು ನಿತ್ಯ ಕಾಣುತ್ತೇವೆ.

ಧಾರವಾಡ ವಾಣಿ

## ಕಣ್ಣೀರು

ಕಣ್ಣೀರಿನ ಬಗ್ಗೆ ಪ್ರಕಟವಾದ ಲೇಖನ ಓದಿದಾಗ ಕಣ್ಣಿನಿಂದ ಬರುವ ನೀರು ದುಃಖದ್ದೆಂಬ ಕಲ್ಪನೆ ದೂರಾಯಿತು.

ಬಮ್ಮನಹಳ್ಳಿ ಶಾಮಣ್ಣ

## ಬೆಳಕಿಂಡಿ

ಬೆಳಕಿಂಡಿಯಲ್ಲಿ ಪ್ರಕಟವಾಗುವ ಸುಭಾಷಿತಗಳು ಹಾಲುಜೇನಿನಷ್ಟೇ ಸಿಹಿಯಾದ ರಸಬಿಂದುಗಳಾಗಿರುತ್ತವೆ. ಅಲ್ಲದೆ ಅಷ್ಟೇ ವಿಚಾರ ಪೂರಿತವಾಗಿರುತ್ತವೆ.

ಧಾರವಾಡ ವಿ.ಎಸ್.ಕುಮಸಿ

# ಈ ಸಂಚಿಕೆಯಲ್ಲಿ



## ಪುಸ್ತಕ ವಿಭಾಗ

ವರ್ಷ: ೩೪ ಕಸ್ತೂರಿ ಸಂಚಿಕೆ: ೨

ಅಕ್ಟೋಬರ್ ೧೯೮೯

# ಸಿಹಿಯಾದ ವಿಷ

ಮಂಗಳಗೌರಿ

ಶಿಬಿಲಿ ಎಂಬ ಹೆಸರಿನ ಒಬ್ಬ ಪ್ರಸಿದ್ಧ ಸೂಫಿ ಸಂತರಿದ್ದರು. ಅವರು ಎಲ್ಲಿ ಹೋದರೂ ಜನ ಅವರನ್ನು ತಲೆಯ ಮೇಲೆ ಕೂಡಿಸಿಕೊಂಡು ಮೆರೆಸುತ್ತಿದ್ದರು. ಅವರ ಬಗೆಗೆ ಅಷ್ಟು ಪ್ರೀತಿ, ಭಕ್ತಿ, ಗೌರವ.

ಒಂದು ದಿನ ಶಿಬಿಲಿಯವರು ತಮ್ಮ ಗುರುಗಳನ್ನು ನೋಡಲು ಆಶ್ರಮಕ್ಕೆ ಹೋದಾಗ ಅಲ್ಲಿ ಧರ್ಮೋಪದೇಶ ನಡೆಯುತ್ತಿತ್ತು. ಧರ್ಮೋಪದೇಶವನ್ನು ಕೇಳಲು ಶಿಬಿಲಿಯವರ ಅನೇಕ ಸಹಪಾಠಿಗಳೂ ಭಕ್ತರೂ ಆಶ್ರಮದಲ್ಲಿ ಸೇರಿದ್ದರು. ಶಿಬಿಲಿಯವರನ್ನು ಕಾಣುತ್ತಲೇ ಅವರು ಪ್ರೇಮಾದರಗಳಿಂದ ಬರಮಾಡಿಕೊಂಡು, ''ತಮ್ಮ ದರ್ಶನದಿಂದ ನಾವು ಭಾಗ್ಯವಂತರಾದೆವು,'' ಎಂದು ಕೆಲವರೆಂದರೆ, ಮತ್ತೆ ಕೆಲವರು ''ತಮ್ಮ ದರ್ಶನ ಮಾತ್ರದಿಂದಲೇ ನಮ್ಮ ಕಣ್ಣುಗಳು ಪವಿತ್ರವಾಗುತ್ತವೆ,'' ಎಂದರು. ''ತಾವು ಈ ಭೂಮಿಯ ಮೇಲೆ ಮಾನವ ರೂಪ ಧರಿಸಿ ಬಂದಿರುವ ದೇವರು,'' ಎಂದು ಇನ್ನು ಕೆಲವರು ಹೊಗಳಿದರು.

ಶಿಬಿಲಿಯವರು ಉತ್ತರಿಸುವ ಮುನ್ನವೇ ಅವರ ಗುರುಗಳು ಕ್ರೋಧಾವೇಶದಿಂದ, ''ಈ ಶಿಬಿಲಿಯನ್ನು ಕೂಡಲೆ ಇಲ್ಲಿಂದ ಹೊರಕ್ಕೆ ಹಾಕಿ. ಈ ಕುಕರ್ಮಿ ಆಶ್ರಮದೊಳಗೆ ಹೇಗೆ ಪ್ರವೇಶಿಸಿದ?'' ಎಂದು ರೇಗಾಡಿದರು. ಆಗ ಶಿಬಿಲಿಯವರು ಸದ್ದುಗದ್ದಲವಿಲ್ಲದಂತೆ ಅಲ್ಲಿಂದ ಹೊರನಡೆದರು.

ಅಲ್ಲಿದ್ದವರೆಲ್ಲರೂ ಗುರುಗಳ ಈ ಮಾತುಗಳನ್ನು ಕೇಳಿ ಸ್ತಂಭೀಭೂತರಾದರು. ಪ್ರವ

ರ್ಧಮಾನಕ್ಕೆ ಬರುತ್ತಿರುವ ಶಿಷ್ಯನ ಗೌರವಾದರ, ಸನ್ಮಾನಗಳನ್ನು ಕಂಡು ಗುರುಗಳು ಸಹಿಸದವರಾಗಿದ್ದಾರೆ; ಆದುದರಿಂದ ತಮ್ಮ ಮನಸ್ಸಿನಲ್ಲಿ ತುಂಬಿ ತುಳುಕಾಡುತ್ತಿರುವ ಕ್ರೋಧ, ಕಶ್ಮಲಗಳನ್ನು ಈ ರೀತಿಯಲ್ಲಿ ಪ್ರಕಟಿಸುತ್ತಿದ್ದಾರೆ ಎಂದು ಬಗೆದರು.

ಕೊನೆಗೊಬ್ಬ ಭಕ್ತ ಧೈರ್ಯ ತಾಳಿ ಗುರುಗಳನ್ನು ಕುರಿತು, ''ಶಿಬಿಲಿಯವರೊಡನೆ ತಾವು ಈ ರೀತಿ ನಡೆದುಕೊಳ್ಳುವುದಕ್ಕೆ ಕಾರಣವೇನು? ಅವರು ತಮಗೆ ಬಗೆದಿರುವ ದ್ರೋಹವಾದರೂ ಏನು? ಯಾವ ಅಪರಾಧ ಅವರದು?'' ಎಂದು ಕೇಳಿಯೇಬಿಟ್ಟ.

ಅದಕ್ಕೆ ಗುರುಗಳು ಶಾಂತವದನರಾಗಿ, ''ಅಪರಾಧ ಶಿಬಿಲಿಯದಲ್ಲ, ನಿಮ್ಮದು. ನಿಮ್ಮ ಬುದ್ಧಿಹೀನ ವರ್ತನೆಯಿಂದಾಗಿಯೇ ನಾನು ಅವನೊಡನೆ ಕಠೋರವಾಗಿ ವರ್ತಿಸಬೇಕಾಯಿತು. ನೀವು ಅವನನ್ನು ಅಹಂಕಾರ ಹಾಗೂ ಪತನದ ಪ್ರಪಾತಕ್ಕೆ ದೂಡುತ್ತಿದ್ದೀರಿ. ಹೊಗಳಿ, ಹೊಗಳಿ ಅವನನ್ನು ಹೊನ್ನಶೂಲಕ್ಕೇರಿಸುತ್ತಿದ್ದೀರಿ. ಅವನೆದುರೇ ಅವನ ಪ್ರಶಂಸೆ, ಗುಣಗಾನ ಮಾಡುವುದರಿಂದ ಅವನು ದುರಂಹಕಾರಿಯಾಗುತ್ತಾನೆ. ಇದರಿಂದ ಅವನ ಚಾರಿತ್ರ್ಯ ಹೇಳಹೆಸರಿಲ್ಲದಂತೆ ನಾಶವಾಗುವುದು ಎನ್ನುವುದು ನಿಮಗೆ ತಿಳಿಯದೆ? ಪ್ರಶಂಸೆಯೆಂಬುದು ಸಿಹಿಯಾದ ವಿಷವಿದ್ದಂತೆ. ಇದು ನಮ್ಮ ದೇಹದ ನರನಾಡಿಗಳಲ್ಲಿ ಹರಿದಾಗ ನಾವು ಅನೇಕ ವರ್ಷಗಳಿಂದ ಕಷ್ಟಪಟ್ಟು ಸಾಧಿಸಿಕೊಂಡು ಬಂದಿರುವ ಜಪ-ತಪ, ತತ್ವ-ಸಿದ್ಧಿ, ಮಾಡಿರುವ ಯಶಸ್ಸು ಎಲ್ಲವೂ ಹಾಳಾಗುತ್ತದೆ. ಈ ಪತನ ಮಾರ್ಗದಿಂದ ಅವನನ್ನು ರಕ್ಷಿಸಲು ನಾನು ಕಠೋರವಾಗಿ ವರ್ತಿಸಬೇಕಾಯಿತೇ ಹೊರತು ನನಗೆ ಶಿಬಿಲಿ ನನ್ನ ಪ್ರಾಣಕ್ಕಿಂತಲೂ ಪ್ರಿಯ ಪಾತ್ರನಾದವನು,'' ಎಂದು ನುಡಿದರು.



## ವಿಧಿಯ ಕೈಗೊಂಬೆ

*ನೋಬುಂಗಾ ಎಂಬುವವನು ಒಬ್ಬ ಶೂರ ಜಪಾನಿ ಸೈನ್ಯಾಧಿಕಾರಿ. ಆತನ ಹತ್ತಿರ ಬಹು ಸಂಖ್ಯೆಯಲ್ಲಿ ಸೈನಿಕರಿರದಿದ್ದರೂ ಶತ್ರುಗಳ ಮೇಲೆ ದಂಡೆತ್ತಿ ಹೋಗಲು ಯೋಚಿಸಿದ. ಶತ್ರುವಿನ ಸೈನ್ಯ ಇವನ ಸೈನ್ಯಕ್ಕಿಂತ ಹತ್ತು ಪಟ್ಟು ದೊಡ್ಡದು. ಇವನ ಸೈನಿಕರಿಗೆ ಗೆಲ್ಲಲು ಸಾಧ್ಯವೆ ಎಂಬ ಶಂಕೆ. ನೋಬುಂಗಾನಿಗೆ ಗೆಲ್ಲುತ್ತೇನೆ ಎಂಬ ದೃಢ ನಂಬಿಕೆ.*

*ಹೀಗೆ ಹೋಗುತ್ತಿದ್ದಾಗ ಶಿಂಟೋ ದೇವಸ್ಥಾನದ ಮುಂದೆ ನಿಂತು ತನ್ನ ಸೈನಿಕರಿಗೆ, ''ನಾನು ಈ ದೇವಸ್ಥಾನಕ್ಕೆ ಹೋಗಿ ಒಂದು ನಾಣ್ಯವನ್ನು ಚಿಮ್ಮುವೆ. ತಲೆ ಬಿದ್ದಲ್ಲಿ ನಾವು ಗೆಲ್ಲುತ್ತೇವೆ, ಇಲ್ಲದಿದ್ದರೆ ಸೋಲುತ್ತೇವೆ. ವಿಧಿ ವಿಲಾಸದ ಕೈಗೊಂಬೆಗಳು ನಾವು,'' ಎಂದ ನೋಬುಂಗಾ.*

*ದೇವಸ್ಥಾನವನ್ನು ಪ್ರವೇಶಿಸಿ, ದೇವರಿಗೆ ಪ್ರಾರ್ಥನೆ ಸಲ್ಲಿಸಿ ನೋಬುಂಗಾ ಒಂದು ನಾಣ್ಯವನ್ನು ಚಿಮ್ಮಿದ. ತಲೆ ಬಿತ್ತು. ಅವನ ಸೈನಿಕರಿಗ ಉತ್ಸಾಹ ತುಂಬಿ ಬಂತು. ಯುದ್ಧದಲ್ಲಿ ಜಯಗಳಿಸಿದರು.*

*ಯುದ್ಧ ಮುಗಿದ ನಂತರ ನೋಬುಂಗಾನ ಆಪ್ತ ಗೆಳೆಯನೊಬ್ಬ ಆತನಿಗೆ ''ಈ ವಿಧಿ ನಿಯಮವನ್ನು ಯಾರಿಂದಲೂ ಬದಲಾಗಿಸಲು ಸಾಧ್ಯವಿಲ್ಲ,'' ಎಂದ.*

*''ಹೀಗೇನೂ?'' ಎನ್ನುತ್ತಾ ನೋಬುಂಗಾ ತಾನು ಚಿಮ್ಮಿದ ನಾಣ್ಯ ತೋರಿಸಿದ. ನಾಣ್ಯದ ಎರಡೂ ಕಡೆ ತಲೆಯ ಗುರುತೇ ಇತ್ತು.*

*– ''ಕಲಾ''*

# ತಾಂಬೂಲ ತಂಪು!

## ಬಂಡೀಹೊಳೆ ಶೇಖರ

ಭಾರತದಲ್ಲಿ ಅತ್ಯಂತ ವಾಂಛೆಯಿಂದ ತಾಂಬೂಲವನ್ನು ಬಳಸುತ್ತಾ ಬಂದಿದ್ದಾರೆ. ಇದು ಲಿಖಿತೇತಿಹಾಸದಷ್ಟು ಹಿಂದಿನದು.

ಎಲೆ ಅಡಕೆಗೆ ತಾಂಬೂಲ ಎಂದು ಕರೆಯುತ್ತಾರೆ. ಇದನ್ನು ಬಳಸುವಾಗ ಸುಣ್ಣ ಅಗ್ರಸ್ಥಾನ ಪಡೆಯುತ್ತದೆ.

ತಾಂಬೂಲಕ್ಕೆ ತುಂಬಾ ಪುರಾತನ ಸ್ಥಾನವಿದೆ. ಸಾಮಾಜಿಕ ಹಾಗೂ ಧಾರ್ಮಿಕ ಆಚಾರಗಳಲ್ಲಿ ಇದಕ್ಕೆ ಅಗ್ರಸ್ಥಾನವಿರುವುದು ಕಂಡು ಬಂದಿದೆ. ಮಂಗಳ ದ್ರವ್ಯಗಳಲ್ಲೊಂದಾದ ಇದರ ಬಳಕೆಯು ನಮ್ಮ ಜನರ ನಾಗರಿಕತೆಯಲ್ಲಿ, ಸಂಸ್ಕೃತಿಯಲ್ಲಿ ವಿಧ ವಿಧವಾದ ರೀತಿಯಲ್ಲಿ ಇದೆ. ಇದನ್ನು ಪೂಜಾ ಹಾಗೂ ಶೃಂಗಾರ ಸಾಧನವಾಗಿ ಬಳಸುವ ರೂಢಿ ಇಂದಿಗೂ ಇದೆ.

ಆರ್ಯರು ಭಾರತಕ್ಕೆ ಬಂದಮೇಲೆ ನಾಗ ಜಾತಿಯವರು ಇದರ ಬಳಕೆಗೆ ಬುನಾದಿ ಹಾಕಿದರು. ಪಾಂಡವರು 'ಅಶ್ವಮೇಧಯಾಗ'ಕ್ಕಾಗಿ ಇದನ್ನು ತರಿಸಿದರೆಂದು ಪ್ರತೀತಿ ಕೂಡ ಇದೆ.

ಇದು ಮಲಯದಿಂದ ಬಂದಿತೆಂದು ಕ್ರಿ.ಪೂ.600ರ ಹೊತ್ತಿಗೆ ಕಾಶಿಯಲ್ಲಿ ರಚಿತವಾದ 'ಸುಕೃತ ಸಂಹಿತೆ' ಎಂಬ ಆಯುರ್ವೇದ ಗ್ರಂಥದಲ್ಲಿ ಹಾಗೂ ಚರಕ, ಶುಶ್ರೂತರ ಗ್ರಂಥಗಳಿಂದ ತಿಳಿದು ಬರುತ್ತದೆ.

ಚಿತ್ರಕಲಾ ಕೌಶಲವನ್ನು ತಾಂಬೂಲದ ರಸ ಉಗಿಯುವುದರಲ್ಲಿ ಪ್ರದರ್ಶಿಸುತ್ತಿದ್ದುದು ಒಂದು ಕಾಲದಲ್ಲಿ ರೂಢಿಯಿತ್ತೆಂದು 'ದಶಕುಮಾರ ಚರಿತೆ'ಯಿಂದ ತಿಳಿದು ಬರುತ್ತದೆ. ತಾಂಬೂಲದ ಜೀರ್ಣಶಕ್ತಿ ಹೆಚ್ಚಿಸುತ್ತದೆ. ಆಮ್ಲತೆ ಕಡಿಮೆ ಮಾಡುತ್ತದೆ. ವಾತ ಪರಿಹಾರಿಯೂ ಕ್ರಿಮಿನಾಶಕವೂ ಕಫಹರವೂ ದುರ್ಗಂಧನಾಶಕವೂ ಕಷಾಯ ಗುಣವೂ ಸ್ವಚ್ಛಕಾರಿಯೂ ಉಷ್ಣಕಾರಿಯೂ ಕಟು ಮಧುರವೂ ಆದ ಪುಷ್ಟಿಕರ ವಸ್ತುವಿದು. ಇದನ್ನು ಬಳಸುವುದರಿಂದ ಬಾಯಿಗೆ ಕೆಂಪು ಮಧುರ ಸುಗಂಧ ವಾಸನೆಯೂ ಮನಸ್ಸಿಗೆ ಆಹ್ಲಾದವೂ ಮುಖಕ್ಕೆ ಕಾಂತಿಮಾಧುರ್ಯವೂ ಉಂಟಾಗುತ್ತದೆ.

ತಾಂಬೂಲ ಅಗಿಯುವುದರಿಂದ ಎಲೆಯು ದೇಹದಲ್ಲಿ ಶಾಖದ ಪ್ರಮಾಣವನ್ನು ಸಾಕಷ್ಟು ಹೆಚ್ಚಿಸುತ್ತದೆ. ಸುಣ್ಣದಿಂದ ತೇವವು ಆರುತ್ತದೆ. ಅಡಕೆಯಿಂದ ಹಲ್ಲು ವಸಡು ಮತ್ತು ಜಠರಗಳು ಗಟ್ಟಿಯಾಗುತ್ತವೆ.

ತಾಂಬೂಲದ ಜೊತೆ ಸ್ವಲ್ಪ ಸಕ್ಕರೆ, ಏಲಕ್ಕಿ, ಗುಲ್ಕಂದ, ಲವಂಗ, ಜಾಜಿಕಾಯಿ, ಪತ್ರೆ, ಕೊಬ್ಬರಿ ಮತ್ತು ಪರಿಮಳಗಳನ್ನು ಸೇರಿಸಿ ಬೀಡಾ ಎಂದು ಅಗಿಯುತ್ತಾರೆ. ಬೀಡಾ ಕಟ್ಟುವುದು ಒಂದು ಕಲೆಯಾಗಿ ಬೆಳದುಬಂದಿರುವುದು ಸುಸ್ಪಷ್ಟ. ಇದನ್ನು ಅಗಿಯುವಾಗ ಹಲವು ರಾಸಾಯನಿಕ ವಸ್ತುಗಳು ಪ್ರೋಟೀನ್, ಕೊಬ್ಬು, ಕೆಂಪು ಬಣ್ಣದ ಟ್ಯಾನಿಕ್ ವಸ್ತುಗಳು, ಆಲ್ಕೊಲಾಯಿಡ್ ಪಾಲಿಫೀನಾಲ್‌ಗಳು; ಕ್ಯಾಲ್ಸಿಯಂ, ತಾಮ್ರ ಲೋಹಗಳು ಮತ್ತು ವಿಟಾಮಿನ್ ಏ ದೇಹಕ್ಕೆ ಒದಗುತ್ತವೆ.

ತಾಂಬೂಲವನ್ನು ಕೆಲ ಕಾಲ ಜಗಿಯುವುದರಿಂದ ಹಲ್ಲುನೋವು ಹಿಡಿತಕ್ಕೆ ಬರುತ್ತದೆ. ಊಟವಾದ ಮೇಲೆ ಮಿತವಾಗಿ ಬಳಸುವುದರಿಂದ ಆರೋಗ್ಯಕ್ಕೆ ಒಳ್ಳೆಯದಾಗುವುದಾದರೂ ಅತಿಯಾದ ಸೇವನೆ ಮಾಡುವುದರಿಂದ ದುಶ್ಚಟಕ್ಕೆ ಬಲಿಯಾಗಿ ನಾಲಿಗೆಯ ರುಚಿ ಸಾಮರ್ಥ್ಯ ಕೆಡುವುದಲ್ಲದೆ ಕಾಲ ಗತಿಸಿದಂತೆ ಬಾಯಿಯ ಭಯಂಕರ ವ್ರಣ ಹಾಗೂ ಕ್ಯಾನ್ಸರ್ ರೋಗ ಬರುವ ಅಪಾಯ ಉಂಟು.

ಮೂತ್ರಜನಕಾಂಗ, ಮೂತ್ರಕೋಶ ಹಾಗೂ ಅದಕ್ಕೆ ಸಂಬಂಧಪಟ್ಟ ರೋಗವುಳ್ಳವರು ಇದರ ಸೇವನೆಯನ್ನು ನಿಷೇಧಿಸುವುದು ಉತ್ತಮ. ●

ಅನಿಸಿಕೆ

# ಸುಖ

ಕೆ. ಟಿ. ಗಟ್ಟಿ

ಸುಖವಾಗಿ ಜೀವಿಸಬೇಕೆಂಬ ಬಯಕೆಯಿಲ್ಲದವರು ಯಾರಾದರೂ ಇರಬಹುದೆ? ಯಾರೂ ಇರಲಿಕ್ಕಿಲ್ಲ. ಮನುಷ್ಯನಿಗೆ ಮಾತ್ರವೇ ಅಲ್ಲ, ಬೇಸಿಗೆಯಲ್ಲಿ ಕಲ್ಲಿನೆಡೆಯಲ್ಲಿ ಕುಳಿತುಕೊಳ್ಳುವ ಕಪ್ಪೆಗೆ, ಬೆಚ್ಚನೆಯ ಗೂಡು ಕಟ್ಟಿಕೊಳ್ಳುವ ಪಕ್ಷಿಗೆ, ಗವಿಯೊಳಗಿನ ಆರಾಮದಲ್ಲಿ ಮಲಗುವ ಮೃಗಕ್ಕೆ ಕೂಡ ಈ ಬಯಕೆಯಿದೆ. ಆದರೆ ಮೃಗ ಪಕ್ಷಿಗಳ ವಿಚಾರದಲ್ಲಿ ಸುಖದ ಬಯಕೆಯೆಂಬುದು ಭೌತಿಕವಾದ ಬಾಧೆಗಳಿಗೆ ಈಡಾಗದಂತೆ ತನ್ನನ್ನು ರಕ್ಷಿಸಿಕೊಳ್ಳುವುದು ಮತ್ತು ದೈಹಿಕ ಕಾಮನೆಗಳನ್ನು ಇಂಗಿಸಿಕೊಳ್ಳುವುದಷ್ಟೇ ಎಂದಾದರೆ, ಮನುಷ್ಯನ ವಿಚಾರದಲ್ಲಿ ಹಾಗಲ್ಲ. ಅವನ ಸುಖದ ಕಲ್ಪನೆಯು ಇದಮಿತ್ಥಂ ಎಂದು ಹೇಳಲಾಗದ ನೂರಾರು ಬಯಕೆಗಳ ಒಂದು ಕಗ್ಗಂಟು. ಬೆಚ್ಚನೆಯ ಮನೆಯಿರಲು, ಮೆಚ್ಚುವ ಹೆಂಡತಿಯಿರಲು, ಪ್ರೀತಿಸುವ ಮಕ್ಕಳು ಮರಿಯಿರಲು, ಸ್ವರ್ಗಕ್ಕೆ ಕಿಚ್ಚು ಹಚ್ಚು ಎಂದು ಒಬ್ಬ ಕವಿ ಹೇಳಿದ. ಆದರೆ ಮನುಷ್ಯನ ಬಯಕೆ ಇಷ್ಟಕ್ಕೆ ನಿಲ್ಲುವುದಿಲ್ಲ. ಕಾರಣ ಮೃಗಪಕ್ಷಿಗಳಂತೆ ಮನೆಯೆಂದರೆ ಹೀಗೆಯೆ ಇರುವಂಥದು, ಸಂಸಾರವೆಂದರೆ ಹೀಗೆಯೇ ಇರುವಂಥದು ಎಂದು ಮನುಷ್ಯನ ವಿಚಾರದಲ್ಲಿ ಹೇಳಲು ಸಾಧ್ಯವಿಲ್ಲ. ಮನುಷ್ಯನಿಗೆ ಮನೆ, ಹೆಂಡತಿ, ಮಕ್ಕಳು ಅವನ ಕಲ್ಪನೆಯಂತೆಯೇ ಇರಬೇಕು. ಬರೀ ಇರಲೊಂದು ಎಡೆ ಎಂಬುದಾದರೆ ಅವನಿಗೆ ಸಾಲದು. ಸುಖವನ್ನು ನೀಡುವಂಥ ಹತ್ತು ಹಲವು ವ್ಯವಸ್ಥೆಗಳು, ವಸ್ತುಗಳು, ವಾಹನಗಳು, ಆಳುಕಾಳುಗಳು ಇರಬೇಕು. ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ಸುಖಕ್ಕೆ ಕೊರತೆಯಾಗುತ್ತದೆ. ಆದುದರಿಂದ ಸುಖಕ್ಕೋಸ್ಕರ ಏನೇನು ಬೇಕು ಎಂಬ 'ಬೇಕುಗಳ' ಪಟ್ಟಿ ಎಂದೂ ಪೂರ್ಣವಾಗುವುದಿಲ್ಲ. ಅವುಗಳನ್ನು ಸಂಪಾದಿಸಿಕೊಳ್ಳಲು ಮನುಷ್ಯ ಮೊರೆಹೋಗುವ ಸಾಧನ ಹಣ. ಹಣದ ಸೃಷ್ಟಿಯಾಗಿರುವುದೇ ಅದಕ್ಕೆ; ಬೇಕೆನಿಸಿದುದನ್ನು ಪಡೆದುಕೊಳ್ಳುವುದಕ್ಕೆ. ಈ ಹಣದ ಮೂಲಕ ಮನುಷ್ಯ ತನಗೆ ಬೇಕಾದುದೆಲ್ಲವನ್ನೂ ಪಡೆದುಕೊಂಡಾದ ಮೇಲೆ ಕೂಡ ಎಂದೂ ಸಾಕು ಎನಿಸದಿರುವ ವಸ್ತುವೇ ಹಣ. ಬರೀ ಹಣಕ್ಕಾಗಿ ಹಣ.

ಸುಖವೇನು ಎಂಬುದರ ಕುರಿತು ಮನುಷ್ಯ ಹಲವು ಭ್ರಮೆಗಳನ್ನು ನಿರ್ಮಿಸಿಕೊಂಡಿರುತ್ತಾನೆ. ಅಪಾರದ್ರವ್ಯವನ್ನು ಹೊಂದಿರುವುದಷ್ಟೆ ಅವನಿಗೆ ಸುಖದಾಯಕವೆನಿಸುವುದಿಲ್ಲ. ಆ ಹಣದ ಮೂಲಕ ಅವನು ಅಧಿಕಾರವನ್ನು, ಅಂತಸ್ತನ್ನು ಸೃಷ್ಟಿಸಿಕೊಳ್ಳಲು ಬಯಸುತ್ತಾನೆ. ಅದರಲ್ಲಿ ಸುಖವಿದೆಯೆಂದು ಭ್ರಮಿಸುತ್ತಾನೆ. ಅರಮನೆ, ಅಂತಃಪುರ, ವಜ್ರವೈಢೂರ್ಯ, ಇತ್ಯಾದಿಗಳು ಸುಖವನ್ನು ತರುತ್ತವೆ ಎಂದು ಭ್ರಮಿಸುತ್ತಾನೆ. ಆದರೆ ಅದೆಲ್ಲ ಆದ ಮೇಲೂ ಧನದಾಹ ನಿಲ್ಲದೆ ಮುಂದುವರಿಯುತ್ತದೆ. ಮುಪ್ಪಡರಿದ ಮೇಲೂ, ರೋಗಗ್ರಸ್ತನಾಗಿ ದಿನಗಳನ್ನು ಎಣಿಸುತ್ತಾ ಮಲಗಿರುವಾಗಲೂ, ಲಕ್ಷಗಳನ್ನು ಕೋಟಿಗಳನ್ನಾಗಿಯೂ, ಕೋಟಿಗಳನ್ನು ಶತಕೋಟಿಗಳನ್ನಾ

ಗಿಯೂ ಮಾಡುವ ಪ್ರಯತ್ನ ಮುಂದುವರಿಯುತ್ತದೆ. ಒಂದು ಹಂತದ ಬಳಿಕ ಹಣ ಅರ್ಥಹೀನವೆನಿಸುತ್ತದೇನೋ ನಿಜ. ಆದರೆ ಆ ಬಳಿಕವೂ ಮನುಷ್ಯ ಹಣ ಕೂಡಿ ಹಾಕ-ಬ ವಿಪರ್ಯಾಸ.ಯಸುವುದು ಬದುಕಿನ ದೊಡ್ಡ

ಇಂಥ ಧನದಾಹದ ನೂರಾರು ಜನರು ನಮ್ಮ ಸುತ್ತಮುತ್ತ ಇದ್ದಾರೆ. ಕೋಟ್ಯ-ಧೀಶರು, ಆಗರ್ಭ ಶ್ರೀಮಂತರು ಎಂದು ಮುಂತಾಗಿ ಒಂದು ಬಗೆಯ ಗೌರವದಿಂದಲೇ ಇವರ ಬಗ್ಗೆ ಮಾತಾಡುತ್ತಾರೆ ಜನ. ಆ ಹಣದ ಬಹುಶಃಶ ಕಪ್ಪು ಹಣವೆಂದೂ ಜನಕ್ಕೆ ಗೊತ್ತು. ಅದರಲ್ಲಿ ಒಂದು ದೊಡ್ಡ ಭಾಗ ಉಪಯೋಗಕ್ಕೆ ಬೀಳದ ಧನ, ಚಲಾವಣೆಗೆ ಬಾರದ ಧನ ಎಂಬುದೂ ಜನಕ್ಕೆ ಗೊತ್ತು. ಆದರೂ ಹಣವೆಂದೊಡನೆ ಭಯ, ಭಕ್ತಿ,

ಈ ರೀತಿ ಹಣವನ್ನು ಕೂಡಿ ಹಾಕುವ ಗೀಳನ್ನು ಏನೆಂದು ಕರೆಯಬೇಕು? ನಿಸ್ಸಂದೇಹವಾಗಿಯೂ ಅದೊಂದು ರೋಗ. ಈ ರೀತಿ ಧನಸಂಗ್ರಹಕ್ಕೆ ಬದುಕನ್ನು ಮೀಸಲಿಡುವವರು ರೋಗಿಗಳು, ಮಾನಸಿಕ ರೋಗಿಗಳು. ಇಂಥವರನ್ನು ಮನ್ನಿಸುವ, ಭೋಪರಾಕ್ ಎನ್ನುವ ಪ್ರವೃತ್ತಿ ಬೆಳೆದಾಗ ಇಡೀ ಸಮಾಜ ರೋಗಗ್ರಸ್ತವಾಗುತ್ತದೆ. ಇಂಥ ಸ್ಥಿತಿ ಸೃಷ್ಟಿಯಾದಾಗ ಸಮಾಜ ಮಾಡಬೇಕಾದ ಕೆಲಸ - ಇದೊಂದು ರೋಗ ಎಂಬುದನ್ನು ರೋಗಿ-ಗಳಿಗೆ ಮನದಟ್ಟು ಮಾಡುವುದು; ಅವರನ್ನು ರೋಗ ಮುಕ್ತರನ್ನಾಗಿ ಮಾಡುವುದು. ಸಮಾಜವಾದೀ ಪ್ರಭುತ್ವದ ಜಗತ್ತಿನ ಸುಮಾರು ಅರ್ಧಭಾಗದಲ್ಲಿ ಇದನ್ನು ಶಸ್ತ್ರಕ್ರಿಯೆಯಿಂದ ಸಾಧಿಸಲಾಗಿದೆ. ಆದರೆ ಇದನ್ನು ಸಾಮಾಜಿಕವಾದ ಚಿಕಿತ್ಸಾ ಪದ್ಧತಿಯಿಂದ ಗುಣಪಡಿಸಲು ಸಾಧ್ಯವೆಂದು ನಂಬುತ್ತಾ ಬಂದವರು ನಾವು ಭಾರತೀಯರು. ಆದರೆ ಸುಖದ ಕುರಿತಾದ ಕಲ್ಪನೆ ದಿಕ್ಕುತಪ್ಪಿ, ಸುಖ ಮತ್ತು ಹಣ ಸಮಾನಾರ್ಥ ಪದಗಳೇನೋ ಎಂಬಂತಾಗಿರುವ ಈ ಸ್ಥಿತಿಯಲ್ಲಿ ಬದುಕಿನ ಮೌಲ್ಯಗಳ ಬಗ್ಗೆ ನಾವು ಪುನಃ ವಿವೇಚನೆ ನಡೆಸಬೇಕಾಗಿದೆ. ಇಲ್ಲವಾದರೆ ಯಾವುದನ್ನು ನಾವು ಸುಖವೆನ್ನುತ್ತೇವೋ ಅದು ಬೇಗನೆ ದುಃಖವನ್ನು ಎಳೆದು ತರುವುದು ಎಂಬುದರಲ್ಲಿ ಸಂದೇಹವಿಲ್ಲ. ●

---

*ಆ ಸುಡು ಬಿಸಿಲು ತಾಳಲಾರದೆ ಬಸ್ಸು ಏರಿ ಮನೆಯತ್ತ ಬರುತ್ತಿದ್ದೆ. ದಂತ ವೈದ್ಯಕೀಯ ಕಾಲೇಜು ಬಳಿಯಲ್ಲಿ ಎಂದಿನಂತೆ ಬಸ್ಸು ಸ್ವಲ್ಪ ಹೊತ್ತು ನಿಂತಾಗ ಕಿಟಕಿಯ ಮೂಲಕ ಸುತ್ತಮುತ್ತ ಕತ್ತು ಹೊರಳಿಸಿದೆ. ಒಬ್ಬಾಕೆ ತಾಯಿ ಮತ್ತು ಮಗು ಇತ್ತೀಚೆಗಷ್ಟೇ ನಿರ್ಮಿತವಾದ ಫುಟ್‌ಪಾತ್ ಮೇಲೆ, ಆ ಮಟಮಟ ಮಧ್ಯಾಹ್ನ ಗಾಢ ನಿದ್ರೆಯಲ್ಲಿ ಮುಳುಗಿದ್ದಾರೆ. ಮೈಮೇಲೆ ಒಂದು ತುಂಡು ಬಟ್ಟೆ ಕೂಡ ಇಲ್ಲದೆ ಫುಟ್‌ಪಾತ್ ಮೇಲೆ ನಿದ್ರಿಸುವುದೆಂದರೆ!*

*ಈ ಆಶ್ಚರ್ಯದೊಂದಿಗೆ, ಪ್ರಶ್ನೆಯೂ ನನ್ನ ಮನಸ್ಸಿನಲ್ಲಿ ಸುಳಿಯಿತು. ಅದೆಂದರೆ, ಹೊಟ್ಟೆ ತುಂಬಾ ಹಾಲು ಕುಡಿಸಿ, ತೊಟ್ಟಿಲಲ್ಲಿ ಮೆತ್ತೆಯ ಮೇಲೆ ಮಲಗಿಸಿ, ತೂಗಿ, ಜೋಗುಳ ಹಾಡಿದರೂ ನಮ್ಮ ಮಕ್ಕಳು ನಿದ್ರಿಸದೆ ಕಿರುಚುತ್ತವೆ. ಆದರೆ ಈ ಮಗು ತಾಯಿಯನ್ನಪ್ಪಿಕೊಂಡು ಬಿಸಿಲಿನ ದಾರಿಯಲ್ಲಿ ಓಡಾಡುವ ವಾಹನಗಳ ಪರಿವೆಯಿಲ್ಲದೆ ನಿದ್ರಿಸುತ್ತಿತ್ತು.*

*ಉದ್ಯಾನದ ಗಿಡಗಳಿಗೆ ಒಂದು ಹೊತ್ತು ನೀರೆರೆಯದಿದ್ದರೆ ಗಿಡಗಳು ಬಾಡುತ್ತವೆ. ಆದರೆ ಕಾಡುಗಿಡಗಳಿಗೆ ನೀರೆರೆಯುವ ಮಾತು ಬಿಡಿ, ನೀರಿಲ್ಲದಿದ್ದರೂ ಅವು ತಾವಾಗಿಯೇ ದಟ್ಟವಾಗಿ ಬೆಳೆಯುತ್ತವೆ. ಇದಲ್ಲವೇ ಸೃಷ್ಟಿಯ ವೈಚಿತ್ರ್ಯ!*

*ಹಾಗಾದರೆ ಆ ಮಗುವಿನ ನೋವನ್ನು ಮರೆಸಿದವರಾರು? ದೇವರೆ!? ಭಿಕಾರಿಗಳ-ಸಿರಿವಂತರ ನಡುವಿನ ಜೀವನದಲ್ಲಿ ಎಷ್ಟೊಂದು ವ್ಯತ್ಯಾಸ? ಒಂದು ವಿಚಾರವೆಂದರೆ, ಎಲ್ಲರಿಗೂ ಜೀವ ನೀಡಿದವನೊಬ್ಬನೇ, ಜೀವವೂ ಒಂದೊಂದೇ. ಆದರೆ ಜೀವನದ ರೀತಿ ಮಾತ್ರ ವಿಭಿನ್ನ! ಅಲ್ಲವೇ?*

*ಕೆ.ವ್ಹಿ.ವಿವೇಕಾನಂದ*



# ರಾಜೇಂದ್ರಕುಮಾರ

**1969**ರ ಎಪ್ರಿಲ್ 24ರಂದು ಅಂತಾರಾಷ್ಟ್ರೀಯ ಸುದ್ದಿಸಂಸ್ಥೆಯಾದ ರಾಯ್ಟರ್, ಭಾರತದ ಪ್ರಖ್ಯಾತ ನಟ ರಾಜೇಂದ್ರಕುಮಾರ ಹಾಗೂ ಅವನ ಪತ್ನಿ ಶುಕ್ಲಾ ಯುಗಾಂಡಾದ ಅರಣ್ಯಮಯ ಪರ್ವತಪ್ರದೇಶದಲ್ಲಿ ವಿಮಾನಾಪಘಾತಕ್ಕೀಡಾದರೆಂದೂ ಅಕ್ಕಪಕ್ಕದ ವಿಮಾನ ನಿಲ್ದಾಣ ಹಾಗೂ ಪರ್ಯಟನ ಕೇಂದ್ರಗಳಿಂದ ಅವರ ರಕ್ಷಣೆಗೆ ಎಲ್ಲ ಪ್ರಯತ್ನ ಮಾಡಲಾಗುತ್ತಿದೆಯೆಂದೂ ಸುದ್ದಿಯನ್ನು ಪ್ರಕಟಿಸಿತು. ಈ ವಿಮಾನಾಪಘಾತ ಸಂಭವಿಸಿದ್ದು ಹೇಗೆ? ರಾಜೇಂದ್ರಕುಮಾರ, ಅವನ ಪತ್ನಿ ಮತ್ತು ವಿಮಾನಚಾಲಕನಲ್ಲದೆ ಆ ವಿಮಾನದಲ್ಲಿದ್ದ ಇತರ ನಾಲ್ವರ ಜೀವವೂ ಹೇಗೆ ಉಳಿಯಿತು? ಎಂಬುದು ಕುತೂಹಲಕರವಲ್ಲದೆ ಮೇಲ್ನೋಟಕ್ಕೆ ಅಸಂಭವವೆಂದೇ ತೋರುತ್ತದೆ. ಆದರೆ ಬದುಕುಳಿದ ಜನರು

# ಅವಘಡದಲ್ಲಿ ಸಿಕ್ಕಾಗ.....

ಹೇಳಿದ ವಿವಗಗಳು ಸತ್ಯವಾದವುಗಳೆಂದು ಅವರನ್ನು ಪಾರು ಮಾಡಲು ಬಂದ ಜನರೂ ಹೇಳುತ್ತಾರೆ.

ರಾಜೇಂದ್ರಕುಮಾರ ತನ್ನೊಂದು ಚಿತ್ರದ ಬಿಡುಗಡೆಯ ಸಮಾರಂಭದಲ್ಲಿ ಪಾಲ್ಗೊಳ್ಳಲು ಯುಗಾಂಡಾಕ್ಕೆ ಹೋಗಿದ್ದ. ಎಪ್ರಿಲ್ 24ರಂದು ಆತ ಅಲ್ಲಿಯ ಕಂಪಾಲಾ ನಗರದ ನಿವಾಸಿಯಾದ ಭಾರತೀಯ ಮಿತ್ರನೊಬ್ಬನ ಒತ್ತಾಯದಿಂದ ಹೆಂಡತಿ, ಚಾಲಕ ಹಾಗೂ ಇತರ ನಾಲ್ವರೊಂದಿಗೆ ಒಂದೇ ಇಂಜನ್ ಉಳ್ಳ 'ಪೈಪರ್' ವಿಮಾನದ ಮೂಲಕ ಸಮೀಪದ ಮರ್ಚಿಸನ್ ಜಲಪ್ರಪಾತವನ್ನು ನೋಡಲು ಹೋದ. ಆ ಪ್ರದೇಶ ನೀಲನದಿಯಲ್ಲಿದ್ದು ಅದನ್ನು ಇಡಿ ಆಫ್ರಿಕದ ಪ್ರೇಕ್ಷಣೀಯ ಸ್ಥಳಗಳಲ್ಲಿ ಅತಿ ಸುಂದರವೆಂದು ಪರಿಗಣಿಸಲಾಗಿದೆ. ಈ ಪ್ರದೇಶವನ್ನು ಸುತ್ತಾಡಿದ ಬಳಿಕ ಈ ತಂಡ ಸಂಜೆ ತಾನು ಬಂದ ವಿಮಾನದಿಂದಲೇ ಮರಳಿ ಹೊರಟಿತು.

ಸುಮಾರು 10 ನಿಮಿಷದ ಬಳಿಕ ವಿಮಾನದ ಇಂಜಿನ್ ಕೆಟ್ಟಿದೆಯೆಂದು ಚಾಲಕ ಘೋಷಿಸಿದ.

"ಮುಂದೆ.....?" ಆರು ಮಂದಿ ಪ್ರವಾಸಿಗರು ಒಟ್ಟಿಗೇ ಕೇಳಿದರು.

"ನಾವು ಈ ವಿಮಾನವನ್ನು ಇಲ್ಲೇ ಎಲ್ಲಾದರೂ ಇಳಿಸಿ ಬಿಡಬೇಕಾಗುವುದು," ಚಾಲಕ ಹೇಳಿದ.

ಈ ನಡುವೆ ವಿಮಾನದ ಏಕಮಾತ್ರ ಇಂಜಿನ್ ಸ್ತಬ್ಧವಾಯಿತು.

"ಆದರೆ ನೀನು ವಿಮಾನವನ್ನು ಇಳಿಸುವುದಾದರೂ ಎಲ್ಲಿ? ಕೆಳಗೆ ಎಲ್ಲೆಲ್ಲೂ ಕಾಡೇ ಕಾಡು" ಒಬ್ಬ ಸಂಗಾತಿ ಕೂಗಿದ.

"ಅದೇನೋ ನಾನರಿಯೆ..... ಇದೀಗ ತಾನಾಗಿಯೇ ಗೊತ್ತಾಗುವುದು."

ವಿಮಾನ ಒಂದೆ ಸಮನೆ ಇಳಿಯುತ್ತ ಹೋಯಿತು. ಚಾಲಕ ಅದನ್ನು ಎಂತಾದರೂ ನೇರವಾಗಿಡಲು ಪ್ರಯತ್ನಿಸುತ್ತಿದ್ದ. ಆರೂ ಜನ ಪ್ರವಾಸಿಗರು ತಮ್ಮ ತಮ್ಮ ಸೀಟಿನಲ್ಲಿ ಕುಳಿತು ವಿಮಾನ ನೆಲಕ್ಕಪ್ಪಳಿಸುವ ಹಾಗೂ ತಾವು ಸಾಯುವ ದಾರಿಯನ್ನೇ ಕಾಯುತ್ತಿದ್ದರು.

ಈ ಎಲ್ಲ ಘಟನೆಗಳೂ ಸುಮಾರು ಒಂದೇ ನಿಮಿಷದ ಅವಧಿಯಲ್ಲಿ ನಡೆದು ಹೋದವು. ಆಗಲೇ ತಾನು ಕುಳಿತ ಭಾಗ ಒಂದು ದಿಣ್ಣೆಗೆ ಡಿಕ್ಕಿ ಹೊಡೆಯಿತೆಂದೂ ಯಾವುದೋ ವಸ್ತು (ಮುಂದೆ ಅದು ವಿಮಾನದ ಒಂದು ಚಕ್ರವೆಂದು ತಿಳಿಯಿತು.) ಮುರಿದು ಗಾಳಿಯಲ್ಲಿ ಹಾರಿಹೋಯಿತೆಂದೂ ರಾಜೇಂದ್ರಕುಮಾರನಿಗೆ ಭಾಸವಾಯಿತು. ಜತೆಗೇ, ವಿಮಾನ ಯಾವುದೋ ವಸ್ತುವಿನಲ್ಲಿ ಹೂತು ಹೊರಳಾಡಿದಂತಾಯಿತು.

ಇಷ್ಟೆಲ್ಲ ಆದ ಬಳಿಕವೂ ತಾವು ಬದುಕಿದ್ದೇವೆಂದು ಪ್ರವಾಸಿಗರಿಗೆ ಖಚಿತವಾಯಿತು. ಯಾರಿಗಾದರೂ ಪೆಟ್ಟಾಗಿದೆಯೆ? ಇಲ್ಲವೆ? ಎಂದು ಗಮನಿಸಲೂ ಸಾಧ್ಯವಾಗಲಿಲ್ಲ. ಆಗಲೇ ಚಾಲಕ ತನ್ನ ಹತ್ತಿರದ ಬಾಗಿಲು ತೆರೆಯಲು ಪ್ರಯತ್ನಿಸುವುದನ್ನು ಕಂಡರ

ವರು. ಆದರೆ ಈ ಬಾಗಿಲು ದಿಣ್ಣೆಯ ಇಳಿಜಾರಿಗೆ ಬಡಿದು ಹಾಳಾಗಿದ್ದುದರಿಂದ ತೆರೆಯುತ್ತಲೇ ಇರಲಿಲ್ಲ.

"ಎರಡನೇ ಬಾಗಿಲು ತೆರೆಯಿರಿ..... ಬೇಗ.....!" ಎಂದು ಕೂಗಿದ ಚಾಲಕ. ಈ ಬಾಗಿಲು ರಾಜೇಂದ್ರಕುಮಾರನ ಬಲಗಡೆಗೆ ಇತ್ತು. ಆತ ಎದ್ದು ಅದನ್ನು ತೆರೆದ. ಉಳಿದವರು ಹೊರಬರುವ ಮೊದಲೇ ಚಾಲಕ ಅಲ್ಲಿಗೆ ಬಂದು ಹೊರ ಜಿಗಿದ. ಜತೆಗೇ ಓಡುತ್ತೋಡುತ್ತ, "ಎಲ್ಲರೂ ಬೇಗ ಕೆಳ ಬಂದು ಓಡಿರಿ...." ಎಂದು ಕೂಗಿದ. ವಿಮಾನದ ಟ್ಯಾಂಕು ಸಿಡಿದು ವಿಮಾನಕ್ಕೆ ಬೆಂಕಿ ಹತ್ತುವ ಸಂಭವವಿದೆಯೆಂದು ಚಾಲಕ ಅರಿತಿದ್ದ.

ಆದರೆ ಆಶ್ಚರ್ಯವೆಂಬಂತೆ ಟ್ಯಾಂಕು ಸಿಡಿಯಲೇ ಇಲ್ಲ. ರಾಜೇಂದ್ರ ಹಾಗೂ ಅವನ ಹೆಂಡತಿ ಸಮಾಧಾನದ ನಿಟ್ಟುಸಿರುಬಿಟ್ಟರು.

ಈ ಸಂತೋಷ ಕ್ಷಣಿಕವಾಗಿತ್ತು. ಏಕೆಂದರೆ ತಾವು ದಿಣ್ಣೆಯೊಂದರ ಮೇಲ್ಭಾಗದಲ್ಲಿದ್ದೇವೆಂದೂ ಕೆಳಗೆ ಮುಳ್ಳುಕಂಟಿಗಳು ತುಂಬಿದ ಭಯಂಕರ ಕಾಡು ಹಬ್ಬಿದೆಯೆಂದೂ ಅದರ ಮೂಲಕ ದಾರಿ ಮಾಡಿಕೊಂಡು ಪಾರಾಗುವುದು ಬಲುಕಷ್ಟವೆಂದೂ ಅವರಿಗೆ ಮನದಟ್ಟಾಯಿತು. ಜತೆಗೆ ಸಂಜೆಯ ಕತ್ತಲೂ ಪಸರಿಸುತ್ತಿತ್ತು. ದೂರದಲ್ಲಿ ಕಾಡುಪ್ರಾಣಿಗಳ ಕೂಗು ಕೇಳಿ ಬರುತ್ತಿತ್ತು.

ವಿಮಾನದ ರೇಡಿಯೋ ಟ್ರಾನ್ಸಮೀಟರ್ ಈಗಲೂ ಸುಸ್ಥಿತಿಯಲ್ಲಿತ್ತು. ಚಾಲಕ ಅದರ ಮೂಲಕ ಅಕ್ಕಪಕ್ಕದ ಯಾವುದಾದರೂ ಪ್ರದೇಶದ ಸಂಪರ್ಕ ಪಡೆಯಲು ಯತ್ನಿಸಿದ. ಮುರಿದ ಇಂಜನ್ನಿನಿಂದಾಗಿ ಬ್ಯಾಟರಿ ಕೂಡ ದುರ್ಬಲವಾಗಿತ್ತು. ಹೀಗಾಗಿ ಆ ದಿಣ್ಣೆಯ ಮೇಲೆ ಕುಳಿತು ಕಾಯುವುದೊಂದೇ ಅವರಿಗಿದ್ದ ಮಾರ್ಗವಾಗಿತ್ತು.

ಬಹುಬೇಗ ರಾತ್ರಿಯಾಯಿತು. ಬೆಳದಿಂಗಳ ರಾತ್ರಿಯಾದ್ದರಿಂದ ಸುತ್ತಲೂ ಸಾಕಷ್ಟು ದೂರದವರೆಗೆ ಕಾಣಿಸುತ್ತಿತ್ತು. ಅವರು ಹಸಿವು ನೀರಡಿಕೆಯಿಂದ ಬಳಲಿ ದಿಣ್ಣೆಯ ಮೇಲೆ ಒರಗಿದ್ದಾಗಲೇ ಚಾಲಕ ದೂರದಲ್ಲಿ ಕಪ್ಪುಮೋಡದಂತಿದ್ದ ವಸ್ತುವೊಂದು ತಮ್ಮತ್ತ ಬರುವುದನ್ನೂ ಕಂಡ. ತುಸು ಹೊತ್ತಿನಲ್ಲೇ ಆ ಕಪ್ಪುಮೋಡ ಹತ್ತಿರ ಬಂದಾಗ ಅದು ಕಾಡಾನೆಗಳ ಗುಂಪೆಂದು ತಿಳಿಯಿತು. ಅವುಗಳ ದಾಳಿಯಿಂದ ಪಾರಾಗಲು ವಿಮಾನದೊಳಗೆ ಕುಳಿತುಕೊಳ್ಳಬೇಕೆಂದು ಆತ ಹೇಳಿದ. ಆದರೆ ಒಳಸೇರಿದರೂ ಲಾಭವೇನು? ಆ ಪುಟ್ಟ ಪೈಪರ್ ವಿಮಾನವನ್ನು ಪ್ರವಾಸಿಗರ ಸಮೇತ ಕೆಳಗಿನ ಕೊಳ್ಳಕ್ಕೆ ತಳ್ಳಲು ಒಂದು ಪುಟ್ಟ ಆನೆ ಸಾಕು. ಈಗೇನು ಮಾಡಬೇಕು?

ಕಾಡು ಪ್ರಾಣಿಗಳು ಬೆಂಕಿ ಹಾಗೂ ಬೆಳಕಿಗೆ ಹೆದರುತ್ತವೆಂದು ಅದೇ ವೇಳೆ ಯಾರಿಗೋ ನೆನಪಾಯಿತು. ಬೆಂಕಿಯನ್ನು ಆ ಕಾಡಿನಲ್ಲಿ ಉರಿಸುವಂತಿಲ್ಲ. ಏಕೆಂದರೆ ವಿಮಾನ ಮುರಿದಿದ್ದರಿಂದ ನೆಲದ ಮೇಲೆ ಪಸರಿಸಿದ ಪೆಟ್ರೋಲಿನಿಂದಾಗಿ ಇಡೀ ಕಾಡಿಗೇ ಬೆಂಕಿ ಹತ್ತುವ ಸಂಭವವಿತ್ತು. ಮುರಿದ ವಿಮಾನದ ಹೆಡ್‌ಲೈಟ್‌ಅನ್ನು ಉರಿಸಬೇಕೆಂದರೆ ಅದು ವಿಮಾನದ ಮತ್ತೊಂದು ಬದಿಯಲ್ಲಿತ್ತು. ಸುದೈವದಿಂದ ವಿಮಾನದ ಹಿಂಬದಿಯ ಕೆಂಪು ದೀಪವೂ ಕೆಲಸ ಮಾಡುವಂತಿತ್ತು. ಚಾಲಕ ಅದನ್ನೇ ಬಳಸಿದ. ಅದರ ದಿಕ್ಕನ್ನು ಆನೆಗಳ ಗುಂಪಿನತ್ತ ತಿರುಗಿಸಿದ. ಆನೆಗಳು ಆ ಕೆಂಪು ದೀಪ ಕಂಡು ಗಕ್ಕನೆ ನಿಂತವು. ಮತ್ತೆ ಹಿಂದೆ ತಿರುಗಿ ಹೊರಟು ಹೋದವು. ರಾತ್ರಿ ವೇಳೆ ಆನೆಗಳ ಇನ್ನೊಂದು ತಂಡವೂ ಹತ್ತಿರ ಬಂದಾಗ, ಇದೇ ಉಪಾಯದಿಂದ ಅದನ್ನು ಹಿಮ್ಮೆಟ್ಟಿಸಲಾಯಿತು.

ಬೆಟ್ಟದ ಕೆಳಗಿನ ಘಟ್ಟದ ಅಡಿಯಲ್ಲಿ ಬಹುದೂರ ಒಂದು ಹಳ್ಳಿ ಕಾಣಿಸುತ್ತಿತ್ತು.

ಅಲ್ಲಿಯ ಜನರ ಗಮನ ಸೆಳೆಯಲು ಅವರು ವಿಮಾನವನ್ನೆಳೆದು ಅದರ ಹೆಡ್‌ಲೈಟನ್ನು ಆ ಹಳ್ಳಿಯ ದಿಕ್ಕಿಗೆ ತಿರುಗಿಸಲು ಯತ್ನಿಸಿದರೂ ಆ ವಿಮಾನದ ಒಂದು ರೆಕ್ಕೆ ಮಣ್ಣಿನೊಳಗೆ ಹೂತುಹೋಗಿದ್ದುದರಿಂದ ಸಾಧ್ಯವಾಗಲಿಲ್ಲ. ಇದರಿಂದ ಮುರಿದ ವಿಮಾನ ಜಾರಿ ಕೆಳಗಿನ ಕೊಳ್ಳಕ್ಕೆ ಬೀಳುವಂತಿಲ್ಲವೆಂಬುದೊಂದೆ ಅವರಿಗಾದ ಸಮಾಧಾನ. ಆಗ, ಅವರು ಸೊಳ್ಳೆಗಳಿಂದ ಪಾರಾಗಲು ಎಲ್ಲ ಕಿಡಕಿಗಳನ್ನೂ ಮುಚ್ಚಿಕೊಂಡು ವಿಮಾನದ ಒಳಗೆ ಕುಳಿತರು. ಆದರೆ ಇದರಿಂದ ಸೆಕೆ ಹೆಚ್ಚಿ ನೀರಡಿಕೆ ತೀವ್ರವಾಯಿತು. ಬೆವರಿನಿಂದ ಮೈ ತೊಯ್ದಿತು. ಆಗಲೇ ಹೊರಗೆ ಚಾಲಕನ ಸಂತಸ ತುಂಬಿದ ಧ್ವನಿ ಕೇಳಿಸಿತು...

ಆರೂ ಮಂದಿ ಹೊರ ಬಂದರು. ಚಾಲಕ ಅವರಿಗೆ ವಿಮಾನ ತೋರಿಸಿ, "ನೋಡಿ, ಎಲ್ಲೆಲ್ಲ ಇಬ್ಬನಿ ಬಿದ್ದಿದೆ. ಇದನ್ನು ನೆಕ್ಕಿ ನೀರಡಿಕೆ ಹಿಂಗಿಸಿಕೊಳ್ಳಬಹುದು," ಎಂದ.

ಅತ್ತ ಮುಖ್ಯ ಕೇಂದ್ರದಲ್ಲಿ ಗಾಬರಿಯುಂಟಾಗಿತ್ತು. ವಿಮಾನ ಸಂಜೆ 6-30ರೊಳಗೆ ತಲುಪಬೇಕಿತ್ತು. ಆದರೆ ರಾತ್ರಿ 11 ಆದರೂ ಅದು ಬಾರದಿದ್ದಾಗ ಎಲ್ಲರೂ ಚಿಂತಾಕ್ರಾಂತರಾದರು. ಈ ನಡುವೆ ಅದನ್ನು ಹುಡುಕಲು ಇನ್ನೊಂದು ವಿಮಾನವನ್ನು ಕಳುಹಿಸಲಾಗಿತ್ತು. ಆ ವಿಮಾನ ಮಧ್ಯ ರಾತ್ರಿಯ ವೇಳೆ ಈ ಪ್ರದೇಶಕ್ಕೆ ತಲುಪಿತು. ಆಕಾಶದಲ್ಲಿ ವಿಮಾನದ ಸದ್ದು ಕೇಳಿ ಮುರಿದು ಬಿದ್ದ ವಿಮಾನದ ಚಾಲಕ ತನ್ನ ವಿಮಾನದ ಟ್ರಾನ್ಸಮೀಟರಿನ ಮೂಲಕ ಅವನನ್ನು ಸಂಪರ್ಕಿಸಿ ತಮ್ಮ ದುಃಸ್ಥಿತಿಯನ್ನು ವಿವರಿಸಿದ.

"ಚಿಂತಿಸಬೇಡಿ, ನಾನೀಗಲೇ ಮರಳಿ ರಕ್ಷಣಾ ತಂಡವನ್ನು ಕಳುಹಿಸುತ್ತೇನೆ."

ನಿಲ್ದಾಣಕ್ಕೆ ಮರಳಿ ಆತ ಎರಡು ಲ್ಯಾಂಡ್ ರೋವರ್ ಗಾಡಿಗಳನ್ನು ಒಂದು ದೊಡ್ಡ ನೌಕೆಯಲ್ಲಿರಿಸಿ ನೈಲ್ ನದಿಯ ಮತ್ತೊಂದು ದಡಕ್ಕೆ ಕಳುಹಿಸಿದ. ಅಲ್ಲಿಂದ ಅಪಘಾತ ಸಂಭವಿಸಿದ ಪ್ರದೇಶದ ವರೆಗೆ ದಾರಿ ಮಾಡಬೇಕಿತ್ತು. ವಿಮಾನ ಮೇಲಿಂದ ಹಾರುತ್ತ ಈ ತಂಡಕ್ಕೆ ದಾರಿತೋರಿಸುತ್ತಿತ್ತು.

ಈ ತಂಡ ರಾತ್ರಿ 2-30ಕ್ಕೆ ಅಪಘಾತದ ಸ್ಥಳ ತಲುಪಿತು. ಆ ಜನ ದಿಣ್ಣೆಯನ್ನೇರುವುದನ್ನು ಕಂಡ ಮುರಿದ ವಿಮಾನದ ಚಾಲಕ ತನ್ನ ಸಂಗಾತಿಗಳಿಗೆ, "ಹೂಂ.. ಎಲ್ಲರೂ ವಿಮಾನದೊಳಗೆ ಕುಳಿತುಕೊಳ್ಳಿರಿ," ಎಂದ.

ವಿಮಾನದೊಳಗೆ ಬಂದು ಚಾಲಕ, "ಸುತ್ತಮುತ್ತಲಿನ ಕಾಡುಗಳಲ್ಲಿ ಅಸಂಖ್ಯಾತ ಹೆಬ್ಬಾವುಗಳೂ ವಿಷಭರಿತ ಸರ್ಪಗಳೂ ಇವೆ," ಎಂದ. ಎಲ್ಲರಿಗೂ ಆಶ್ಚರ್ಯವಾಯಿತು. ಏಕೆಂದರೆ 9 ಗಂಟೆಗಳಗಳ ಈ ಅವಧಿಯಲ್ಲಿ ಅವರಿಗೆ ಒಂದಾದರೂ ಹೆಬ್ಬಾವು ಕಾಣಸಿಕ್ಕಿರದಿದ್ದುದು. ಅವರ ಸುದೈವವೇ ಎನ್ನಬೇಕು.

ವಿಮಾನದೊಳಗೆ ಬಂದ ರಕ್ಷಣಾ ತಂಡದ ಮುಖಂಡ, "ಈಗ ನಿಮಗೇನು ಬೇಕು? ನೀರೋ ಬ್ರಾಂಡಿಯೋ," ಎಂದು ಕೇಳಿದ.

"ಬ್ರಾಂಡಿ," ಎಂದ ರಾಜೇಂದ್ರಕುಮಾರ.

ಈ ರೀತಿ ಅವರೆಲ್ಲರ ಜೀವ ಉಳಿಯಿತು.

ಆ ರಾತ್ರಿ ಅವರೆಲ್ಲರನ್ನೂ ಮರ್ಚಿಸನ್ ಜಲಪ್ರಪಾತದ ಹತ್ತಿರದ 'ಪಾರಾಲಾಜ್' ಹೋಟೆಲಿಗೆ ತಲುಪಿಸಲಾಯಿತು. ಬೆಳಗಾಗುವ ಮೊದಲೇ ಅವರಿಗೆ ಒಳ್ಳೇ ಉಪಾಹಾರ ದೊರೆಯಿತು. ಮುಂಜಾನೆ ನೂರಾರು ಜನ ಮಿತ್ರರೂ ಸಹೋದ್ಯೋಗಿಗಳೂ ಅವರಿಗೆ ಶುಭಾಶಯ ಅರ್ಪಿಸಲು ನೆರೆದಿದ್ದರು. ಆ ರಾತ್ರಿ ಈ ಏಳು ಮಂದಿಯ ಜೀವ ಉಳಿದದ್ದೇ ಒಂದು ಪವಾಡವೆಂದು ಎಲ್ಲರೂ ಭಾವಿಸಿದರು.

ವಾಸ್ತವವಾಗಿ ಕೆಲ ಭಾರತೀಯ ಚಿತ್ರಗಳಲ್ಲಿ ಇಂಥ ಅವಾಸ್ತವ ಘಟನೆಗಳು ಕಾಣಿಸಿಕೊಳ್ಳುವುದುಂಟು. ನಟನ ವಾಸ್ತವಿಕ ಜೀವನದಲ್ಲೂ ಇಂಥ ಒಂದು ಘಟನೆ ನಡೆದೀತೆಂದು ಯಾರುತಾನೆ ಊಹಿಸಬಲ್ಲರು! ●

*(ಹಿಂದಿಯಿಂದ)*

# ಸ್ವಿಟ್ಜರ್‌ಲಂಡ್

ಅನಂತ ಜ್ಯೋತಿಷಿ, ಬಿಣಗಾ

ಆಧುನಿಕ ಸುಖ ಸೌಲಭ್ಯ ಸೌಕರ್ಯಗಳಿಂದ ಸುಸಂಪನ್ನವಾದ ಸ್ವಿಟ್ಜರಲಂಡ್ ಎಂದಾಕ್ಷಣ ಗಡಿಯಾರಗಳ ನೆನಪು ಬಂದೇ ಬರುತ್ತದೆ. ಯುರೋಪಿನ ಈ ಚಿಕ್ಕ ದೇಶವನ್ನು ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ಆಸ್ಟ್ರಿಯಾ ಮತ್ತು ಇಟಲಿಗಳು ಸುತ್ತುವರಿದಿವೆ. ಈ ದೇಶ 42000 ವರ್ಗ ಕಿಲೋಮೀಟರುಗಳಷ್ಟು ವಿಸ್ತಾರವಿದ್ದು ಅಲ್ಲಿನ ಜನಸಂಖ್ಯೆ ಸುಮಾರು 70 ಲಕ್ಷದಷ್ಟು. ಈ ದೇಶದ ರಾಜಧಾನಿ ಬರ್ನ್. ಅತ್ಯಾಧುನಿಕ ವ್ಯವಸ್ಥೆಗಳಿಂದ ಕೂಡಿದ ಜ್ಯೂರಿಕ್ ರೈಲು ನಿಲ್ದಾಣ ಪ್ರೇಕ್ಷಣೀಯ ಸ್ಥಳಗಳಲ್ಲೊಂದು.

ಆ ನಿಲ್ದಾಣದ ಮೇಲೆ ದೊಡ್ಡ ಫಲಕವಿದ್ದು ಅದರಲ್ಲಿ ಹೋಟೆಲು ಹೆಸರುಗಳನ್ನೂ ಅಲ್ಲಿಯ ಕೋಣೆಗಳ ವಿವರಣೆ, ಬಾಡಿಗೆ ಇತ್ಯಾದಿಗಳನ್ನೂ ಬರೆಯಲಾಗಿದೆ. ಒಂದು ವೇಳೆ ಯಾವುದೊಂದು ಹೋಟೆಲಿನ ಹೆಸರಿನ ಮುಂದೆ ಕೆಂಪು ದೀಪ ಉರಿಯುತ್ತಿದ್ದರೆ ಆ ಹೋಟೆಲಿನಲ್ಲಿ ಸ್ಥಳಾವಕಾಶವಿಲ್ಲವೆಂದೂ ಹಸಿರು ದೀಪ ಉರಿಯುತ್ತಿದ್ದರೆ ಅಲ್ಲಿ ಕೋಣೆಗಳು ಲಭ್ಯವಿಯೆಂದೂ ಅರ್ಥ. ಫಲಕ ನೋಡಿ ಹೋಟೆಲನ್ನು ಆರಿಸಿಕೊಂಡು, ಅಲ್ಲಿಗೆ ಫೋನು ಮಾಡಿ ಕೋಣೆಯನ್ನು ಗೊತ್ತುಪಡಿಸಿಕೊಳ್ಳಬಹುದು. ಅಲ್ಲದೆ ಫೋನಿನ ಮೂಲಕವಾಗಿಯೆ ಅದರ ಮಾರ್ಗವನ್ನು ತಿಳಿದುಕೊಂಡು ಎರಡು ಗಂಟೆಯ ಒಳಗೆ ಅಲ್ಲಿಗೆ ತಲುಪಬಹುದು. ಸಾಮಾನ್ಯವಾಗಿ ಅಲ್ಲಿ ಎಲ್ಲರಿಗೂ ಇಂಗ್ಲೀಷ್ ಬರುತ್ತಿದ್ದರೂ ಸ್ಥಳೀಯ ಭಾಷೆಗಳಾದ ಸ್ವಿಸ್ ಹಾಗೂ ಜರ್ಮನ್ ಭಾಷೆಗಳಿಗೇ ವ್ಯವಹಾರದಲ್ಲಿ ಆದ್ಯ ಪ್ರಾಶಸ್ತ್ಯ.

ನಿಲ್ದಾಣ ಹಾಗೂ ವಿಸ್ತಾರವಾದ ರಾಜಬೀದಿಯ ಮಧ್ಯ ವಿಶಾಲವಾದ ಭೂಗತ ಮಾರುಕಟ್ಟೆಯಿದೆ. ಅಲ್ಲಿ ಸ್ವಯಂಚಾಲಿತ ಯಂತ್ರಗಳನ್ನು ಕೂಡಿಸಲಾಗಿದೆ. ತಂಪು



ಲೇಕ್ ಲ್ಯುಸೆರ್ನಯ ಮೇಲಿರುವ ಬ್ರುನ್ನೆನ್ ಬಂದರು



ಝೂರಿಕ್ ನಗರದ ಒಂದು ನೋಟ

ಪಾನೀಯಗಳು, ಬೆಣ್ಣೆ, ಮೊಸರು, ಹಾಲು, ಟೋಸ್ಟು, ಬ್ರೆಡ್ಡು, ಬಿಸ್ಕತ್ತು, ಸಿಗರೇಟು, ಮೀನು, ಮಾಂಸಾದಿಗಳಾದಿಯಾಗಿ ಸುಮಾರು ಮುನ್ನೂರಕ್ಕಿಂತಲೂ ಹೆಚ್ಚು ವಸ್ತುಗಳನ್ನು ಅಲ್ಲಿ ಪಡೆಯಬಹುದು. ಪ್ರತಿವಸ್ತುವಿನ ಮೇಲೆ ನಂಬರು ಹಾಗೂ ಬೆಲೆಯನ್ನು ನಮೂದಿಸಲಾಗಿರುತ್ತದೆ. ಇದರ ಪಕ್ಕದಲ್ಲಿಯೇ ದೊಡ್ಡ ಬುಟ್ಟಿಯಿರುತ್ತದೆ. ಅದರಲ್ಲಿ ಹಣ ಹಾಕಿ ಬೇಕಾದ ವಸ್ತುಗಳ ನಂಬರುಗಳನ್ನು ತಿರುಗಿಸಿದರೆ ಒಳಗಿನಿಂದ ಚಿಕ್ಕದಾದ ಕ್ರೇನ್ ಸಾಮಾನನ್ನೆತ್ತಿ ಬುಟ್ಟಿಯ ಸಮೀಪ ಹಾಕಿ ಅದನ್ನು ಅಲ್ಲಿಯೇ ಇದ್ದ ಪಾತ್ರೆಯಲ್ಲಿ ಜಾರುವಂತೆ ಮಾಡುತ್ತದೆ. ಹಣ ಹಿಂದಿರುಗಿ ಬರುವಂತಿದ್ದರೆ ಅದು ಸ್ವಯಂಚಾಲಿತ ವ್ಯವಸ್ಥೆಯ ಮೂಲಕ ಬೇರೆ ಕೌಂಟರಿನ ಹತ್ತಿರ ತನ್ನಿಂದ ತಾನೇ ಬರುತ್ತದೆ. ವಸ್ತುಗಳ ಬೆಲೆಗಿಂತ ಹಣ ಕಡಿಮೆ ಹಾಕಿದರೆ ಕ್ರೇನ್ ಮುಂದೆ ಬರುವದಿಲ್ಲ. ಬದಲು, ಹಾಕಿದ ಹಣ ಹೊರ ಹಾಕುತ್ತದೆ. ಜ್ಯೂರಿಕ್‌ದಲ್ಲಿ-ದಿನದ ಇಪ್ಪತ್ತು ನಾಲ್ಕು ಗಂಟೆಗಳೂ ತೆರೆದಿರುವ ಸ್ವಯಂಚಾಲಿತ ವ್ಯವಸ್ಥೆಯುಳ್ಳ ಅಂಗಡಿಯು ಉಳಿದ ಅಂಗಡಿಗಳಿಗಿಂತ ಅಗ್ಗವಾಗಿದೆಯೆಂದು ಹೇಳಲಾಗುತ್ತದೆ. ಒಂದು ವೇಳೆ ಯಂತ್ರಗಳು ಕೆಟ್ಟು ಹೋದರೆ ಯಂತ್ರಗಳು ಕೆಟ್ಟುಹೋಗಿವೆಯೆಂದು ಬರೆದ ಫಲಕ ಮುಂದೆ ಬರುತ್ತದೆಯಲ್ಲದೆ ಮೊದಲು ಹಾಕಿದ ಹಣ ತಿರುಗಿ ಬಂದು ಬೀಳುತ್ತದೆ. ಇಲ್ಲಿ ಮೂರು ಭಾರತೀಯ ಹೋಟೆಲುಗಳಿವೆ. ಅವುಗಳ ಪೈಕಿ ಜ್ಯೂರಿಕ್ ರೈಲು ನಿಲ್ದಾಣದ ಹತ್ತಿರವೇ ಇರುವ ಹಿಲ್‌ಟನ್ ವೇಜನ್‌ದಲ್ಲಿ ಶುದ್ಧ ಶಾಕಾಹಾರಿ ಆಹಾರವನ್ನು ಮಾತ್ರ ಒದಗಿಸಲಾಗುತ್ತದೆ. ಇಲ್ಲಿ ಪಲಾವ್, ಮದಾರಸಿನ ಹುಳಿ, ತೊವ್ವೆ, ಪೂರಿ, ಲಿಂಬೆಹಣ್ಣಿನ ಉಪ್ಪಿನಕಾಯಿ,ಹಸಿರುಚಟ್ನಿ, ಹಪ್ಪಳ, ಮೊಸರುಅನ್ನ, ಚಟ್ನಿ, ಮತ್ತು ಗುಲಾಬಜಾಮೂನು

ಸಿಗುತ್ತದೆ. ಆದರೆ ಇಲ್ಲಿ ತಯಾರಿಸುವ ಊಟದ ರುಚಿ ಅಪ್ಪಟ ಭಾರತೀಯವಲ್ಲ, ಬದಲು ಭಾರತೀಯ ಊಟವನ್ನು ಹೋಲುತ್ತದೆ. ಇತರ ಭಾರತೀಯ ಹೋಟೆಲುಗಳಲ್ಲಿ ಅಲ್ಲಿನ ಜನರ ಅಭಿರುಚಿಗನುಗುಣವಾದ ಮಾಂಸಾಹಾರಿ ಊಟ ದೊರೆಯುತ್ತದೆ.

ಇಲ್ಲಿನ ಬಸ್ಸುಗಳಲ್ಲಿ ಕಂಡಕ್ಟರರೇ ಇರುವುದಿಲ್ಲ. ಹಾಗೆಂದು ಯಾರೂ ಇಲ್ಲಿ ಹಣ ಕೊಡದೆ ಟಿಕೇಟು ಪಡೆಯದೇ ಹೋಗುವುದಿಲ್ಲ. ಸದ್ದು ಮಾಡದ ವಿದ್ಯುಚ್ಚಾಲಿತ ಬಸ್ಸು ಪ್ರಯಾಣಗಳಲ್ಲಿ ಯಂತ್ರಗಳೇ ಟಿಕೆಟುಗಳನ್ನು ಕತ್ತರಿಸುತ್ತವೆ. ಮುದುಕರು, ಅಂಗವಿಕಲರು, ಅಶಕ್ತರು ಮುಂತಾದವರಿಗೆ ಬಸ್ಸುಗಳಲ್ಲಿ ಕೂತುಕೊಳ್ಳಲು ಅಲ್ಲಿನ ಜನ ತಮ್ಮ ಆಸನಗಳನ್ನು ಬಿಟ್ಟುಕೊಡುವುದು ಸಾಮಾನ್ಯ. 80 ವರ್ಷಕ್ಕಿಂತ ಹೆಚ್ಚಿನವರು ರಸ್ತೆಯ ಮೇಲೆ ಯುವಕರನ್ನು ನಾಚಿಸುವ ರೀತಿಯಲ್ಲಿ ನಡೆಯುವುದನ್ನು ನೋಡಿದರೆ ಆಶ್ಚರ್ಯವಾಗುವುದು. ಒಳ್ಳೆಯ ನಿಯಮಿತ ಊಟ, ಉತ್ತಮ ವಾತಾವರಣಗಳಿಂದಾಗಿ ಅಲ್ಲಿನವರ ಆಯುರ್ದಾಯ ಅಧಿಕವಾಗಿದೆಯೆನ್ನಬಹುದು.

ನಗರದ ತುಂಬ ತಿರುಗಾಡಿದರೆ ಹಳೆಯ ಕಟ್ಟಡಗಳು, ದೊಡ್ಡ ಡಿಪಾರ್ಟಮೆಂಟಲ್ ಅಂಗಡಿಗಳು, ಚಿತ್ರಮಂದಿರ ಮೊದಲಾದವುಗಳು ಕಾಣಸುತ್ತವೆ. ಜ್ಯೂರಿಕ್‌ದಿಂದ ಲುಗಾನೋ 200 ಕಿಲೋಮಿಟರು ದೂರವಿದ್ದು ಅದನ್ನು ಗಾಡಿಯ ಮೂಲಕ ಮೂರು ಗಂಟೆಗಳಲ್ಲಿ ತಲುಪಬಹುದು. ಜ್ಯೂರಿಕ್‌ದಿಂದ ಹೋಗುವಾಗ ಗೂಡ್ಡಾರ್ಡ್ ರೈಲು ದಾರಿಯಿಂದ ಸುಂದರವಾದ ಲೂಸರ್ನ್ ಸರೋವರ ಕಾಣುವುದು. ರೈಲು ಹಳಿಯ ಎರಡೂ ಬದಿಗಳಲ್ಲಿ ಪರ್ವತ ಹಾಗೂ ಬಂಡೆಗಲ್ಲಿನಿಂದ ತುಂಬಿರುವ ಆಲ್ಫ್ ಪ್ರದೇಶ ಬಹು ನಯನಮನೋಹರ. ಗುಡ್ಡಗಳನ್ನು ಕೊರೆದ ಸುರಂಗದ ಮೂಲಕ ರೈಲು 'ರೆಬ್ಸ' ತಲುಪುತ್ತದೆ. ಈ ರೈಲು ಮಾರ್ಗವು ಉತ್ತರ ಯುರೋಪ್ ಹಾಗೂ ಇಟಲಿಗಳನ್ನು ಬೆಸೆಯುವ ಸಂಪರ್ಕ ಸಾಧನವಾಗಿದೆ. ಇದರಿಂದ ದಿನಾಲು 200 ಗಾಡಿಗಳು ಸಾವಿರಾರು ಟನ್ನುಗಳ ಸಾಮಾನು ಸರಂಜಾಮುಗಳನ್ನು ಹೊತ್ತು ಬಂದುಹೋಗುತ್ತವೆ. ಈ ರೈಲು ಮಾರ್ಗವನ್ನು ಜರ್ಮನಿ, ಇಟಲಿ, ಸ್ವಿಟ್ಜರಲಂಡ್ ಸರಕಾರಗಳು ಕೂಡಿ ನಿರ್ಮಿಸಿವೆ.

ರೈಲು ಗಾಡಿಯು ಗೊಶನನ್ ಸುರಂಗದ ಮೂಲಕ ಹೋಗುವಾಗ ರೈಲ್ವೆ ಪಯಣದಿಂದ ರೋಮಾಂಚನವಾಗುವುದು ಎಂದು ಪ್ರವಾಸಿಗರು ಹೇಳುತ್ತಾರೆ. ಸ್ವಿಟ್ಜರಲಂಡಿನ ಮಧ್ಯದಲ್ಲಿ ರಚಿಸಿದ 16.2 ಕಿಲೋಮೀಟರ್ ಉದ್ದವಾದ ಈ ಸುರಂಗವು ಉತ್ತರ ಹಾಗೂ ದಕ್ಷಿಣ ಸ್ವಿಟ್ಜರಲಂಡನ್ನು ಜೋಡಿಸುತ್ತದೆ. ಎಕ್ಸ್‌ಪ್ರೆಸ್ ಗಾಡಿಯು ಈ ಸುರಂಗದಿಂದ ಹೋಗಲು 12 ನಿಮಿಷಗಳನ್ನು ತೆಗೆದುಕೊಳ್ಳುತ್ತದೆ. ಈ ಸುರಂಗಮಾರ್ಗದ ರಚನೆ ಒಂದು ಎಂಜನೀರಿಂಗ್ ಅದ್ಭುತ ಎಂದು ಪರಿಗಣಿಸಲ್ಪಟ್ಟಿದೆ.

ಲುಗಾನೋ ನಿಲ್ದಾಣದಿಂದ ಒಂದು ತಂತಿಯ ಮೇಲೆ ಹೋಗುವ ಗಾಡಿ (ಕೇಬಲ್ ಮಾರ್ಗ) ನಗರವನ್ನು ತಲುಪಿಸುತ್ತದೆ. ಅನೇಕ ಬಗೆಗಳ ನೌಕೆಗಳು ಇಲ್ಲಿಯ ಸರೋವರದಲ್ಲಿ ಬಾಡಿಗೆಗೆ ಸಿಗುತ್ತವೆ. ಇದರ ಹೊರತು ಮೋಟರಲಾಂಚಿನಿಂದಲೂ ಸರೋವರದಲ್ಲಿ ವಿಹರಿಸಬಹುದು. ಎರಡು ಪೆಡಲ್ಲುಗಳಿಂದ ನಡೆಸಲ್ಪಡುವ ಚಿಕ್ಕ ಚಿಕ್ಕ ನೌಕೆಗಳು 10 ಫ್ರಾಂಕು (50 ರೂ)ಗಳಿಗೆ ಒಂದು ಗಂಟೆಯ ತನಕ ಬಾಡಿಗೆಗೆ ಸಿಗುತ್ತವೆ. ನೀಲಿಬಣ್ಣದ ನೀರಿನಲ್ಲಿ ನೌಕೆಗಳಲ್ಲಿ ವಿಹರಿಸುವುದು ಇಲ್ಲಿಯ ಮುಖ್ಯ ಆಕರ್ಷಣೆ. ನಗರದ ಬೀದಿಗಳು ಚಿಕ್ಕದಾಗಿವೆ. ಬೇಸಿಗೆಯ ದಿನಗಳಲ್ಲಿ ಪ್ರವಾಸವೇ ಇಲ್ಲಿನ ಮುಖ್ಯ ವ್ಯವಸಾಯ.

ಹಳೆಯ ಕಟ್ಟಡಗಳು, ಸುವ್ಯವಸ್ಥಿತ ಉದ್ಯಾನ, ಪ್ರಾಕೃತಿಕ ಸೌಂದರ್ಯದಿಂದಾಗಿ ಸ್ವಿಟ್ಜರಲಂಡ್ ಪ್ರವಾಸಿಗರಿಗೆ ಒಂದು ರೀತಿಯಲ್ಲಿ ಸ್ವರ್ಗವೇ ಆಗಿದೆಯೆನ್ನಬಹುದು. ●



# ಮಿಕ್ಕಿ ಮೌಸ್ ಮತ್ತು ವಾಲ್ಟ್ ಡಿಸ್ನೆ

ಡಾ. ಕರವೀರಪ್ರಭು ಕ್ಯಾಲಕೊಂಡ

**ಮಾರ್ಚ್** 16,1928. ವಾಲ್ಟ್ ಡಿಸ್ನೆ ಮತ್ತು ಲಿಲ್ಲಿ ನ್ಯೂಯಾರ್ಕಿನಿಂದ ಮರು ಪ್ರಯಾಣಕ್ಕೆ ರೈಲನ್ನೇರಿದ್ದರು. ನಿಲ್ದಾಣದಲ್ಲಿಯ ಗದ್ದಲ, ಗಡಿಬಿಡಿ, ಕೂಗು, ಕಿರುಚಾಟಗಳಾವವೂ ಡಿಸ್ನೆಯ ಕಿವಿಗೆ ತಟ್ಟಲೇ ಇಲ್ಲ. ಐದು ವರ್ಷಗಳ ಹಿಂದಿನ ಘಟನೆಗಳು ಒಂದರ ಹಿಂದೆ ಒಂಧರಂತೆ ಗರಿಬಿಚ್ಚಿಕೊಳ್ಳುತ್ತವೆ. ಅಂದು ಕಡುಬಡವನಾದ ಡಿಸ್ನೆ ಗೇಣು ಹೊಟ್ಟೆ, ಚೋಟು ಬಟ್ಟೆಗಾಗಿ ಕಾನ್ಸಾಸ್ ನಗರ ಬಿಟ್ಟು ಹಾಲಿವುಡ್‌ಗೆ ಹೊರಟಿದ್ದ. ಪ್ರೀತಿ, ವಾತ್ಸಲ್ಯಗಳಿಂದ ತಾನು ಸಾಕಿ, ಸಲುಹಿದ ಇಲಿಗಳನ್ನು ಬಟ್ಟ ಬಯಲಿನಲ್ಲಿ ಬಿಟ್ಟು ಬೆಟ್ಟದಷ್ಟು ಚಿಂತೆ ಮಾಡುತ್ತ ನಿಂತಿದ್ದ. ಮುತ್ತಿದ ಕತ್ತಲಲ್ಲಿ ಎಲ್ಲ ಇಲಿಗಳು ಮಾಯವಾಗಿದ್ದವು. ಆದರೆ 'ಮಾರ್ಟಿಮರ್' ಇಲಿ ಮಾತ್ರ ಅಲ್ಲಿಯೆ ಇದ್ದು ಇವನ ಬೂಟನ್ನು ಮೂಸಿ ನೋಡುತ್ತ ಸುತ್ತುತ್ತಿತ್ತು. ಸಿಟ್ಟಿನಲ್ಲಿದ್ದ ಡಿಸ್ನೆ ಕಾಲನ್ನು ಜಾಡಿಸಿದಾಗ 'ಮಾರ್ಟಿಮರ್' ದೂರ ಬಿದ್ದಿತ್ತು. ಮತ್ತೆ ಅದು ಡಿಸ್ನೆಯ ಸಮೀಪ ಸುಳಿಯಲಿಲ್ಲ. ಚಿರ್‌ಚಿರ್ ಅನ್ನುವ ಸದ್ದು ಮಾತ್ರ ಸ್ವಲ್ಪ ಹೊತ್ತು ಕೇಳಿದ್ದ. ಮುಂದೆ ಆದೂ ಕತ್ತಲಲ್ಲಿ ಕರಗಿ ನಿಶ್ಯಬ್ದವಾಗಿತ್ತು. ಚಿಂತೆಯ ಚಿತೆಯಲ್ಲಿ ಚಡಪಡಿಸುತ್ತಿದ್ದ ಡಿಸ್ನೆ ಒಬ್ಬ ತುಚ್ಛ ಮನುಷ್ಯನಂತೆ ವರ್ತಿಸಿದ್ದ!

ಡಿಸ್ನೆ ನ್ಯೂಯಾರ್ಕಿನ ವಿಂಕ್ಲರ್ ಕಾರ್ಪೊರೇಶನ್‌ನ ಪತ್ರಿಕೆಗೆ ವ್ಯಂಗ್ಯಚಿತ್ರಗಳನ್ನು ಪೂರೈ





ಸುತ್ತಿದ್ದ. ಹೆಚ್ಚು ಸಂಭಾವನೆ ಕೊಡುವಂತೆ ತನ್ನ ಪಕ್ಷದ ಕಾರ್ಪೊರೇಶನ್‌ನ ವ್ಯವಸ್ಥಾಪಕರಾಗಿದ್ದ ಚಾರ್ಲ್ಸ್ ಮಿಂಟ್ಜ್‌ರನ್ನು ಪರಿಪರಿಯಿಂದ ಕೇಳಿಕೊಂಡಿದ್ದ. ಆದರೆ ಸ್ವಲ್ಪವೂ ಮನಸ್ಸು ಕರಗದೆ ಮಿಂಟ್ಸ್ ಡಿಸ್ನೆಯನ್ನು ಹೊರಹಾಕಿದ್ದ. ನಯವಂಚನೆಯಿಂದ ಆತ ವ್ಯಂಗ್ಯಚಿತ್ರ ಸರಣಿಯ ಮೇಲೆ ಡಿಸ್ನೆಗಿದ್ದ ಹಕ್ಕನ್ನು ದಕ್ಕಿಸಿಕೊಂಡಿದ್ದ. ಪರಿಸ್ಥಿತಿಯ ಅರಿವಾದಾಗ ಡಿಸ್ನೆ ವಿಲಿ ವಿಲಿ ಒದ್ದಾಡಿದ್ದ-'ಮಾರ್ಟಿಮರ್' ಇಲಿಯ ಹಾಗೆ.

ಕಪ್ಪು ಹೊಗೆಯುಗುಳಿ ರೈಲು ಸಿಳ್ಳು ಹಾಕಿದ್ದರ ಪರಿವೆ ವಿಚಾರಗಳ ಸುಳಿವಿನಲ್ಲಿ ಡಿಸ್ನೆಗಿರಲಿಲ್ಲ. ಕೈಯಲ್ಲಿಯ ಪೆನ್ನು ಹಾಗೇ ಓಡುತ್ತಿತ್ತು. 'ಮಾರ್ಟಿಮರ್'ನ ಮನಮೋಹಕ ನೆನಪಿನಾಳದಿಂದ ಏಳುತ್ತಿತ್ತು. ಮುಖದಿಂದ ಪಶ್ಚಾತ್ತಾಪದ ನಿಟ್ಟುಸಿರು ಹೊರಬೀಳುತ್ತಿತ್ತು. ಮಿದುಳಿನಲ್ಲಿ ಪರಚಿ ಪರಚಿ ಅಚ್ಚೊತ್ತಿದಂತೆ ನಿಚ್ಚಳವಾಗಿ ನಿಂತ ಮಾರ್ಟಿಮರ್ ಚಿತ್ರ ಪೆನ್ನಿನ ಮೂಲಕ ರೇಖಾಚಿತ್ರವಾಗಿ ಹಾಳೆಗೆ ಇಳಿಯುತ್ತಿತ್ತು. ಊಹೆಯಿಂದ ವ್ಯತ್ಯಾಸಗೊಂಡಾಗಲೆಲ್ಲಾ ಹಾಳೆ ಮುದ್ದೆಯಾಗಿ ಮೂಲೆಗೆ ಬಂದು ಸೇರುತ್ತಿತ್ತು. ಕನಸಿನ ಕಣ್ಣುಗಳು ನೆನಪಿನಾಳದಲ್ಲಿ ಕಂಡದ್ದನ್ನು ಕೂಡಿಹಾಕಲೆತ್ನಿಸುತ್ತಿದ್ದವು.

ಮಾರ್ಚ್ 17ರಂದು ಅದೃಷ್ಟ ಡಿಸ್ನೆಗೆ ಒಲಿಯಿತು. ಮನಸ್ಸಿನೊಳಗೆ ಅಡಗಿದ್ದ 'ಮಾರ್ಟಿಮರ್' ಬಿಳಿಯ ಹಾಳೆಯ ಮೇಲೆ ಮೂಡಿಬಂದಿತ್ತು. ಕೆಂಪು ಬಣ್ಣದ ಚಡ್ಡಿಯ, ಅಗಲವಾದ ದುಂಡನೆಯ ಕಿವಿಯ, ಉರುಟುರುಟಾದ ತುಂಟ ಇಲಿಯೊಂದು ಡಿಸ್ನೆಯ ಕುಂಚದಿಂದ ಜನ್ಮ ತಾಳಿತು. ಇದಕ್ಕೆ ಏನೆಂದು ಹೆಸರಿಡಬೇಕು? ಎಂಬ ಪ್ರಶ್ನೆ ಧುತ್ತನೇ ಎದುರಾದಾಗ ಡಿಸ್ನೆಯ ಮನಃಪಟಲದ ಮೇಲೆ ಸಾವಿರಾರು ಹೆಸರುಗಳು ಮಿಂಚಿ ಮಾಯವಾದವು. ಇಲಿಯ ಚಿತ್ರವನ್ನು ಇನ್ನಷ್ಟು ಮನಮೋಹಕಗೊಳಿಸುವ ಮಾರ್ಪಾಡುಗಳು ನಡೆದೇ ಇದ್ದವು. ಅಂತಿಮ ರೂಪ ಹಾಗೂ ಹೆಸರು ಪಡೆಯುವ ಹೊತ್ತಿಗೆ ನವ್ಹಂಬರ 18 ಬಂದಿತ್ತು. ಇಲಿಯ ಚಿತ್ರ "ಮಿಕ್ಕಿ ಮೌಸ್" ಎಂದು ನಾಮಾಂಕಿತಗೊಂಡಿತ್ತು. ಈ ಅಪರಿಚಿತ ಹೆಸರಿನಿಂದ ಎಲ್ಲರೂ ಅಚ್ಚರಿಪಟ್ಟರು. ಮಿಕ್ಕಿಮೌಸ್ ಟುನ್ ಟುನ್ ಜಗಿಯಲಾರಂಭಿಸಿತು. ಕಾಗದ ಕಿರಿಯದಾಯಿತು. ಬೆಳ್ಳಿ ತೆರೆ ಸಾಲದಾಯಿತು. ಅಮೇರಿಕದ ಸೀಮೆಯನ್ನು ಜಗಿದು ಪ್ರಪಂಚದ ಎಲ್ಲ ದೇಶಗಳಲ್ಲೂ ಅಡ್ಡಾಡಿತು. ರಾತ್ರಿ ಬೆಳಗಾಗುವುದರೊಳಗೆ ಮಿಕ್ಕಿ ಮೌಸ್ ಎಲ್ಲೆಡೆ ಜನಪ್ರಿಯವಾಯಿತು.

ವಾಲ್ಟ್‌ಡಿಸ್ನೆ ಹುಟ್ಟಿದ್ದು ಶಿಕಾಗೋದಲ್ಲಿ. ಬೆಳೆದದ್ದು ಕಾನ್ಸಾಸ್‌ನಲ್ಲಿ. ತಂದೆಗೆ ಬಡಿಗತನದ ವೃತ್ತಿ. ಡಿಸ್ನೆ ಏಳು ವರ್ಷದವನಿದ್ದಾಗಲೇ ತಂದೆಯನ್ನು ಕಳೆದುಕೊಂಡ. ಆಟಿಗೆಗಳೊಂದಿಗೆ ಆಟವಾಡುತ್ತ, ಕನಸು ಕಾಣುತ್ತ ಕಾಲಕಳೆಯುವ ವಯಸ್ಸಿನಲ್ಲಿಯೇ ಮನೆತನದ ಹೊರೆಯನ್ನು ಹೊತ್ತುಕೊಂಡ. ಕೂಲಿ ಕೆಲಸ ಮಾಡುತ್ತ ಕಾಲ ನೂಕಿದ. ಗಂಜಿಗೆ ಗತಿಯಿಲ್ಲದಾಗಲೂ, ಕಲಾವಿದನಾಗುವ ಕನಸು ಕಾಣುತ್ತಿದ್ದ. ಕಷ್ಟಗಳು ಸಾಲು ಸಾಲಾಗಿ ಬಂದು ಮುತ್ತಿದರೂ ಜಪ್ಪೆನ್ನಲಿಲ್ಲ. ಬರಿಹೊಟ್ಟೆಯಲ್ಲಿ ಊರೂರು ಅಲೆದ. ಕಾರ್ಟೂನ್ ಬರೆದ. ಕಾರ್ಟೂನ್ ಸರಣಿ ಗೋತಾ ಹೊಡೆ

ದಾಗ, ಅವರಿವರ ಟೀಕೆ ಟಿಪ್ಪಣಿಗಳಿಗೆ ತತ್ತರಿಸಿದ. ನಡುಬೀದಿ ನಾರಾಯಣನಾದ. ಕಾರ್ಟೂನ್ ರಂಗದಲ್ಲಿ ಕೈಸುಟ್ಟುಕೊಂಡ ಡಿಸ್ನೆ ಹಾಲಿವುಡ್‌ಗೆ ಹಾರಿದ. ಚಿತ್ರ ನಿರ್ದೇಶಕನಾಗುವ ಹಂಬಲ ಗರಿಬಿಚ್ಚಿಕೊಂಡಿತು. ಮೂಕ ಚಿತ್ರಗಳ ಯುಗ, ಅದರ 'ಜೀನಿಯಸ್' ಆಗಿದ್ದ ಚಾರ್ಲಿ ಚಾಪ್ಲಿನ್ ಪ್ರಸಿದ್ಧಿಯ ಉತ್ತುಂಗ ಶಿಖರದಲ್ಲಿದ್ದ. ಎಷ್ಟು ಪ್ರಯತ್ನಪಟ್ಟರೂ ಡಿಸ್ನೆಗೆ ನಿರ್ದೇಶಕನಾಗುವ ಅವಕಾಶ ಸಿಗಲಿಲ್ಲ. ಮನದಾಳದಲ್ಲಿ ಹುದುಗಿದ ಹಂಬಲ ಪ್ರೋತ್ಸಾಹ ಪುರಸ್ಕಾರಗಳಿಲ್ಲದಿದ್ದರೂ ಚಿಗುರುತ್ತಲೇ ಇತ್ತು. ಮತ್ತೆ ಚಿತ್ರ ಬರೆದ. ಸೋಲಿನ ಸುಳಿಯಲ್ಲಿ ಗಿರಕಿ ಹೊಡೆದ.

1927ರಲ್ಲಿ ಮೊತ್ತ ಮೊದಲ ಪ್ರಯೋಗಾತ್ಮಕ ಟಾಕಿ ಚಿತ್ರ 'ಜಾಜ್ ಸಿಂಗರ್' ತೆರೆ ಕಂಡಿತ್ತು. ಇದು ಡಿಸ್ನೆಯ ಗಮನ ಸೆಳೆಯಿತು. ಚಿತ್ರರಂಗದಲ್ಲಿ ತಾನು ಸಾಧಿಸಬೇಕಾದುದನ್ನು ಟಾಕಿ ಚಿತ್ರದ ಮೂಲಕ ಈಡೇರಿಸಿಕೊಳ್ಳಬೇಕೆಂದು ನಿರ್ಧರಿಸಿದ. ಕಾರ್ಯ ಪ್ರವೃತ್ತನಾದ. ಮಿಕ್ಕಿ ಮೌಸ್ ಪ್ರಥಮ ಪಾತ್ರದಲ್ಲಿದ್ದ 'ಸ್ಟೀಮ್ ಬೋಟ್ ವಿಲ್ಲಿ' ಡಿಸ್ನೆಯ ಸಾಧನೆಯ ಮೈಲುಗಲ್ಲಾಗಿ ಪ್ರದರ್ಶನಕ್ಕೆ ಅಣಿಯಾಯಿತು! ಡಿಸ್ನೆಯ ಹತ್ತು ನಿಮಿಷಗಳ ಮಿಕ್ಕಿಮೌಸ್ ಕಾರ್ಟೂನ್ ಚಿತ್ರಕ್ಕೆ ಸುಮಾರು 1 ಲಕ್ಷ 44 ಸಾವಿರ ಕಾರ್ಟೂನ್ ಚಿತ್ರಗಳಿದ್ದವು. ಜನರ ಅಭಿರುಚಿ, ಅಪೇಕ್ಷೆಗಳಿಗೆ ಅನುಗುಣವಾದ ಸಂಗೀತವನ್ನು ಡಿಸ್ನೆ ರಚಿಸಿದ್ದ. ಚಿತ್ರ ಪ್ರದರ್ಶಕರು ಈ ಕಾರ್ಟೂನ್ ಚಿತ್ರ ಓಡುತ್ತದೆಯೇ ಎಂದು ಅನುಮಾನ ವ್ಯಕ್ತಪಡಿಸಿದರಂತೆ! ಆದರೆ ಅವರ ಅಭಿಪ್ರಾಯ ತಪ್ಪಾಗಿತ್ತೆನ್ನುವುದು ಕೆಲವೇ ದಿನಗಳಲ್ಲಿ ಗೊತ್ತಾಯಿತು. ಮುಂದಿನ ಕೆಲವು ವರ್ಷಗಳಲ್ಲಿ 'ಮಿಕ್ಕಿಮೌಸ್' ಹಿರಿಯರ, ಕಿರಿಯರ, ಮುದುಕರ ಹೀಗೆ ವಯಸ್ಸಿನ ಭೇಧವಿಲ್ಲದೆ ಮೆಚ್ಚಿನ ಪಾತ್ರವಾಗಿಹೋಯಿತು! ದಿನಬಳಕೆಯ ವಸ್ತುಗಳ ಮೇಲೆ 'ಮಿಕ್ಕಿಮೌಸ್' ಚಿತ್ರ ರಾರಾಜಿಸಿತು!! ಡಿಸ್ನೆಗೆ ಹುಟ್ಟಿನಿಂದ ಗಂಟುಬಿದ್ದ ದಾರಿದ್ರ್ಯ ಬಿಟ್ಟು ಹೋಯಿತು. ಪ್ರಶಸ್ತಿಗಳು, ಪುರಸ್ಕಾರಗಳು ಅರಸಿ ಬಂದವು...! ವಾಲ್ಟ್‌ಡಿಸ್ನೆಗೆ ಹೆಸರು, ಹಣ ಒಟ್ಟಿಗೆ ತಂದವು!!

'ಸ್ಲೀಪಿಂಗ್ ಬ್ಯೂಟಿ', 'ಸ್ನೋ ವೈಟ್ ಆ್ಯಂಡ್ ಸೆವೆನ್ ಡ್ವಾರ್ಫ್ಸ್', 'ಫೆಂಟಾಸಿಯಾ', 'ಸಿಂಡ್ರೆಲಾ', 'ದಿ ಲಿವಿಂಗ್ ಡೆಸರ್ಟ್,' ಮುಂತಾದ ಚಿತ್ರಗಳನ್ನು ತಯಾರಿಸಿದ ವಾಲ್ಟ್ ಡಿಸ್ನೆ ಚಾರ್ಲಿ ಚಾಪ್ಲಿನ್‌ನಿಗಿಂತ ಒಂದು ಲೆಕ್ಕದಲ್ಲಿ ಹೆಚ್ಚು ಜನರನ್ನು ತಲುಪಿದ ಮಾಂತ್ರಿಕ. ಮಿಕ್ಕಿ ಮೌಸ್‌ನಂತೆ ಡೊನಾಲ್ಡ್ ಡಕ್ ಎನ್ನುವ ಬಾತುಗೋಳಿಯನ್ನು ಡಿಸ್ನೆ ಈ ಜಗತ್ತಿಗೆ ಪರಿಚಯಿಸಿದ್ದಾನೆ. ಗೂಫಿ ಎನ್ನುವ ಮುದ್ದಿನ ಪ್ರಾಣಿಯ ಕಾರ್ಟೂನ್ ಸರಣಿ ಮಾಡಿದ್ದಾನೆ. ಈ ಶತಮಾನದ ಅದ್ವಿತೀಯ ಕಲಾವಿದನೆನಿಸಿದ ವಾಲ್ಟ್‌ಡಿಸ್ನೆ ಡಿಸೆಂಬರ 15, 1966ರಂದು 'ಮಿಕ್ಕಿ ಮೌಸ್,' 'ಡೊನಾಲ್ಡ್ ಡಕ್'ಗಳನ್ನು ತಬ್ಬಲಿ ಮಾಡಿದರು. ಮುಪ್ಪಿಲ್ಲದ, ಸಾವಿಲ್ಲದ ಇವು ಇಂದಿಗೂ ನಗೆಯ





ಹೊನಲನ್ನು ಹರಿಸುತ್ತಲೇ ಇವೆ. ಜನರನ್ನು ನಗಿಸುತ್ತಲೇ ಇವೆ. ಡಿಸ್ನೆಯ ನೆನಪನ್ನು ತರುತ್ತಲೇ ಇವೆ.

ಸೋಲುಗಳ ಸುರಿಮಳೆಯ ನಂತರ ಅಭೂತಪೂರ್ವ ಯಶಸ್ಸು ಕಂಡ ಅಸಾಮಾನ್ಯ ವ್ಯಕ್ತಿತ್ವದ ವಾಲ್ಟ್‌ಡಿಸ್ನೆ ನಿಧನನಾಗುವ ಹೊತ್ತಿಗೆ ಕೋಟ್ಯಧೀಶ್ವರನಾಗಿದ್ದ. ಅಮೇರಿಕದಲ್ಲಾತ ಅತ್ಯಾಧುನಿಕ ತಂತ್ರಜ್ಞಾನವನ್ನೆಲ್ಲಾ ಬಳಸಿ 'ಡಿಸ್ನೆಲ್ಯಾಂಡ್' ಎನ್ನುವ ಮಾಯಾಲೋಕವನ್ನೇ ನಿರ್ಮಿಸಿದ್ದಾನೆ. ನವನಾಗರಿಕತೆಯ ತುತ್ತತುದಿಯಲ್ಲಿ ಸ್ವೇಚ್ಛಾಚಾರದ ಸೋಂಕಿನ ಸುಳಿಯಲ್ಲಿ ಸಿಕ್ಕು ಶಾಂತಿ, ಸ್ವಾಸ್ಥ್ಯ ಕಳೆದುಕೊಂಡು ದಿಕ್ಕೆಟ್ಟು ಕಂಗಾಲಾಗಿ ತಿರುಗುವವರಿಗೆ ಕೊಂಚ ಸುಖ, ಶಾಂತಿ, ಸಂತೋಷ, ಸಾಂತ್ವನ ನೀಡುವ 'ಡಿಸ್ನಿಲ್ಯಾಂಡ್' ಅಮೇರಿಕದವರಿಗಷ್ಟೇ ಏಕೆ, ಇಡೀ ಪ್ರಪಂಚಕ್ಕೆ ನೀಡಿರುವ ಅಪೂರ್ವ ಕೊಡುಗೆ!

ಮಿಕ್ಕಿ ಮೌಸ್ ಈಗ 60 ವಸಂತಗಳನ್ನು ಕಂಡಿದೆ. 60ಕ್ಕೆ ಇಷ್ಟೇಕೆ ಪ್ರಾಮುಖ್ಯ ಎಂಬ ವಿಚಾರ ಓದುಗರಲ್ಲಿ ಬರುವುದು ಸಹಜ. 'ಮಿಕ್ಕಿ ಮೌಸ್'ಗೆ ವಿಶ್ವರಾಯಭಾರಿಯ ಗೌರವ ನೀಡಲು ಅಮೇರಿಕದ ಸರಕಾರ ನಿರ್ಧರಿಸಿತು. ಕಾಕತಾಳೀಯವಾಗಿ 'ಮಿಕ್ಕಿ ಮೌಸ್'ಗೀಗ 'ಷಷ್ಟ್ಯಬ್ದಿ'. 'ಮಿಕ್ಕಿ ಮತ್ತು ಡೊನಾಲ್ಡ್' ದೂರದರ್ಶನ ಸರಣಿ ಸದ್ಯ ಭಾರತೀಯರನ್ನು ರಂಜಿಸುತ್ತಿದೆ.

ಮಿಕ್ಕಿಮೌಸ್ ಈಗ ಪ್ರಪಂಚದಾದ್ಯಂತ ಪ್ರವಾಸ ಮಾಡಿ ಭ್ರಮೆಯ ಲೋಕ ಸೃಷ್ಟಿಸಲಿದ್ದಾನೆ! ಬಾಲಕ-ಬಾಲಕಿಯರ ಹೃನ್ಮನಗಳನ್ನು ತಣಿಸಲಿದ್ದಾನೆ!! ತನ್ನ ಸಾಹಸಗಳಿಂದ ಅವರನ್ನು ಅಚ್ಚರಿ ಪಡಿಸಲಿದ್ದಾನೆ!!!

●

# ಆಘಾತ

ಇಂದಿರಾ ಹೆಗಡೆ

**ಸು**ರಜಿತ್ ಕೇಂದ್ರೀಯ ವಿದ್ಯಾಲಯದ ವಿದ್ಯಾರ್ಥಿ. ಆತನ ತಂದೆ ಮಿಲಿಟರಿಯಲ್ಲಿ ಹವಾಲ್ದಾರನಾಗಿದ್ದಾನೆ. ಎರಡು ವರುಷ ದಿಂದ ಆತ ಬೆಂಗಳೂರಿನ ಮಿಲಿಟರಿ ಶಾಖೆ ಯಲ್ಲಿ ಸೇವೆ ಸಲ್ಲಿಸುತ್ತಿದ್ದಾನೆ. ಸುರಜಿತ್ ಒಬ್ಬನೇ ಮಗ. ಒಂಭತ್ತನೇ ತರಗತಿಯ ವಿದ್ಯಾರ್ಥಿ. ಆದರೆ ವಯಸ್ಸಿಗೆ ಮೀರಿದ ಬೆಳವಣಿಗೆ. ಸೇಬುಹಣ್ಣಿನ ಮೈಬಣ್ಣಕ್ಕೆ ಧಡೂತಿಯಾದ ಅಂಗಸೌಷ್ಟವ. ಕಂಡವರು ದೃಷ್ಟಿ ನಿವಾಳಿಸಬೇಕು.

ಬೆಳಿಗ್ಗೆ ಶಾಲೆಗೆ ಹೊರಟ ಮಗನನ್ನು ಕೂಗಿ ಕರೆಯುತ್ತಾ, ''ಶ್ಯಾಮಕೋ ಜಲ್ದೀ ಆನಾ ಮೇರೆ ಪುತ್ತರ,'' ಅಂದಳು ಕುಲವಂತ್. ''ಅಚ್ಛಾ ಮಾ,'' ಎಂದ ಮಗ ತಿರುಗಿ ನೋಡದೆ. ತಾಯಿ ಮಗನನ್ನು ಕಣ್ತುಂಬ ನೋಡಿದಳು. ಉದ್ದ ಕೂದಲನ್ನು ಎಣ್ಣೆ ಸವರಿ, ಬಾಚಿ, ನೆತ್ತಿಯ ಮೇಲೆ ಗಂಟು ಹಾಕಿ, ಅದನ್ನು ಬಿಳಿಬಟ್ಟೆಯಿಂದ ಮುಚ್ಚಿದ್ದಳು. ನೇವಿ ಬ್ಲೂ ಚಡ್ಡಿ, ಬಿಳಿ ಅಂಗಿ, ಕಪ್ಪು ಶೂಗೆ ಬಿಳಿ ಸಾಕ್ಸ್. ಉಳಿದ ಶಾಲೆಯ ಮಕ್ಕಳು ಹೊರುವಂತಹ ಪುಸ್ತಕಗಳ ರಾಶಿ ಇಲ್ಲ. ಪರವಾಗಿಲ್ಲ, ಒಳ್ಳೆಯ ಶಾಲೆ ಎಂದುಕೊಂಡಳು, ಮನಸ್ಸಿನಲ್ಲಿ.

ಸುರಜಿತನಿಗೆ ಕ್ರಿಕೆಟ್ ಅಂದರೆ ಪಂಚ ಪ್ರಾಣ. ಆದರೆ ಆಟದಲ್ಲಿ ಆತ ತುಸು ಹಿಂದೆ. ಹೀಗಾಗಿ ಅವನಪ್ಪ ರೇಗುತ್ತಿದ್ದುದುಂಟು. ''ನೀನು ಒಂದೋ ಕ್ರಿಕೆಟ್‌ನಲ್ಲಿ ಮುಂದೆ ಬಾ, ಅಥವಾ ಓದಿನಲ್ಲಿ. ನಿನ್ನ ಅವಸ್ಥೆ ನೋಡಿದರೆ ಅದೂ ಇಲ್ಲ, ಇದೂ ಇಲ್ಲ ಎಂದಾಗುತ್ತದೆ ಅನಿಸುತ್ತದೆ ನನಗೆ. ಈಗಿನ ರಾಜಕೀಯದಲ್ಲಿ



ಕ್ರಿಕೆಟ್ ನಿನ್ನಂಥ ಸಾಮಾನ್ಯ ವ್ಯಕ್ತಿಗೆ ದಕ್ಕುವಂಥದಲ್ಲ. ಓದಿನತ್ತ ಗಮನನೀಡು,'' ಅಂದಿದ್ದ ಆದರೂ ಶಾಲೆಯಲ್ಲಿ ಕ್ರಿಕೆಟ್‌ನದೇ ಹುಚ್ಚು ಸುರಜಿತ್‌ಗೆ.

ಅಂದು ಸಂಜೆ ಎಂದಿನಂತೆ ಸಹಪಾಠಿಗಳೊಂದಿಗೆ ಆಟವಾಡತೊಡಗಿದ. ಗೆಳೆಯ ರಮೇಶ ಬಲವಾಗಿ ಬೀಸಿದಾಗ ಚೆಂಡು ಶಾಲೆಯ ಅಂಗಳದ ಗೋಡೆ ದಾಟಿತು. ಸುರಜಿತ್ ಓಡಿದ. ಅಷ್ಟರಲ್ಲಿ ಸುಮಾರು ಇಪ್ಪತ್ತರ ಹರೆಯದ ಒಬ್ಬಾತನಿಗೆ ಸುರಜಿತ್, ''ಚೆಂಡು ಕೊಡಿ,'' ಎಂದ. ತರುಣನ ಸುತ್ತ ಅವನದೇ ವಯಸ್ಸಿನ ಹುಡುಗರು ಸುರಜಿತ್‌ನ ಕೈಗೆ ಚೆಂಡು ಕೊಡಲಿಲ್ಲ. ಅವನಿಗೆ ಕೋಪ ಉಕ್ಕೇರಿತು. ಅಷ್ಟರಲ್ಲಿ ಅವನ ಸಹಪಾಠಿಗಳು ಅವನನ್ನು ಸೇರಿದರು. ಅವರ ಬೆಂಗಾವಲಿನಲ್ಲಿ ಸ್ವಲ್ಪ ಧೈರ್ಯವಹಿಸಿ, ಅಣುಕು ನಗುಸೂಸುತ್ತಿದ್ದ ತರುಣರಿಗೆ, ''ಚೆಂಡು ಕೊಡ್ತಿರೋ... '' ಎಂದ ಗಡುಸಿನಿಂದ. ಆಗ ಗುಂಪಿನ ಒಬ್ಬ ಕಿಡಿಗೇಡಿ ''You..... you terrorist'' ಎಂದು ಚೀರಿದ. ಆತನ ಉದ್ರೇಕಕಾರಿ ಮಾತು ಸುರಜಿತನ ಕೆನ್ನೆಗೆ ಅಪ್ಪಳಿಸಿತು. ನಿಂತಲ್ಲೇ ಆತ ಮರಗಟ್ಟಿದ. ಅವನ ಸಹಪಾಠಿಗಳು ಕೆಲ ಹೊತ್ತು ಮೂಕವಿಸ್ಮಯರಾಗಿ ಬಿಟ್ಟಗಣ್ಣು ಬಿಟ್ಟಂತೆ ನಿಂತಿದ್ದರು. ಮಕ್ಕಳು ನೋಡುತ್ತಿದ್ದಂತೆ ಚೆಂಡು ಹಿಡಿದೇ ಮುಂದೆ ಹೋದರು ಪುಂಡರು. ಹುಡುಗರೆಲ್ಲ ಸುರಜಿತನ ಕಂದಿದ ಮುಖವನ್ನೇ ನೋಡತೊಡಗಿದರು ಅವನೊಳಗೆ ನಡೆಯುವ ತುಮುಲದ ಅರಿವು ತಟ್ಟಿದವರಂತೆ. ಆತ ಮಾತ್ರ ಯಾರಲ್ಲೂ ಮಾತನಾಡ ಬಯಸಲಿಲ್ಲ. ನೆಟ್ಟಗೆ ತನ್ನ ತರಗತಿಗೆ ಓಡಿದ.

ಎಂದಿನಂತೆ ಶಾಲೆಯಿಂದ ಬಂದಾಕ್ಷಣ ''ಅಮ್ಮಾ ಹಸಿವು'' ಎನ್ನುವ ಬದಲು ಕೋಣೆ ಸೇರಿ ಬಿಮ್ಮನೆ ಕುಳಿತ. ''ಏನಾಯಿತು ಮಗೂ.....'' ಎಂದು ಕೇಳಿದಳು.

''ಏನಿಲ್ಲ....''

ತಾಯಿ ಹತ್ತಿರ ಬಂದು ಮಗನ ಮುಂದಲೆಯನ್ನು ಪ್ರೀತಿಯಿಂದ ಸವರಿ ಮತ್ತೊಮ್ಮೆ ಕೇಳಿದಳು, ''ಏನೋ ಶಾಲೆಯಲ್ಲಿ ನಡೆದಿದೆ. ಅದಕ್ಕೆ ಹೀಗಿದ್ದೀಯಾ'' ಮಾತೆಯ ಮಮತೆಯ ಸ್ಪರ್ಶಕ್ಕೆ ಹುಡುಗನ ಭಾವ ಏರಿತು. ಕಣ್ಣಾಲಿ ತುಂಬಿ ನಿಂತ ಮಗನ ಕಂದಿದ ಮುಖಭಾವವು ಅವನ ನೊಂದ ಮನಸ್ಸಿಗೆ ಕನ್ನಡಿ ಹಿಡಿದಿತ್ತು. ತಾಯಿಯ ಹೃದಯ ಹಿಂಡಿದಂತಾಯಿತು. ಗಾಬರಿಗೊಂಡು ಕೇಳಿದಳು:

''ಏನಾಯಿತಪ್ಪ.....ಯಾಕೆ ಹೀಗೆ?''

ಕೇಳಲೋ ಬೇಡವೋ ಎಂಬಂತೆ ಕೇಳಿದ:

''ಪಂಜಾಬಿನಲ್ಲಿ ಉಗ್ರಗಾಮಿಗಳು ಯಾವತ್ತು ಸಾಮಾನ್ಯ ಪ್ರಜೆಗಳಾಗುತ್ತಾರಮ್ಮ?''

ಓದು ಬಾರದ ಮುಗ್ಧೆ ತಾಯಿಯು ಏನೆಂದು ಉತ್ತರಿಸಿಯಾಳು?

''ನಾನು ಹೇಗೆ ಹೇಳಲಿ ಮಗೂ?'' ಮಗನ ನೋವಿನ ಕಾರಣಕ್ಕೂ ಇಲ್ಲಿಗೂ ಎಂತಹ ಸಂಬಂಧ ಎಂದು ಯೋಚಿಸುತ್ತಲೇ ಕೇಳಿದಳು, ''ಈಗ ಯಾಕೆ ಆ ಮಾತು?''

''ನನ್ನನ್ನೇ ಇವತ್ತು Terrorist ಎಂದು ಕರೆದರಮ್ಮಾ,'' ಹುಡುಗ ಅಷ್ಟು ಹೇಳಿ ಬಿಕ್ಕಿಬಿಕ್ಕಿ ಅಳತೊಡಗಿದ. ಅಸಹಾಯಕಳಾದ ತಾಯಿ ಯಾವ ಭಾವವನ್ನೂ ತೋರ್ಪಡಿಸಲು ಸಾಧ್ಯವಾಗದೆ ಮಗನ ಮೇಲೆ ಕೈಯಾಡಿಸುತ್ತಾ ತಾನೂ ಕಣ್ಣಲ್ಲಿ ನೀರು ತಂದುಕೊಂಡಳು. ನಿಧಾನವಾಗಿ ಕಣ್ಣೊರಿಸಿ ಮತ್ತೆ ನುಡಿದ ಸುರಜಿತ್:

''ಅಮ್ಮಾ ನನ್ನ ಜುಟ್ಟು ಕತ್ತರಿಸು.''

ತಾಯಿ ಅವಾಕ್ಕಾದಳು.

''ನಾನೀಗಲೇ ಹೋಗ್ತಿನಮ್ಮಾ ಬಾರ್ಬರ್ ಷಾಪಿಗೆ.''

''ಮಗೂ..... ನೀನು ಸರದಾರ ಕುವರ. ನಿನ್ನ ಜುಟ್ಟು ನಿನ್ನ ಪಂಥದ ಹಿರಿಮೆ....''

ಮಗ ಮಾತನಾಡಲಿಲ್ಲ. ತಂದೆ ಬಂದ

ನಂತರ ಮತ್ತೆ ಚರ್ಚೆ ನಡೆಯಿತು. ಕೂದಲಿನಿಂದ ತಮ್ಮ ಮಗ ಗುಂಪಿನ ಮಧ್ಯೆ ಎದ್ದು ಕಾಣುತ್ತಿರುತ್ತಾನೆ. ಜುಟ್ಟು ಕಾಣುವ ಕಣ್ಣುಗಳ ಮುಂದೆ ಪಂಜಾಬಿನ ನರಮೇಧದ ದೃಶ್ಯ ಕಾಣುತ್ತದೆ. ತನ್ನನ್ನೇ ನೋಡಿ ಅದೆಷ್ಟು ಕಣ್ಣುಗಳು ತಮ್ಮ ಭಾವ ಪ್ರದರ್ಶಿಸಿಲ್ಲ? ಮಗನ ನೋವು ತಂದೆಗರ್ಥವಾಗಿತ್ತು.

ಮೇ ತಿಂಗಳ ಮಗನ ಶಾಲೆಗೆ ರಜೆ. ಇದೇ ಸಮಯದಲ್ಲಿ ಅವನ ತಂದೆಯೂ ರಜೆ ಪಡೆದು ಊರಿಗೆ ಹೊರಟ. ಮಗನ ಹೊಸ ರೂಪವನ್ನು ಊರವರು ಹೇಗೆ ಸ್ವಾಗತಿಸುವರೋ ಎಂಬ ತುಮುಲದಿಂದ ಕುಲವಂತ್ ರೈಲು ಹತ್ತಿದಳು. ಮಗನ ನೋವು ಹೆತ್ತವರಾದ ತಮಗೆ ಅರ್ಥವಾದಂತೆ ಬೇರೆಯವರಿಗೆ ಹೇಗೆ ಅರ್ಥವಾದೀತು? ಅದರಲ್ಲೂ ಸಂಪ್ರದಾಯ ಶರಣರಾದ ತಮ್ಮ ಅತ್ತೆ-ಮಾವ ಏನನ್ನುವರೋ?

ಬಸ್ಸು ತನ್ನ ಹಳ್ಳಿಯ ಮಾರ್ಗವಾಗಿ ಓಡುತ್ತಿತ್ತು. ಸುರಜಿತ್ ತನ್ನ ಹಳ್ಳಿಯ ಹಸಿರು ಸಿರಿಯನ್ನು ಮನತುಂಬಿ ನೋಡತೊಡಗಿದ. ಬೆಳೆದು ನಿಂತ ಹುಲುಸಾದ ಕಬ್ಬಿನ ತೋಟವನ್ನು ಕಂಡು ಅಲ್ಲೇ ಕಬ್ಬನ್ನು ಮುರಿದು ತಿನ್ನಬೇಕೆನಿಸಿತು. ಅವನ ತಾಯಿಗೆ ಮನೆಯ ಆತಿಥ್ಯದ ಬಗ್ಗೆಯೇ ದಿಗಿಲು. ಇದೇ ತುಮುಲದಲ್ಲಿರುವಾಗ ಬಸ್ಸು ಗಕ್ಕನೆ ನಿಂತಿತು. ಒಮ್ಮೆಲೇ ಜನರು ಚೀರತೊಡಗಿದರು. ಕುಲವಂತ್ ಎಚ್ಚೆತ್ತುಕೊಳ್ಳುವುದರೊಳಗೆ ಬಸ್ಸಿನೊಳಗೆ ಬಂದೂಕುಧಾರಿ ಗುಂಪು! ಎಲ್ಲರನ್ನೂ ಬಸ್ಸಿನಿಂದ ಕೆಳಗಿಳಿಸಿ ಸಾಲಾಗಿ ನಿಲ್ಲಿಸಿದರು. ಸರದಾರರಲ್ಲದವರನ್ನೂ ಪ್ರತ್ಯೇಕಿಸಿ ನಿಲ್ಲಿಸಿ ಅವರತ್ತ ಗುರಿಯಿಟ್ಟು ಒಬ್ಬಾತ ಬಂದೂಕು ಎತ್ತಿದ. ಮುಂದೆ ನಡೆದುಹೋದ ರುದ್ರ, ಭೀಕರ ದೃಶ್ಯ ನೋಡಲಾಗದೆ ಕುಲವಂತ್ ಕಣ್ಣು ಮುಚ್ಚಿದಳು. ಕಿವಿಗೆ ಅಪ್ಪಳಿಸುತ್ತಿತ್ತು ಗುಂಡುಗಳ ಸದ್ದು.

ಅವಳು ಕಣ್ಣು ಮುಚ್ಚಿಯೇ ಇದ್ದಳು. ಸುತ್ತಲಿನ ಆಕ್ರಂದನಕ್ಕೆ ಕಿವಿ ಮುಚ್ಚಿಕೊಳ್ಳಲಾಗಲಿಲ್ಲ. ಅಷ್ಟರಲ್ಲಿ "ಮಾ.... " ಎಂದು ಚೀರಿದ ಸುರಜಿತ್. ಬೆದರಿದ ತಾಯಿ ಹರಿಣ ಬೆಚ್ಚಿದ ಕುಲವಂತ್ ನೋಡುತ್ತಾಳೆ, ಅವಳ ಕಂದನನ್ನು ಎಳೆಯುತ್ತಿದ್ದಾರೆ ಯಮಭಟರು! "ಅಯ್ಯೊ...... ಮೇರಾ ಪುತ್ತರ್....." ಎನ್ನುತ್ತಾ ಮಗನನ್ನು ಬಾಚಿ ತಬ್ಬಹೋದಳು. ಅವಳನ್ನು ಎಡಗಾಲಿನಿಂದ ತಳ್ಳಿದಾಗ, ರಾಮಸಿಂಗ್ ಮುಂದೆ ಬಂದು, "ನನ್ನ ಮಗನನ್ನು ಉಳಿಸಿಕೊಡಿ...." ಎಂದು.

"ಹಿಂದೂ ಬಚ್ಚಾಕೋ ರಕ್ಷಾದೇತಿಹೈಕ್ಯಾ...." ಎನ್ನುತ್ತಾ ಅವನನ್ನು ಆ ಕಡೆಗೆ ತಳ್ಳಿದರು ಆ ಬಂದೂಕುಧಾರಿಗಳು. ಅವರ ಹಿಂದೆಯೇ ಗುಂಡು ಅವನ ಎದೆಗಿಳಿಯಿತು. ಹುಡುಗ "ಮಾ..... ಮಾ..... ಮಾ.... "ಎಂದು ಚೀರುತ್ತಾ ನಿಶ್ಚೇಷ್ಟಿತನಾದ. ಹೆತ್ತೊಡಲೂ ಚೀರುತ್ತಲೇ ನೆಲಕ್ಕೊರಗಿತು. ●

---

*ರಾಜಸ್ತಾನದ ಪೋಲೀಸರಿಗೆ ಈ ಪ್ರಶ್ನೆಯನ್ನು ಕೇಳಿದ್ದರೆ ಅವರು ಹೌದೆಂದೇ ಉತ್ತರಿಸಿಯಾರು. ಕುಡಿದ ಅಮಲಿನಲ್ಲಿ ಅವು ಪೋಲೀಸರ ಮೇಲೆ ಎರಗಿ ಸಹ ಹೋಗಿದ್ದವಂತೆ.*

*ಆದರೆ ಅವುಗಳಿಗೆ ಸರಾಯಿ ದೊರೆಯುವುದಾದರೂ ಹೇಗೆ? ಅದಕ್ಕಾಗಿ ಅವು ಪ್ರಯತ್ನಿಸುವ ಕಾರಣವೇ ಇಲ್ಲ. ಕಳ್ಳಭಟ್ಟಿಯ ವ್ಯವಹಾರಸ್ಥರು ಅವು 'ಚುರುಕಾಗಿ' ಕೆಲಸ ಮಾಡಲೆಂದು ಸರಾಯಿ ಕುಡಿಸಿ ತಮ್ಮ ಸಾಗಾಟದ ಕೆಲಸ ಮಾಡಿಕೊಳ್ಳುತ್ತಾರಂತೆ.*

*ಇದಕ್ಕಿಂತ ಸ್ವಾರಸ್ಯದ ಸಂಗತಿಯೆಂದರೆ ರಾಜಸ್ತಾನದ ಪೋಲೀಸ ಇಲಾಖೆ ಈ ಕುಡುಕ ಒಂಟೆಗಳನ್ನು ಎದುರಿಸಲು ಇಷ್ಟರಲ್ಲಿಯೆ ವಿಶೇಷ ಒಂಟೆ ಪಡೆಯನ್ನು ಆರಂಭಿಸಲಿದೆಯಂತೆ.*

*- ವಾಸುದೇವ್.ರಾ.ಕಲಘಟಗಿ*

---

# ಯತೀಂದ್ರನಾಥರ ವಿಫಲ ಕ್ರಾಂತಿ

*ಗಂಗಾಧರ*

ಭಾರತದಲ್ಲಿ ಬ್ರಿಟಿಶರ ವಿರುದ್ಧ ಹೋರಾಟವನ್ನು ಹೂಡಿದ ಕ್ರಾಂತಿಕಾರರಲ್ಲೆಲ್ಲ ಬಂಗಾಲದ ಯತೀಂದ್ರನಾಥ ಮುಖರ್ಜಿಯವರ ವೀರಗಾಥೆಯಷ್ಟು ರೋಮಾಂಚಕವಾದದ್ದು ಇನ್ನೊಂದಿರಲಾರದು. ಅನೇಕ ರೀತಿಗಳಿಂದ ಯತೀಂದ್ರರು ಸುಭಾಷಚಂದ್ರರ ಪೂರ್ವವರ್ತಿಗಳೆಂದು ಹೇಳಬೇಕು. ಅವರದು ಕೇವಲ ಅವ್ಯವಸ್ಥಿತ ಹಿಂಸಾಚಾರವಾಗಿರಲಿಲ್ಲ. ಮೊದಲನೇ ಮಹಾಯುದ್ಧ ಕಾಲದಲ್ಲಿ ಅಖಿಲ ಬಂಗಾಲದಲ್ಲಿ ಸಶಸ್ತ್ರ ಬಂಡಾಯ ಹೂಡಿ ಅಧಿಕಾರ ಕಸಿದುಕೊಳ್ಳಲು ಪರಿಪೂರ್ಣವಾದ ಯೋಜನೆಯೊಂದನ್ನು ಮಾಡಿದ್ದರವರು. ಅದು ಅಯಶಸ್ವಿಯಾಗಿ ಅವರು ಪ್ರಾಣದ ಬೆಲೆ ತೆರಬೇಕಾಯಿತೆಂಬ ಮಾತು ಬೇರೆ. ಅವರ ಕೊನೆಯ ಹಿನ್ನಡೆ, ಆ ಹಿನ್ನಡೆಯಲ್ಲಿ ಅವರು ಓಡುತ್ತೋಡುತ್ತ ಪೋಲೀಸರೊಡನೆ ನಡೆಸಿದ ಹೋರಾಟ, ಮತ್ತು ಕೊನೆಗೆ ಅವಗಡಿಸಿ ನಿಂತು ಅವರು ನೀಡಿದ ಅಂತಿಮ ಕಾಳಗ ಇವುಗಳ ಅಪ್ರತಿಮ ಶೌರ್ಯವನ್ನು ನೋಡಿ ಅವರನ್ನು ಬೆನ್ನಟ್ಟಿದ ಪೋಲೀಸ್ ಅಧಿಕಾರಿಯಾದ ಸರ್ ಚಾರ್ಲ್ಸ್ ಟಗಾರ್ಟನು, ''ನಾನು ಕಂಡ ಪರಮ ಶೂರ-ಶ್ರೇಷ್ಠ ಭಾರತೀಯ'' ಎಂಬ ಉಪಾಧಿಯನ್ನು ಅವರಿಗೆ ಕೊಡುವಂತಾಯಿತು.

**ದೇಶವನ್ನು ಮುಕ್ತಗೊಳಿಸಲು ಅವರ ವ್ಯವಸ್ಥಿತ ಯೋಜನೆ ದೈವಯೋಗದಿಂದ ವಿಫಲವಾಯಿತು**



ಬಂಗಾಲದ ನದಿಯಾ ಜಿಲ್ಲೆಯಲ್ಲಿ 1879ರಲ್ಲಿ ಅನುಕೂಲವಂತ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಯತೀಂದ್ರನಾಥರು ಐದರಲ್ಲಿ ಕಾಲಿಡುತ್ತಲೇ ತಂದೆಯನ್ನು ಕಳೆದುಕೊಂಡರು. ತಂದೆ ಉಮೇಶಚಂದ್ರರು ಪ್ರಕಾಂಡ ಪಂಡಿತರಾಗಿದ್ದರು. ತಾಯಿ ಶರದಶಶಿ ನಿರ್ಭಯ ಪ್ರಕೃತಿಯವರು. ಯತೀಂದ್ರರಿಗೆ ಇಪ್ಪತ್ತು ತುಂಬುತ್ತಿದ್ದಾಗ ಆ ಪುಣ್ಯಾತಾಯಿ ಜೀವನದ ಹಂಗುದೊರೆದು ಕಾಲರಾ ರೋಗಿಗಳ ಶುಶ್ರೂಷೆ ಮಾಡುತ್ತ ಅದೇ ರೋಗಕ್ಕೆ ಬಲಿಯಾದರು. ಪರೋಪಕಾರದ

ಪಾರಮ್ಯದ ಮತ್ತು ಜೀವನದ ಕ್ಷಣಿಕತೆಯ ಪಾಠ ಯತೀಂದ್ರರ ಮೇಲೆ ಈ ಘಟನೆಯಿಂದ ಗಾಢವಾಗಿ ಮನೋಮುದ್ರಿತವಾಯಿತು.

ಅವರಿಗೆ ದೊರೆತ ತರಬೇತಿ ಭಾವಿ ಸ್ವಾತಂತ್ರ್ಯ ಯೋಧನಿಗಾಗಿಯೆ ಯೋಜಿತವಾದಂತಿತ್ತು. ಮಾವ ವಸಂತಕುಮಾರರು ಅವರಿಗೆ ಗರಡಿ ಸಾಧನೆಯನ್ನಷ್ಟೇ ಅಲ್ಲದೆ ಸೈನಿಕ ಶಿಕ್ಷಣವನ್ನೂ ಕೊಡಿಸಿದ್ದರು.

ಯಾವುದೇ ಗುಂಪಿನಲ್ಲಿ ಯತೀಂದ್ರರಿಗೆ ತಂತಾನೇ ಮುಂದಾಳ್ತನ ಬರುತ್ತಿತ್ತು. ಪ್ರತ್ಯುತ್ಪನ್ನಮತಿ, ನಿರ್ಭೀಕತೆ, ಹೊಣೆಗೆ ಹೆಗಲು ಕೊಡಲು ಹಿಂಜರಿಯದಿರುವುದು ಅವರಿಗೆ ಜನ್ಮದಿಂದಲೇ ಬಂದಂತಿತ್ತು. ಜತೆಗೆ ಭೀಮ ಶಕ್ತಿ. ಶ್ರೀ ಅರವಿಂದರು ಅವರ ಮರಣಾನಂತರ, "ಹೀಗೆ ಚೆಲುವೂ ಬಲವೂ ಒಂದೆಡೆ ಸೇರಿದ ವ್ಯಕ್ತಿಯನ್ನು ನಾನು ಬೇರೆಲ್ಲೂ ಕಂಡಿಲ್ಲ," ಎಂದು ಉದ್ಗಾರವೆತ್ತಿದರು. ಹದಿನೈದನೇ ವಯಸ್ಸಿನಲ್ಲಿ ಕೃಷ್ಣನಗರ ಹೈಸ್ಕೂಲಿನಲ್ಲಿದ್ದಾಗ, ಅವರು ಹುಚ್ಚೆದ್ದ ಕುದುರೆಯನ್ನು ಅಂಕಿತಕ್ಕೆ ತಂದು ತಮ್ಮ ಸಾಹಸ ವೃತ್ತಿಯ ಪರಿಚಯ ಕೊಟ್ಟಿದ್ದರು. ಕೆಲ ವರ್ಷಗಳ ನಂತರ ರೈತರನ್ನು ಪೀಡಿಸುತ್ತಿದ್ದ ಬಂಗಾಲ ಹೆಬ್ಬುಲಿಯೊಂದನ್ನು ಏಕಾಕಿಯಾಗಿ ಎದುರಿಸಿ ಚೂರಿಯಿಂದಲೇ ಅದನ್ನು ಸಂಹರಿಸಿದರು.

ಇಂಥ ಶೂರ ತರುಣ ಅರ್ಧದಲ್ಲಿ ಕಾಲೇಜು ಬಿಟ್ಟು ಸ್ಟೆನೋಗ್ರಾಫರನಂಥ ನಮ್ರ ನೌಕರಿ ಹಿಡಿದದ್ದೊಂದು ಸೋಜಿಗ. ಆದರೆ ಅವರು ಬ್ಯಾರಿಸ್ಟರ್ ಕೆನೆಡಿಯವರಲ್ಲಿ ಸ್ಟೆನೋಗ್ರಾಫರ್ ಆಗಿ ಎಷ್ಟು ಮೆಚ್ಚುಗೆ ಸಂಪಾದಿಸಿದರೆಂದರೆ ಅವರ ಸೂಚನೆಯಂತೆ ಬಂಗಾಲದ ಗವರ್ನರರು ಯತೀಂದ್ರರನ್ನು ಸ್ಟೆನೋಗ್ರಾಫರ್ ಕಾರ್ಯದರ್ಶಿಯಾಗಿ ನೇಮಿಸಿಕೊಂಡರು.




*1963ರ ನವೆಂಬರ್*
*ಸಂಚಿಕೆಯಲ್ಲಿ ಪ್ರಕಟವಾದದ್ದು*

ಬಂಗಾಲದ ವಿಭಜನೆಯ ನಂತರ ದೇಶದಲ್ಲಿ ಪ್ರವಹಿಸಿದ ರಾಷ್ಟ್ರೀಯ ಜಾಗೃತಿ ಯತೀಂದ್ರರನ್ನು ಕ್ರಾಂತಿಕಾರಿಯಾಗಿ ಮಾಡಿತು. ಅರವಿಂದರ ಅಧ್ಯಕ್ಷತೆಯಲ್ಲಿ ಸ್ಥಾಪಿತವಾದ ಕ್ರಾಂತಿ ಸಮಿತಿಗಳಿಗೆ ಯತೀಂದ್ರರು ಜೀವಾಳದಂತಾದರು. ಗವರ್ನರನ ಸಾಮೀಪ್ಯ ಹೊಂದಿದ್ದ ಅವರಿಂದ ಅನೇಕ ಗುಪ್ತ ಸಂಗತಿಗಳು ಕ್ರಾಂತಿಕಾರರಿಗೆ ತಿಳಿದು ಬರುತ್ತಿದ್ದವು.

1908ರಲ್ಲಿ ಕ್ರಾಂತಿಕಾರಿಗಳು ತಮ್ಮ ಪ್ರತೀಕಾರವನ್ನು ದೊಡ್ಡ ಮಾನದಲ್ಲಿ ಪ್ರಾರಂಭಿಸಿದರು. ಖುದೀರಾಮ ಬೋಸ್ ಮತ್ತು ಪ್ರಫುಲ್ಲ ಚಕ್ರವರ್ತಿ ಇವರು ಬಾಂಬಿನಿಂದ ಶ್ರೀಮತಿ ಮತ್ತು ಕುಮಾರಿ ಕೆನಡಿಯವರ ವಧೆ ಮಾಡಿದ ನಂತರ ಮಾಣಿಕತಲಾದಲ್ಲಿ ಗುಪ್ತ ಪೋಲೀಸರು ಒಂದು ಬಾಂಬು ಕಾರಖಾನೆಯನ್ನು ಕಂಡುಹಿಡಿದರು. ಶ್ರೀ ಅರವಿಂದ, ಅವರ ಸಹಾಯಕ ವಾರೀಂದ್ರಕುಮಾರ ಘೋಷ ಮೊದಲಾದ ಅಸಂಖ್ಯ ಮುಂದಾಳುಗಳನ್ನು ಬಂಧಿಸಲಾಯಿತು. ಅನಂತರ ಆರಂಭವಾದ ದಬ್ಬಾಳಿಕೆಯಲ್ಲಿ ರಾಷ್ಟ್ರೀಯತೆಯ ಜ್ಯೋತಿಯೆ ನಂದಿ ಹೋಗುವಂತೆ ಕಂಡಾಗ ಯತೀಂದ್ರರು ಇನ್ನು ಸುಮ್ಮನಿರಲಾಗದು ಎಂದು ನಿರ್ಣಯಿಸಿದರು.

ಅವರ ಹೊಡೆತ ನಾಟಕೀಯವೂ ಆಗಿತ್ತು. ಅಚೂಕವೂ ಆಗಿತ್ತು. ಅಲಿಪುರ ಒಳಸಂಚಿನ

ಪ್ರಕರಣದ ವಿಚಾರಣೆ ಪ್ರೆಸಿಡೆನ್ಸಿ ಕೋರ್ಟಿನಲ್ಲಿ ನಡೆದಿತ್ತು. ಪಬ್ಲಿಕ್ ಪ್ರಾಸಿಕ್ಯೂಟರ್ ಆಶುತೋಷ ವಿಶ್ವಾಸರು ಆರೋಪಿಗಳನ್ನು ಅನಾವಶ್ಯಕವಾಗಿ ಪೀಡಿಸಿದರೆಂಬ ಭಾವನೆ ಹಬ್ಬಿತ್ತು. ಒಂದು ದಿನ ಕೋರ್ಟಿನಲ್ಲಿ ಅದೇ ತಮ್ಮ ವಾದ ಮುಗಿಸಿ ಅವರು ಹೊರಹೊರಡುತ್ತಿದ್ದಾಗ ಒಂದು ಗುಂಡು ನೇರವಾಗಿ ಅವರೆದೆಯನ್ನು ಹೊಕ್ಕಿತು. ಕೊಲೆಗಡುಕ ಪಾರಾಗಲು ಯತ್ನಿಸಲಿಲ್ಲ. ಅವನ ಹೆಸರು ಚಾರುಬಸು ಎಂದಿತ್ತು. ಅವನ ವಾತಗ್ರಸ್ತ ಬಲಗೈಗೆ ಒಂದು ಬಂದೂಕು ಕಟ್ಟಲ್ಪಟ್ಟಿತ್ತು. ಎಡಗೈಯಿಂದ ಬಲಗೈಯನ್ನೆತ್ತಿ ಆತ ಗುರಿ ಹಿಡಿದು ಹೊಡೆದಿದ್ದ. ಅವನನ್ನು ಹಿಡಿದಾಗ, "ಆಶುಬಾಬು ಗುಂಡಿಗೆ ಬಲಿಯಾಗಬೇಕು. ನಾನು ಗಲ್ಲಿಗೇರಬೇಕು-ಇದು ವಿಧಿಲಿಖಿತವಾಗಿತ್ತು!" ಎಂದಷ್ಟೇ ಆ ಹುಡುಗ ಹೇಳಿದ. ಏನು ಮಾಡಿದರೂ ಆತ ತಾನು ಯತೀಂದ್ರರ ಶಿಷ್ಯ ಎಂದು ಹೇಳಲಿಲ್ಲ.

ಜನವರಿ 1910ರಲ್ಲಿ ಕಲಕತ್ತಾ ಹೈಕೋರ್ಟಿನಲ್ಲಿ ಕುಖ್ಯಾತ ಪೋಲೀಸ್ ಸುಪರಿಂಟೆಂಡೆಂಟ್ ಶಂಸುಲ್ ಆಲಂ ಗುಂಡಿಗಾಹುತಿಯಾದ. ಅಲೀಪುರ ಪ್ರಕರಣದಲ್ಲಿ ಸಿಕ್ಕಿದ ಸ್ತ್ರೀಯರನ್ನಾತ ಹಿಂಸಿಸಿದ್ದ. ಅವನನ್ನು ಕೊಂದಾತ ಯತೀಂದ್ರರ ಇನ್ನೊಬ್ಬ ಬಾಲ ಶಿಷ್ಯ-ವೀರೇಂದ್ರದತ್ತ ಗುಪ್ತ.

ದೇಶದಲ್ಲೆಲ್ಲ ಅನೇಕ ದರೋಡೆಗಳಾಗಿದ್ದವು. ಯತೀಂದ್ರರಿಗೆ ಇಷ್ಟವಿಲ್ಲದಿದ್ದರೂ ಅವರು ಇದಕ್ಕೊಪ್ಪಬೇಕಾಯಿತು. ನ್ಯಾಯಸ್ಥಾನದಲ್ಲಿ ಕ್ರಾಂತಿಕಾರರ ಸಂರಕ್ಷಣೆಗೆ ಹಣ ಬೇಕಾಗಿತ್ತು. ಡೈಮಂಡ್ ಹಾರ್ಬರ್ ದರೋಡೆಯ ಸಂಬಂಧದಲ್ಲಿ ಬಂಧಿತನಾದ ಕ್ರಾಂತಿಕಾರ ಲಲಿತ ಚಕ್ರವರ್ತಿ ಪೋಲೀಸರ ಪೀಡೆ ತಾಳಲಾರದೆ ಯತೀಂದ್ರನಾಥರಾದಿಯಾಗಿ 32 ಕ್ರಾಂತಿಕಾರರ ಹೆಸರುಗಳನ್ನು ಹೇಳಿದ್ದ. ಅದೇ ಸಮಯದಲ್ಲಿ ಶಂಸುಲ್ ಆಲಂರನ್ನು ಕೊಂದ ವೀರೇನದತ್ತನೂ ಪೋಲೀಸರ ಛಲನೆಯನ್ನು ಸಹಿಸಲಾರದೆ ಯತೀಂದ್ರನಾಥರ ಹೆಸರನ್ನು ಹೇಳಿದ.

ಶಂಸುಲ್ ಆಲಂ ಕೊಲೆಯಾದ ಮೂರು ದಿನಗಳ ನಂತರ 17, ಜನವರಿ 1910ರಂದು ಯತೀಂದ್ರನಾಥರು ಬಂಧಿಸಲ್ಪಟ್ಟರು. ಯತೀಂದ್ರನಾಥರ ಸಹನ ಶಕ್ತಿಯೆದುರು ಪೋಲೀಸರ ಹಿಂಸಾಶಕ್ತಿ ಸೋಲನ್ನೊಪ್ಪಿಕೊಳ್ಳಬೇಕಾಯಿತು. ಅವರು ಬಾಯ್ಬಿಡಲಿಲ್ಲ. 'ಹೌರಾ ಒಳಸಂಚು' ಎಂಬ ಹೆಸರಿನಲ್ಲಿ ಯತೀಂದ್ರನಾಥರ ಮೇಲೆ ಖಟ್ಲೆ ನಡೆಯಿತು. ಕಾಯದೆಯ ಗತ್ತುಗಳಲ್ಲಿ ಅಪ್ರತಿಮರಾಗಿದ್ದ ಬ್ಯಾರಿಸ್ಟರ್ ಜೆ.ಎನ್.ರಾಯರು ಯತೀಂದ್ರನಾಥರ ಮೇಲಿನ ಆರೋಪಗಳೆಲ್ಲ ಸುಳ್ಳು ಎಂದು ಸಿದ್ಧಮಾಡಿದರು. ಹದಿನೆಂಟು ತಿಂಗಳ ಕಾಲ ಜೇಲಿನಲ್ಲಿ ನರಕಯಾತನೆಯನ್ನು ಅನುಭವಿಸಿದ ನಂತರ ಯತೀಂದ್ರನಾಥರು 1911ರಲ್ಲಿ ಬಿಡುಗಡೆ ಹೊಂದಿದರು. ಯತೀಂದ್ರರು ದರೋಡೆಗಳನ್ನು ನಿಲ್ಲಿಸಿದರು. ಅವರೀಗ ಜೆಸ್ಸೂರಿನಲ್ಲಿ ಕಂಟ್ರಾಕ್ಟರರಾಗಿದ್ದರು. ಅವರ ಮಿತ್ರರಲ್ಲಿ ಅಮರೇಂದ್ರ ಚಕ್ರವರ್ತಿ "ಶ್ರಮಜೀವಿ ಸಮದಾಯ" ಎಂಬ ಜವಳಿ ಅಂಗಡಿ ತೆರೆದಿದ್ದ. ಹರಿ ಚಕ್ರವರ್ತಿ "ಹ್ಯಾರಿ ಅಂಡ್ ಸನ್ಸ್" ಎಂಬ ಕಂಪನಿ ಪ್ರಾರಂಭಿಸಿದ್ದ. ಸುರೇಶ ಮಜುಮುದಾರ ಗೌರಾಂಗ ಪ್ರೆಸ್ಸಿನ ಮಾಲಕನಾಗಿದ್ದ.

ಜೇಲಿನ ರುಚಿ ಕಂಡ ಯತೀಂದ್ರ, ಅಂಜಿ ತಣ್ಣಗಾಗಿದ್ದಾನೆ, ಭಾರತದ ಕ್ರಾಂತಿ ಅಡಗಿ ಹೋಯಿತು ಎಂದು ಸರಕಾರ ಮೈಮರೆತಿತು. ಆದರೆ 1914ರಲ್ಲಿ ಯುದ್ಧಾರಂಭಕ್ಕೆ ತುಸುವೆ ಮೊದಲು ವಿದೇಶಿ ಶಸ್ತ್ರಾಸ್ತ್ರಗಳ ವ್ಯಾಪಾರ ಮಾಡುತ್ತಿದ್ದ ರೋಡಾ ಕಂಪನಿಯ ಮೇಲೆ ಸಹಸಾ ದಾಳಿಯಾಗಿ ಅತ್ಯಂತ ಶಕ್ತಿಶಾಲಿಯಾದ ಪಿಸ್ತೂಲುಗಳು 46,000 ಸುತ್ತು ಗುಂಡು ಸಹಿತ ಕಾಣೆಯಾದಾಗ ಕ್ರಾಂತಿಕಾರರು ಸುಮ್ಮನಿದ್ದಿಲ್ಲವೆಂದು ಸರಕಾರಕ್ಕೆ ಅರಿ

ವಾಯಿತು.

ಮಹಾಯುದ್ಧ ಆರಂಭವಾಗುತ್ತಲೇ ಭಾರತದಲ್ಲಿ ಬ್ರಿಟಿಶ್ ಸೈನ್ಯದ ಶಕ್ತಿ ನಾಮಮಾತ್ರದ್ದಾಗುವುದು. ಆಗ ದೇಶದಲ್ಲಿ ಬಂಡೆದ್ದು ಹೊರಗಿಂದ ಅದಕ್ಕೆ ಸಹಾಯ ಸಿಕ್ಕಿತಾದರೆ ಸ್ವತಂತ್ರ ಭಾರತೀಯ ಸರಕಾರ ಸ್ಥಾಪಿತವಾಗುವುದು ಎಂದು ಯತೀಂದ್ರನಾಥರು ಲೆಕ್ಕ ಹಾಕಿದ್ದರು. ಜರ್ಮನಿ ಧನ ಮತ್ತು ಶಸ್ತ್ರಾಸ್ತ್ರ ಸಹಾಯದ ಆಶ್ವಾಸನವನ್ನಿತ್ತಿತ್ತು.

1915 ಫೆಬ್ರುವರಿಯಲ್ಲಿ ಬೆನ್ನು ಬೆನ್ನಿಗೆ ಎರಡು ದರೋಡೆಗಳಾದವು. ಕಲಕತ್ತೆಯ ಚಾರ್ಟರ್ಡ್ ಬ್ಯಾಂಕಿನಿಂದ ಬರ್ಡ್ ಅಂಡ್ ಕಂಪನಿ ಎಂಬ ಬ್ರಿಟಿಶ್ ಗಿರಣಿಗೆ ಸಂಬಳಕ್ಕಾಗಿ ಹಣ ಒಯ್ಯುತ್ತಿದ್ದಾಗ ಹೂಗ್ಲಿಯ ಬಳಿ ಅದರ ಮೇಲೆ ದಾಳಿ ಮಾಡಿ ರೂ. 18,000 ದೊಡನೆ ಕ್ರಾಂತಿಕಾರರು ಮಾಯವಾದರು. ಅನಂತರ ಬೆಲಿಯಾ ಘಾಟಿನಲ್ಲಿ ಒಬ್ಬ ವ್ಯಾಪಾರಿಯಿಂದ ರೂ. 20,000 ಸುಲಿಗೆ ಮಾಡಲಾಯಿತು.

ದಕ್ಷಿಣೇಶ್ವರ ರಾಮಮಣಿ ಬಾಗ್‌ನಲ್ಲಿ ಯತೀಂದ್ರನಾಥ, ರಾಸಬಿಹಾರಿ ಬೋಸ್ ಮತ್ತು ಅಮರ ಚಟರ್ಜಿ ಚರ್ಚಿಸುತ್ತ ಕುಳಿತಿದ್ದರು. ಯತೀಂದ್ರನಾಥರು ಕಲಕತ್ತೆಯ "ಫೋರ್ಟ್ ವಿಲಿಯಂಅನ್ನು ಗೆದ್ದುಕೊಳ್ಳಬೇಕು, ಸಾಧ್ಯವೇ?" ಎಂದು ಕೇಳಿದರು. "ಗೆದ್ದುಕೊಳ್ಳುತ್ತೇನೆ" ಎಂದರು ರಾಸಬಿಹಾರಿ. ಫೋರ್ಟ್ ವಿಲಿಯಂ ಬ್ರಿಟಿಶರ ಅತ್ಯಂತ ಶಕ್ತಿಶಾಲಿಯಾದ ಕೇಂದ್ರವಾಗಿತ್ತು. ಶೀಖ ಕಾರ್ಯಕರ್ತ ಗೇಂದಾಸಿಂಹನೊಡನೆ ಮಾತುಕತೆ ನಡೆಸಿ ಕೋಟೆಯನ್ನು ಕೈವಶ ಮಾಡಿಕೊಳ್ಳುವ ಹಂಚಿಕೆಯನ್ನು ರಾಸಬಿಹಾರಿ ಮಾಡಿದರು.

ಇದೇ ಸಮಯದಲ್ಲಿ ಯತೀಂದ್ರನಾಥರ ದೂತ ಸತ್ಯೇನಸೇನರು ಅಮೇರಿಕದಿಂದ ಬಂಡಾಯ ಪಕ್ಷದ ಪಿಂಗಳೆ, ಕರ್ತಾರಸಿಂಗ ಮೊದಲಾದ ನಾಲ್ಕು ಸಾವಿರ ಜೊತೆಗಾರರೊಂದಿಗೆ ಜಪಾನಿನ ಮಾರ್ಗವಾಗಿ ಸ್ವದೇಶಕ್ಕೆ ಬಂದರು.

1915 ಫೆಬ್ರುವರಿ 21ರಂದು ಈ ಸಾಮೂಹಿಕ ಕ್ರಾಂತಿಯಾಗಬೇಕೆಂದು ಗೊತ್ತುಪಡಿಸಲಾಗಿತ್ತು. ಸಿಂಗಾಪುರದಲ್ಲಿ ತಳವೂರಿದ ಭಾರತೀಯ ಸೈನ್ಯವೂ ಅದೇ ಕಾಲಕ್ಕೆ ಬಂಡೇಳಬೇಕೆಂದು ಗೊತ್ತಾಗಿತ್ತು.

ಸಿಂಗಾಪುರದಲ್ಲಿ 5ನೇ ಕಾಲ್ದಲದ ಸೈನಿಕರು ಬಂಡೆದ್ದು ಬಿಳಿ ಅಧಿಕಾರಿಗಳನ್ನು ಬಂಧಿಸಿ ಅಧಿಕಾರವನ್ನು ಕಸಿದುಕೊಂಡು ಸ್ವತಂತ್ರರಾದರು. ಆದರೆ ಸಹಕಾರಿಯೊಬ್ಬನ ವಿಶ್ವಾಸಘಾತದಿಂದ ಫೋರ್ಟ್ ವಿಲಿಯಂನ ಬಂಡಾಯ ವಿಫಲವಾಗಿ ಪಿಂಗಳೆ ಸೆರೆಸಿಕ್ಕರು. ರಾಸಬಿಹಾರಿ ತಪ್ಪಿಸಿಕೊಂಡರು. ಭಾರತದ ಕ್ರಾಂತಿ ವಿಫಲವಾಗಿ ಹೊರಗಿನಿಂದ ಯಾವ ಸಹಾಯವೂ ಬಾರದ್ದರಿಂದ ಒಂದು ವಾರದ ಶೂರ ಪ್ರತಿಭಟನೆಯ ನಂತರ ಸಿಂಗಾಪುರದ ಸೈನಿಕರು ಶರಣು ಹೋಗಬೇಕಾಯಿತು.

ಯತೀಂದ್ರನಾಥರು ಕಂಗೆಡಲಿಲ್ಲ. 1915 ಮೇ 12ರಂದು ರಾಸಬಿಹಾರಿಯವರನ್ನು ಶಸ್ತ್ರಾಸ್ತ್ರ ಸಂಗ್ರಹಕ್ಕಾಗಿ ಜಪಾನಿಗೆ ಕಳಿಸಿದರು. ಜರ್ಮನ್ನರೊಡನೆ ಸಂಧಾನಕ್ಕಾಗಿ ತರುಣ ಎಂ.ಎನ್.ರಾಯ್‌ರು ಬಟೇವಿಯಕ್ಕೆ (ಇಂಡೋನೇಶಿಯ) ಹೋದರು.

ಜರ್ಮನಿಯ ವಿದೇಶ ಶಾಖೆ ಮತ್ತು ಸಂರಕ್ಷಣ ಶಾಖೆಗಳು ಭಾರತೀಯ ಕ್ರಾಂತಿಕಾರರಿಗೆ ಅಮೇರಿಕನ್ ಶಸ್ತ್ರಾಸ್ತ್ರಗಳನ್ನು ಪೂರೈಸುವ ಯೋಜನೆಗೆ ಚಾಲನೆ ಕೊಟ್ಟವು. 1915 ಮಾರ್ಚ ತಿಂಗಳಲ್ಲಿ ಅಮೇರಿಕದಿಂದ ಮರಳಿ ಬಂದ ಜತೇನ್ ಲಾಹಿರಿ ಸಾನ್‌ಫ್ರಾನ್ಸಿಸ್ಕೊದಿಂದ "ಮಾವೆರಿಕ್" ಎಂಬ ಹಡಗವು ಏಪ್ರಿಲ್ 22ರಂದು ಭಾರತಕ್ಕೆ ಹೊರಡುವುದೆಂದೂ ಹಾದಿಯಲ್ಲಿ "ಎನಿ ಲಾರ್‌ಸೇನ್" ಎಂಬ ಹಡಗು ಅದನ್ನು ಕೂಡಿಕೊಳ್ಳುವುದೆಂದೂ ತಿಳಿಸಿದರು. ಮೂರನೆಯ ಹಡಗ "ಹೆನ್ರಿ ಎಸ್" ಎಂಬುದು ಮನಿಲಾದಿಂದ

ಶಾಂಘಾಯಿಗೆ ಹೋಗುವುದು. ಇವುಗಳಲ್ಲಿ ಅಪಾರ ಧನವೂ ಶಸ್ತ್ರಾಸ್ತ್ರಗಳೂ ಇರುವವು. ಒಂದು ಹಡಗು ನೌಖಾಲಿ ಅಥವಾ ಹಾಥಿಯಾಕ್ಕೆ ಹೋಗುವುದು. ಇನ್ನೊಂದು ಸುಂದರ ವನಕ್ಕೆ ಹೋಗುವುದು. ಅಲ್ಲಿ ಮಾಲು ಇಳಿಸಿ ವಿಪಿನ ಗಾಂಗುಲಿ, ಎಂ.ಎನ್.ರಾಯ್ ಮುಂತಾದವರು ಪ್ರೆಸಿಡೆನ್ಸಿ ವಿಭಾಗಕ್ಕೆ ತೆರಳುವರು. ಬಂಗಾಲದ ಮೂರು ಮುಖ್ಯ ರೇಲ್ವೆಗಳ ಓಡಾಟ ತಡೆಯಲು ಸ್ವತಃ ಯತೀಂದ್ರ, ಬೋಲಾನಾಥ ಚಟರ್ಜಿ ಹಾಗೂ ಸತೀಶ ಚಕ್ರವರ್ತಿ ವ್ಯವಸ್ಥೆ ಮಾಡುವರು. ಕಲಕತ್ತೆಯ ಫೋರ್ಟ್ ವಿಲಿಯಂ ಮತ್ತು ಬೇರೆಡೆಗಳಲ್ಲಿ-ರುವ ದೇಶಿ ಸೈನಿಕರೆಲ್ಲ ಬಂಡಾಯದಲ್ಲಿ ಸೇರಿಕೊಳ್ಳುವರು. ಕಲಕತ್ತೆಯನ್ನು ವಶಪಡಿಸಿಕೊಂಡು ಯತೀಂದ್ರನಾಥರು ಸ್ವತಂತ್ರ ಭಾರತದ ಧ್ವಜವನ್ನು ಹಾರಿಸುವರು. ನಾಲ್ಕನೆ ಹಡಗು ಓಡಿಸ್ಸಾದ ಬಾಲೇಶ್ವರಕ್ಕೆ ಹೋಗುವುದು. ಅಲ್ಲಿ ಸ್ವತಃ ಯತೀಂದ್ರನಾಥರು ಶಸ್ತ್ರಾಸ್ತ್ರಗಳನ್ನು ಪಡೆದುಕೊಂಡು ಮೋದಿನಿಪುರಕ್ಕೆ ಹೋಗುವರು. ಅಖಿಲ ಭಾರತದಲ್ಲಿ, ಜೊತೆಗೆ ಇಡೀ ಏಶಿಯದಲ್ಲಿ ಒಮ್ಮೆಲೆ ಕ್ರಾಂತಿ ಏಳುವುದು-ಇದು ಹಂಚಿಕೆಯ ಹೊಳಹಾಗಿತ್ತು.

ಆಗ ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಇಡೀ ಭಾರತದಲ್ಲಿ ಕೇವಲ 12,000 ಬ್ರಿಟಿಶ್ ಸೈನಿಕರಿದ್ದರು. ಜರ್ಮನಿಯ ವಿರುದ್ಧ ಹೋರಾಟ ನಡೆಸಿದ್ದ ಬ್ರಿಟಿಶರಿಗೆ ಹೊರಗಿನಿಂದ ಸಹಾಯ ತರುವುದು ಸುಲಭವಾಗಿರಲಿಲ್ಲ.

ಆದರೆ ಒಂದು ದಿನ ಕಲಕತ್ತೆಯ ಪಥುರಿಯಾ ಘಾಟಿನ ಕೇಂದ್ರದಲ್ಲಿ ಯತೀಂದ್ರನಾಥರು ಯದುಗೋಪಾಲ, ಎಂ.ಎನ್.ರಾಯ್ ಮೊದಲಾದವರೊಡನೆ, ಗುಪ್ತಾಲೋಚನೆ ನಡೆಸುತ್ತಿದ್ದಾಗ ಹೊರಗೊಂದು ನೆರಳು ಕಾಣಿಸಿತು. ಜಾಗರೂಕನಾಗಿದ್ದ ಚಿತ್ತಪ್ರಿಯ ರಾಯ ಚೌಧರಿ ಗುಂಡು ಹಾರಿಸಿದ. ಗುಪ್ತ ಪೋಲೀಸ ನೀರೋಧ ಹಲಧರ ಭೂಮಿಗುರುಳಿದ. ಯತೀಂದ್ರನಾಥರ ಆದೇಶದಂತೆ ಕ್ರಾಂತಿಕಾರರೆಲ್ಲ ಚದುರಿದರು. ಆದರೆ ಸಾಯುವ ಮೊದಲು ನೀರೋಧನು ಯತೀಂದ್ರನಾಥರ ಹೆಸರನ್ನು ತಿಳಿಸಿದ.

ಯತೀಂದ್ರನಾಥರನ್ನು ಹಿಡಿದುಕೊಟ್ಟವರಿಗೆ ಸಹಸ್ರಗಟ್ಟಲೆ ಇನಾಮು ಕೊಡುವುದಾಗಿ ಬ್ರಿಟಿಶ್ ಸರಕಾರ ಸಾರಿತು. ಆದರೆ ಯತೀಂದ್ರನಾಥರು ಮಾತ್ರ ನಿರ್ಭಯದಿಂದ ಕಲಕತ್ತೆಯ ಬೀದಿಗಳಲ್ಲಿ ಸಂಚರಿಸುತ್ತಿದ್ದರೂ ಪೋಲೀಸರಿಗೆ ಅವರನ್ನು ಹಿಡಿಯಲಾಗುತ್ತಿರಲಿಲ್ಲ.

ಹಡಗು ಬರುವ ಸಮಾಚಾರ ತಿಳಿದು ಯತೀಂದ್ರರು ಬಾಲೇಶ್ವರಕ್ಕೆ ತೆರಳಿದರು. ಅಲ್ಲಿಂದ 30 ಮೈಲು ದೂರದ ಮಯೂರಭಂಜದ ದಟ್ಟಡವಿಯಾದ ಕಪ್ತಿಪೋಡಾದಲ್ಲಿ ವಾಸ್ತವ್ಯ ಹೂಡಿ ಯತೀಂದ್ರನಾಥರು ಹಡಗಿನ ದಾರಿ ಕಾಯುತ್ತ ಕುಳಿತರು. ಅಲ್ಲಿ ಅವರು ಸಾಧು ಬಾಬಾ ಎಂದು ಹೆಸರಾಗಿದ್ದರು. ದೇಶದ ನಾನಾ ಭಾಗಗಳಿಂದ ಕ್ರಾಂತಿಕಾರರು ಬಂದು ಅವರ ಸಲಹೆ ಪಡೆದು ತೆರಳುತ್ತಿದ್ದರು. ಪೋಲೀಸರನ್ನು ಮಂಕುಗೊಳಿಸಲು ಅಲ್ಲಿ ಅವರೊಂದು ಶಾಲೆ ತೆರೆದರು. ಉದ್ದರಿ ಸಾಮಾನು ಪೂರೈಸುವ ಒಂದು ಅಂಗಡಿಯನ್ನು ಆರಂಭಿಸಿದರು.

ಆದರೆ ಜೂನ್ ಕೊನೆಯವರೆಗೂ ಹಡಗು ಬರಲೇ ಇಲ್ಲ. ಭಾರತಕ್ಕೆ ಬರುತ್ತಿದ್ದ ಹಡಗುಗಳ ಸಮಾಚಾರ ಬ್ರಿಟಿಶರಿಗೆ ತಿಳಿದುಹೋಗಿತ್ತು. ಮಿತ್ರರಾಷ್ಟ್ರಗಳ ನಾಲ್ಕು ಹಡಗುಗಳು ''ಮಾವೆರಿಕ್'' ಹಡಗಿನ ಬೆನ್ನು ಹತ್ತಿದ್ದವು. ಅದನ್ನು ಕಂಡ ''ಮಾವೆರಿಕ್'' ಹಡಗು ತನ್ನಲ್ಲಿದ್ದ ಕಾಗದ ಪತ್ರ ಶಸ್ತ್ರಾಸ್ತ್ರಗಳನ್ನೆಲ್ಲ ಸಮುದ್ರದಲ್ಲಿ ಚೆಲ್ಲಿ ಕೊಟ್ಟಿತು. ಆದರೆ ಜಾವಾ-ದ್ವೀಪದಲ್ಲಿ ಈ ಹಡಗು ಸೆರೆಯಾಯಿತು. ಈ ದುಃಖ ಸಮಾಚಾರ ತಿಳಿದಾಗ ಯತೀಂದ್ರನಾಥರು ಎಂ.ಎನ್.ರಾಯ್ ಮತ್ತು ಫಣಿ ಚಕ್ರವ

ರ್ತಿಯವರನ್ನು ಬಟೇವಿಯಕ್ಕೆ ಪುನಃ ಕಳಿಸಿದರು. ಶಾಂಘಾಯಿಯಲ್ಲಿದ್ದ ಜರ್ಮನ್ ರಾಯಭಾರಿಯ ಜೊತೆ ಮಾತಾಡಿ ಮತ್ತೆರಡು ಹಡಗುಗಳ ವ್ಯವಸ್ಥೆ ಮಾಡಿಸಿದರು.

ಭಾರತದಲ್ಲಿ ಬಂಧನ ಸತ್ರ ಪ್ರಾರಂಭವಾಯಿತು. ದಿಲ್ಲಿಯ ಕೇಂದ್ರ ಗುಪ್ತಚಾರ ಕಚೇರಿಯು ದೃಢಸಂಕಲ್ಪದಿಂದ ಯತೀಂದ್ರನಾಥರನ್ನು ಹುಡುಕತೊಡಗಿತು.

ಕಲಕತ್ತೆಯಲ್ಲಿ ಯತೀಂದ್ರನಾಥರ ಪತ್ತೆ ಹತ್ತದಾದಾಗ ಕೇಂದ್ರ ಗುಪ್ತಚರ ದಳದ ಡಿ.ಆಯ್.ಜ.ಡೆನ್‌ಹಾರ್ವನು ಪೋಲೀಸ್ ಡೆಪ್ಯೂಟಿ ಕಮಿಶನರ್ ಚಾರ್ಲಸ್ ಟೆಗಾರ್ಟ್ ಮತ್ತು ಸುಸಜ್ಜಿತ ಪಡೆಯೊಂದಿಗೆ ಸಪ್ಟಂಬರ 4 ರಂದು ಬಾಲೇಶ್ವರಕ್ಕೆ ಬಂದರು. ಅಲ್ಲಿ ಕ್ರಾಂತಿಕಾರಿ ಶೈಲೇಶ್ವರ ಬೋಸರು ನಡೆಸುತ್ತಿದ್ದ 'ಯುನಿವರ್ಸಲ್ ಅಂಪೋರಿಯಂ'ನ ಮೇಲೆ ದಾಳಿ ಮಾಡಿದರು. ಅವರಿಗೆ ದೊರೆತ ಕಾಗದಪತ್ರಗಳ ಆಧಾರದಿಂದ ಕಪ್ತಿಪೋಡಾಕ್ಕೆ ಹೋದರು. ಸಪ್ಟಂಬರ 7 ರಂದು ಸಶಸ್ತ್ರ ಪೋಲೀಸರ ಸಹಿತ ಇವರು ಕಪ್ತಿಪೋಡಾದ ಡಾಕ್ ಬಂಗಲೆಯಲ್ಲಿ ವಾಸ್ತವ್ಯ ಹೂಡಿದರು. ಇವರನ್ನೆಲ್ಲ ಕದ್ದು ನೋಡಿ ಬಂದ ಯತೀಂದ್ರನಾಥರು ಆಶ್ರಮಕ್ಕೆ ಬಂದವರೇ ಮುಂದಿನ ಕಾರ್ಯಕ್ರಮವನ್ನು ಸಿದ್ಧಪಡಿಸಿದರು.

ಭಾರತೀಯ ಕ್ರಾಂತಿಕಾರರ ಚರಿತ್ರೆಯಲ್ಲೇ ನ ಭೂತೋ ನ ಭವಿಷ್ಯತಿ ಎನಿಸಿದ ಬೇಟೆ ಆಗ ಪ್ರಾರಂಭವಾಯಿತು. ಆಗ ಯತೀಂದ್ರರೊಡನೆ ಚಿತ್ತಪ್ರಿಯ, ಮನೋರಂಜನರು ಮಾತ್ರ ಇದ್ದರು. ಅವರೊಂದಿಗೆ ಇವರು ಕಣ್ಮರೆಯಾಗಿ 12 ಮೈಲು ದೂರದಲ್ಲಿದ್ದ ತಾಲಿಡಹ ಗ್ರಾಮದಲ್ಲಿ ಆಶ್ರಯ ಪಡೆದರು. ಸಪ್ಟಂಬರ 9ರಂದು ಪ್ರಾತಃಕಾಲ ಬಾಲೇಶ್ವರದ ಬುಡಾಬಾಲಂ ನದಿಯ ದಂಡೆಯಲ್ಲಿ ಯತೀಂದ್ರನಾಥರು ತಮ್ಮ ಶಿಷ್ಯರೊಂದಿಗೆ ನಿಂತಿದ್ದಾಗ, ''ಯಾವ ಬಂಗಾಲಿ ದರೋಡೆಗಾರರನ್ನು ಹಿಡಿದುಕೊಟ್ಟರೆ ಸರಕಾರ ದೊಡ್ಡ ಇನಾಮು



''ಪ್ರೀಯೆ.. ಪ್ರತಿಕ್ಷಣ ನಿನ್ನೊಡನೆ ಮಾತನಾಡಬೇಕು ಅನಿಸುತ್ತದೆ. ಫೋನಿನಲ್ಲಿ ಮಾತಾಡೋಣ ಅಂದ್ರೆ ವಿರೋಧ ಪಕ್ಷದವರ ಭಯ..''

ಕೊಡುವುದೋ ಅವರೇ ಇವರು'' ಎಂದೊಬ್ಬ ಅಂಬಿಗ ಹೇಳಲು ನದಿಯ ಎರಡೂ ದಂಡೆಗಳಲ್ಲಿದ್ದ ಹಳ್ಳಿಗಳ ಜನರು ಇವರನ್ನು ಹಿಡಿಯಲು ಆತುರರಾದರು. ನಾವು ದರೋಡೆಗಾರರಲ್ಲ ಎಂದು ಯತೀಂದ್ರನಾಥರು ತಿಳಿಹೇಳಿದುದನ್ನು ಅವರು ಕೇಳಲಿಲ್ಲ. ಯತೀಂದ್ರನಾಥರು ತ್ವರಿತಗತಿಯಿಂದ ಅಡವಿಯತ್ತ ಸಾಗಿದರು. ಊರೂರು ಕಳೆದಂತೆ ಅವರನ್ನು ಹಿಡಿಯಲು ಬೆನ್ನಟ್ಟಿ ಬರುವವರ ಸಂಖ್ಯೆ ಹೆಚ್ಚಿತು. ಕಾಮ್ತನಾ ಗ್ರಾಮದ ಗಡಿಯಲ್ಲಿ ಇಬ್ಬರು ದುಸ್ಸಾಹಸಿಗಳು ಯತೀಂದ್ರನಾಥರನ್ನು ಹಿಡಿದರು. ಮನೋರಂಜನ ಅಳುಕದೆ ಗುಂಡುಹಾರಿಸಿದ. ''ದರೋಡೆಗಾರರು'' ಎಂದು ಕೂಗುತ್ತ ಜನ ಹಿಂದಕ್ಕೋಡಿದರು. ಆದರೆ ಅದೇ ಎರಡು ಜನ ಯತೀಂದ್ರ

ನಾಥರನ್ನು ಮತ್ತೆ ಹಿಡಿದುಕೊಂಡಾಗ ಮನೋರಂಜನ ಮತ್ತೆ ಗುಂಡು ಹಾರಿಸಿದ. ಅವರಿಬ್ಬರೂ ಮಡಿದು ಬಿದ್ದರು. ಹಳ್ಳಿಗರು ಹೆದರಿ ನಿಂತರು. ಯತೀಂದ್ರನಾಥರು ಮಯೂರಭಂಜ ರಸ್ತೆಗೆ ಬಂದರು. ಅಷ್ಟರಲ್ಲಿ ಆ ಕಡೆಯ ಹಳ್ಳಿಗರು ಹೋಗಿ ಪೋಲೀಸರಿಗೆ ಸಮಾಚಾರ ತಿಳಿಸಿದ್ದರು. ಯತೀಂದ್ರರ ಹಿಂದೆ ಮುಂದೆ ಪೋಲೀಸರು ಬಂದಿದ್ದರು.

ದಿನಗಟ್ಟಲೆ ಊಟ, ನಿದ್ದೆ, ವಿಶ್ರಾಂತಿಗಳಿಲ್ಲದೆ ಎಲ್ಲರೂ ಕಂಗೆಟ್ಟಿದ್ದರು. ಆಹಾರವಿಲ್ಲದೆ ನಡೆಯದು ಎಂದು ಯತೀಂದ್ರನಾಥರು ಒಂದು ಅಂಗಡಿಯಲ್ಲಿ ಒಂದಿಷ್ಟು ತಿಂಡಿ ಸಾಮಾನು ಕೊಂಡು ಹತ್ತು ರೂಪಾಯಿಯ ನೋಟೆಸೆದು ಹೊರಟರು. ಇವರೇ ಪೋಲೀಸರಿಗೆ ಬೇಕಾದವರು ಎಂದು ಆ ಅಂಗಡಿಕಾರನಿಗೆ ಸಂಶಯ ಬಂತು. ಮತ್ತೆ ಜನ ಅವರ ಬೆನ್ನಟ್ಟಿದರು.

ಸಾಯಿಪಾಡಾದ ಸಮೀಪ ಪೋಲೀಸರು ಎದುರು ಬಂದರು. ಒಬ್ಬ ಸಬ್ ಇನಸ್ಪೆಕ್ಟರ್ ಯತೀಂದ್ರರನ್ನು ಹಿಡಿದುಕೊಂಡ. ಆದರೆ ಯತೀಂದ್ರರು ಕೊಸರಿಕೊಂಡ ರಭಸಕ್ಕೆ ಆತ ಹತ್ತಾರು ಮಾರು ದೂರ ನೆಗೆದು ಬಿದ್ದ. ಗುಂಡುಗಳು ಹಾರಿದವು. ಕ್ರಾಂತಿಕಾರರು ನದಿಗೆ ಧುಮುಕಿದರು. ಈಸಿ ನದಿದಾಟಿ ಓಡೋಡುತ್ತ ಹೊಲವನ್ನು ದಾಟಿ ಅಡವಿ ಸೇರಿದರು. ನೀರೇನ್ ಅಸ್ವಸ್ಥನಾಗಿದ್ದ. ಅದನ್ನು ಕಂಡು ಯತೀಂದ್ರನಾಥರು ಗಿಡಗಳಿಂದ ಮರೆಯಾಗಿದ್ದ ಎತ್ತರದ ದಿನ್ನೆಯೊಂದನ್ನು ಆಶ್ರಯಕ್ಕಾಗಿ ಆರಿಸಿಕೊಂಡರು. ಬಂದೂಕು ಹಿಡಿದು ಸನ್ನದ್ಧರಾಗಿರಲು ಪರಿವಾರದವರಿಗೆ ತಿಳಿಸಿದರು.

''ಫಾಯರ್'' ಯತೀಂದ್ರನಾಥರು ಗರ್ಜಿಸಿದರು. ಅಚಾನಕವಾದ ಆಕ್ರಮಣದಿಂದ ಬ್ರಿಟಿಶರ ವ್ಯೂಹ ಚಲ್ಲಾಪಿಲ್ಲಿಯಾಯಿತು. ಪೋಲೀಸರು ಹೌಹಾರಿದರು.

ಕಾಳಗ ತಾಸುಗಟ್ಟಲೆ ಮುಂದೆ ಸಾಗಿತು. ಚಿತ್ತಪ್ರಿಯ ಸ್ವರ್ಗ ಸೇರಿದ. ಯತೀಂದ್ರರ ಮೈಗೆ ಹಲವಾರು ಗುಂಡುಗಳು ನಟ್ಟು ರಕ್ತ ಧಾರೆಧಾರೆಯಾಗಿ ಹರಿಯತೊಡಗಿತ್ತು. ಮದ್ದು ಗುಂಡುಗಳ ಸಂಗ್ರಹ ಮುಗಿಯುತ್ತ ಬಂದಿತ್ತು. ಕೊನೆಗೆ ಅನಿವಾರ್ಯವಾದದ್ದೇ ಇತ್ತು: ಬ್ರಿಟಿಶ್ ಅಧಿಕಾರಿಗಳು ಮುಂದೆ ಬಂದು ಈ ಕ್ರಾಂತಿಕಾರರಿಗೆ ವೀರೋಚಿತ ಪ್ರಣಾಮ ಸಲ್ಲಿಸಿ ಯತೀಂದ್ರರನ್ನು ಬಂಧಿಸಿದರು.

ಬಾಲೇಶ್ವರದ ಸರಕಾರಿ ದವಾಖಾನೆಯಲ್ಲಿ ಶಸ್ತ್ರಚಿಕಿತ್ಸೆಗೆ ಮೊದಲು ಯತೀಂದ್ರನಾಥರು, ''ನಡೆದದ್ದಕ್ಕೆಲ್ಲ ನಾನೇ ಹೊಣೆ. ಉಳಿದವರೆಲ್ಲ ಇನ್ನೂ ಹುಡುಗರು, ನಿಷ್ಪಾಪಿಗಳು. ಅವರ ಬಿಡುಗಡೆಯಾಗಲಿ,'' ಎಂದು ಹೇಳಿಕೆಯನ್ನಿತ್ತರು.

ಶಸ್ತ್ರಚಿಕಿತ್ಸೆ ಯಶಸ್ವಿಯಾಯಿತು. ಆದರೆ ಸಪ್ಟಂಬರ 10ರಂದು ಯತೀಂದ್ರನಾಥರು ತಮ್ಮ ಗಾಯದ ಪಟ್ಟಿಗಳನ್ನೂ ಹೊಲಿಗೆಯ ದಾರಗಳನ್ನೂ ಹರಿದು ಹಾಕಿದರು. ರಕ್ತ ಧಾರೆಯಾಗಿ ಹರಿಯಿತು. ''ಎಲಾ, ನನ್ನ ದೇಹದಲ್ಲಿ ಇನ್ನೂ ಇಷ್ಟು ರಕ್ತ ಇದೆಯಲ್ಲ. ನನ್ನ ರಕ್ತವನ್ನೆಲ್ಲ ದೇಶಮಾತೆಗೆ ಅರ್ಪಿಸಲು ಸಾಧ್ಯವಾದದ್ದು ನನ್ನ ಭಾಗ್ಯ,'' ಎಂದರು ನಗು ನಗುತ್ತ ಯತೀಂದ್ರನಾಥರು.

ಅವರನ್ನು ಬದುಕಿಸುವ ಪ್ರಯತ್ನ ಸಫಲವಾಗಲಿಲ್ಲ.

ಈ ಮಹಾವ್ಯಕ್ತಿಯ ಮರಣವಾರ್ತೆ ಕೇಳಿ ದೇಶಕ್ಕೆ ದೇಶವೇ ರೋದಿಸಿತು. ದೇಶಬಂಧು ಚಿತ್ತರಂಜನದಾಸರಂತೂ ಕುಟುಂಬ ಸಮೇತ ಸೂತಕವನ್ನಾಚರಿಸಿದರು. ಸ್ವಾತಂತ್ರ್ಯಪ್ರಿಯರಾದ ಲಕ್ಷಾವಧಿ ಜನರೂ ಸೂತಕವನ್ನಾಚರಿಸಿದರು. ●

# ಐನ್‌ಸ್ಟೈನ್‌ನನ್ನು ಮೀರಿಸಿದ ಹುಡುಗ

ಸಿ. ಆರ್. ಮಂಜುನಾಥ

ಈತ ಕೇವಲ ಹತ್ತು ವರ್ಷದ ಹುಡುಗ. ಇವನ ಬುದ್ಧ್ಯಂಕ ಅವನ ಅಧ್ಯಾಪಕರಿಗಿಂತಲೂ ಹೆಚ್ಚಾಗಿದೆ. ಈಗಾಗಲೇ ಒಂದು ಕಾದಂಬರಿಯನ್ನು ಹೊರತಂದಿರುವ ಅಡ್ರಗಾನ್ ಸದ್ಯಕ್ಕೆ ಕಂಪ್ಯೂಟರ್ ವಿಜ್ಞಾನದಲ್ಲಿ ಆಸಕ್ತನಾಗಿದ್ದಾನೆ. ತಂದೆಯ ಅಭಿಪ್ರಾಯದಂತೆ 16 ತುಂಬುವುದರೊಳಗೆ ಈತ ನೋಬೆಲ್ ಪಾರಿತೋಷಕವನ್ನು ಗಳಿಸುವುದು ಖಚಿತ.

ಕವನ ಸಂಕಲವನ್ನೂ ಹೊರತಂದಿರುವ ಅಡ್ರಗಾನ್ ಶಾಲೆಯ ಸಮಾರಂಭಕ್ಕೆ ಅನೇಕ ನಾಟಕಗಳನ್ನು ರಚಿಸಿದ್ದಾನೆ. ಗಣಿತಶಾಸ್ತ್ರ ಮುಂತಾದ ವಿಷಯಗಳಲ್ಲಿ ಬಿಗುವಾದ ಸಮಸ್ಯೆಗಳನ್ನು ಬಿಡಿಸಲು ಸಾಧ್ಯವಾಗದವರೆಲ್ಲ ಈ ಬಾಲಕನ ಬಳಿ ಬರುತ್ತಾರೆ. ಈತ ಹುಟ್ಟಿದ ಏಳೇ ವಾರದಲ್ಲಿ ಹಲ್ಲೊ ಎನ್ನಲು, ಎರಡು ತುಂಬುವುದರೊಳಗೆ ಚದುರಂಗದಾಟವನ್ನು ಕಲಿತ. ಮೂರನೆಯ ವಯಸ್ಸಿನಲ್ಲಿ ಸ್ನಾನದ ತೊಟ್ಟಿಯ ಘನ ಪ್ರಮಾಣವನ್ನು ಗುಣಿಸಿದ. ಎಂಟನೆಯ ವಯಸ್ಸಿನಲ್ಲಿ ಕಾಲೇಜಿನಲ್ಲಿ ಓದುತ್ತಿರುವ ಅಡ್ರಗಾನ್‌ಗೆ ವಿಜ್ಞಾನಿಯಾಗಬೇಕೆಂಬ ಆಸೆ.

ತನಗಿಂತ ಎರಡರಷ್ಟು ವಯಸ್ಸಾದ ವಿದ್ಯಾರ್ಥಿಗಳು ತಮಗಿಂತ ಹೆಚ್ಚು ಅಂಕಗಳಿಸಿದ ಅಡ್ರಗಾನ್‌ನೊಂದಿಗೆ ಮಾತನಾಡುವುದನ್ನೆ ನಿಲ್ಲಿಸಿದರಂತೆ. ಕೊನೆಗೆ ಈ ಬಾಲಕ ಅಮೇರಿಕದ ಜನಪ್ರಿಯ ನಟನಾದ ಕ್ಲಿಂಚ್ ಇಸ್ಟ್‌ವುಡ್‌ನ ಸಂಬಂಧಿ ಎಂದು ತಿಳಿದಾಗ ಅವನಿಗೆ ಹೆಚ್ಚಿನ ಆದರ ದೊರೆಯಿತಂತೆ.

ಅಡ್ರಗಾನ್‌ನ ಗಣಿತದ ಅಧ್ಯಾಪಕನ ಅಭಿಪ್ರಾಯದಂತೆ ಇವನ ಬುದ್ಧ್ಯಂಕ ಬಹುಶಃ 200 ರಿಂದ 225 ಇರಬಹುದೆಂದು ಐನ್‌ಸ್ಟೈನ್‌ರದ್ದು 180ರಿಂದ 190ರೊಳಗೆ ಇತ್ತಂತೆ. ಗಣಿತಶಾಸ್ತ್ರ ಮತ್ತು ಕಂಪ್ಯೂಟರ್ ವಿಜ್ಞಾನಕ್ಕೆ ಮಾತ್ರ ಇವನ ಜ್ಞಾನ ಸೀಮಿತವಾಗಿಲ್ಲ. ಗ್ರೀಕ್ ಭಾಷೆ, ಭೌತಶಾಸ್ತ್ರ ಮತ್ತು ತತ್ವಜ್ಞಾನದ ಬಗ್ಗೆ ಆರನೇ ವಯಸ್ಸಿನಲ್ಲೇ ಅಧಿಕಾರವಾಣಿಯಿಂದ ಮಾತನಾಡತೊಡಗಿದ.

ಕೂಸಾಗಿದ್ದಾಗಲೆ ಹಲ್ಲೋ ಎಂದ ಮಾತು ಬಂದದ್ದೂ ನಿಧಾನವಾಗಿಯೇ ಎಂದು ಆತನ ತಂದೆ ಹೇಳುತ್ತಾನೆ. ಆದರೆ ಅವನ ಬೌದ್ಧಿಕ ಬೆಳವಣಿಗೆ ಮಾತ್ರ ಆತ್ಯಾಶ್ಚರ್ಯಕರ.

ಅವನಿಗೆ ಮೂರು ತುಂಬಿದಾಗ 'ಬಾಲಕರನ್ನು ಸೃಷ್ಟಿಸುವುದೇ ವಿದ್ಯುತ್ ಮತ್ತು ರಸಾಯನಿಕ ಕ್ರಿಯೆ ಅಲ್ಲವೆ?' ಎಂದಾತ ಕೇಳಿದ್ದ. 'ನನ್ನ ಆತ್ಮವು ಪ್ರಪಂಚವನ್ನು ಸುತ್ತುವುದೇ ನಿಜವಾದಲ್ಲಿ ನಾನು ಸಂತೋಷವಾಗಿ ಸಾಯಲು ರೆಡಿ' ಅಂದಿದ್ದು ಅವನ ಮಾನಸಿಕ ದಕ್ಷತೆಯನ್ನು ಸೂಚಿಸುತ್ತದೆ.

ಆದರೆ ಅಡ್ರಗಾನ್ ಇಷ್ಟೆಲ್ಲಾ ಸಾಮರ್ಥ್ಯ ಪಡೆಯಲು ಹೆಚ್ಚಿನ ಬೆಲೆಯನ್ನೇ ತೆರಬೇಕಾಗಿದೆ. ರೂಢಿಯಲ್ಲಿರುವ ಅನೇಕ ಆಹಾರ ಪದಾರ್ಥಗಳು ಅವನ ದೇಹಕ್ಕೆ ಒಗ್ಗುತ್ತಿಲ್ಲ. ಹೆಚ್ಚು ಕಡಿಮೆ ಅದೆಲ್ಲ ಅವನಿಗೆ ಅಲರ್ಜಿ.

ತಂದೆ ಡೇವಿಡ್ ಅಡ್ರಗಾನ್ ಮಗನನ್ನು ಬಹಳ ಮುತುವರ್ಜಿಯಿಂದಲೇ ಪೋಷಿಸುತ್ತಿದ್ದಾನೆ. ಒಂದು ರೀತಿಯಲ್ಲಿ ತನ್ನ ಮಗ ಬಾಲ್ಯದ ಅನುಭವಗಳಿಂದ ವಂಚಿತನಾಗಿದ್ದಾನೆ ಎಂದಾತ ಹೇಳುತ್ತಾನೆ. ಆದರೆ ಅವನಿರುವ ಪ್ರದೇಶದಲ್ಲಿ ಬೇರೆ ಯಾವ ಮಕ್ಕಳೂ ಇಲ್ಲ. ಹೀಗಾಗಿ ವರ್ಷಕ್ಕೆ ಎಲ್ಲೋ ಒಂದೆರಡು ತಿಂಗಳು ಅವನು ಆಟೋಟಗಳಲ್ಲಿ ಕಳೆಯುತ್ತಾನೆ. ಔತಣ ಕೂಟಗಳಲ್ಲಿ ಪಾಲ್ಗೊಳ್ಳುತ್ತಾನೆ. ಫುಟ್‌ಬಾಲ್ ಆಡುತ್ತಾನೆ. ಒಳ್ಳೆಯ ಈಜುಗಾರನೂ ಹೌದು.

ಪ್ರಗಲ್ಭವಾದ ಬೌದ್ಧಿಕ ಪ್ರತಿಭೆ ಅವನನ್ನು ಗರ್ವದ ಮತ್ತಿಗೇರಿಸಿಲ್ಲ. ಅಡ್ರಗಾನ್ ವಿನಯ ಶೀಲ.

ಮುಂದೆ ಈ ಬಾಲ್ಯಾದ್ಭುತ ಏನನ್ನು ಸಾಧಿಸುತ್ತದೋ ಕಾಯ್ದುನೋಡಬೇಕು. ●

---

*ಈ ಬದುಕಿನಲ್ಲಿ ನಾವು ಯಾರನ್ನು ಪ್ರೀತಿಸುತ್ತೇವೋ ಅವರನ್ನು ಭೇಟಿಯಾದದ್ದು ನಮ್ಮ ಇಚ್ಛೆಯಿಂದ ಅಲ್ಲ. ನಮ್ಮ ತಂದೆ, ತಾಯಿ, ಅಕ್ಕ, ತಮ್ಮ, ಅಣ್ಣ. ತಂಗಿ ಯಾರನ್ನೂ ನಾವು ಹುಡುಕಿ, ಆರಿಸಿತರಲಿಲ್ಲ. ಈ ಪ್ರಪಂಚವನ್ನು ಶೋಧಿಸಿ ಸ್ನೇಹಿತರನ್ನು ಆಯ್ದು ಪರಿಚಯ ಮಾಡಿಕೊಳ್ಳಲಿಲ್ಲ. ಸ್ನೇಹಿತರನ್ನು ಆಯ್ಕೆ ಮಾಡುವಾಗ ಸ್ವಲ್ಪ ಮಟ್ಟಿಗೆ ನಮ್ಮ ಯತ್ನವಾದರೂ ಬಹುಶಃ ಅದು ದೇವರ ಕರುಣೆಯಿಂದಲೇ ಆಗಿರುತ್ತದೆ. ಇವೆಲ್ಲಾ ಮೊದಲೇ ವಿಧಿಯು, ನಮಗಾಗಿ ನಿಶ್ಚಯಿಸಿದ್ದೇ. ''ಹಾಗಲ್ಲ, ಇದು ಆಕಸ್ಮಿಕ'' ಎಂದಲ್ಲಿ, ಹಾಗಾದರೆ ಮತ್ತಾರ ಇಚ್ಛೆಯಿಂದ ಅದು ನಮಗಾಗಿ ಆಯಿತು? ನಮಗಾಗಿ ಅವರು ದೈವ ಬಲದಿಂದ ಒದಗಿದ್ದರೆ, ಅದು ನಮ್ಮಿಂದ ಆಗಿಲ್ಲ, ಅದನ್ನು ಬದಲಾಯಿಸಲು ಸಾಧ್ಯವಿಲ್ಲ. ಯಾವುದು ಆಗಬೇಕಾಗಿದೆಯೋ ಅದು ಆಗಿಯೇ ಆಗುತ್ತದೆ, ಎನ್ನುವುದು ಸತ್ಯ. ಆದ್ದರಿಂದ ಆ ದೃಢ ನಂಬಿಕೆಯಿಂದ ಆತನನ್ನು ಆಶ್ರಯಿಸಬೇಕು. ನಾವು ಯಾರನ್ನು ಪ್ರೀತಿಸಿದ್ದೇವೋ ಅವರನ್ನು ಮತ್ತೆ ಸೇರುತ್ತೇವೆ ಎಂಬ ನಂಬಿಕೆಯು ಸಮಾಧಾನ ಕೊಡುತ್ತದೆ. ಆದರೆ ಇದಕ್ಕಿಂತ ಹೆಚ್ಚಿನ ನಂಬಿಕೆ ಮತ್ತು ಮನಸ್ಸಿಗೆ ಶಾಂತಿ ತರುವ ಮಾತೆಂದರೆ ''ಏನಾದರೂ ಅದು ನಮ್ಮ ಒಳಿತಿಗಾಗಿ'' ಎಂಬ ಮನೋಭಾವವನ್ನು ಬೆಳೆಸಿಕೊಳ್ಳುವುದು.*

**- ಮ್ಯಾಕ್ಸ್ ಮುಲ್ಲರ್**

**ಸಂಗ್ರಹ: ಕಮಲಾ ರಾಮಸ್ವಾಮಿ**

---

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ; ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1 ಮಾರ್ಮಿಕ
(ಅ) ಕೆಲಸಗಾರ
(ಆ) ಬದಲಾವಣೆ ಹೊಂದುವ
(ಇ) ಮನಸ್ಸಿಗೆ ತಟ್ಟುವ
(ಈ) ಮೆತ್ತಗಿನ

2 ಮಾರ್ದವ
(ಅ) ಮೃದಂಗದ ದನಿ
(ಆ) ಮದ್ದಳೆಗಾರ
(ಇ) ಪ್ರತಿಧ್ವನಿ
(ಈ) ಮೆತ್ತಗಿರುವಿಕೆ

3 ನಾಂದು
(ಅ) ಗಡಿಕಲ್ಲು
(ಆ) ತೋಯಿಸು
(ಇ) ಆಲಸ್ಯದಿಂದಿರು
(ಈ) ಆರಿಹೋಗು

4 ಪಿಠರ
(ಅ) ಮಡಕೆ
(ಆ) ಮಣೆ
(ಇ) ಬುಟ್ಟಿ
(ಈ) ಪೆಟ್ಟಿಗೆ

5 ಪಿತೃವ್ಯ
(ಅ) ಅಜ್ಜ
(ಆ) ಚಿಕ್ಕ ತಂದೆ
(ಇ) ಶ್ರಾದ್ಧ
(ಈ) ತಂದೆಯ ಆಸ್ತಿ

6 ತುಪ್ಪಳು
(ಅ) ಉಗುಳು
(ಆ) ಹುಡುಕಿಕೊಂಡು
(ಇ) ಪುಕ್ಕ
(ಈ) ದೊಂಬಿ

7 ನಿತ್ರಾಣ
(ಅ) ಅಶಕ್ತಿ
(ಆ) ರಕ್ಷಣೆ
(ಇ) ನಾಚಿಕೆಗೇಡು
(ಈ) ಈ ಲೋಕ

8 ಪತ್ತಾರ
(ಅ) ಕಬ್ಬಿಣದ ಕೆಲಸದವ
(ಆ) ನೂಲುವವ
(ಇ) ಕಾಲಾಳು
(ಈ) ಅಕ್ಕಸಾಲಿಗ

9 ಶರಾಬು
(ಅ) ಒಣಬಳ್ಳಿ
(ಆ) ಬತ್ತಳಿಕೆ
(ಇ) ಮದ್ಯ
(ಈ) ಬಾಣದ ಮೊನೆ

10 ಭೃಂಗಾರ
(ಅ) ಜೇನುಹುಟ್ಟು
(ಆ) ಬೇಗನೆ ನಾಶವಾಗುವ
(ಇ) ಚಿನ್ನದ ಚೊಂಬು
(ಈ) ಅಗ್ಗಿಷ್ಟಿಕೆ

11 ತುಲನೆ
(ಅ) ಒರೆಗೆ ಹಚ್ಚುವುದು
(ಆ) ಹೋಲಿಕೆ
(ಇ) ತುರಿಸುವಿಕೆ
(ಈ) ಅವಸರಪಡಿಸುವುದು

12 ಪತ್ರಾವಳಿ
(ಅ) ಎಲೆಗಳ ಜೋಡಣೆ
(ಆ) ಕತ್ತಿವರಸೆ
(ಇ) ನಟವರ್ಗ
(ಈ) ಓಲೆಯ ಕೊಡೆ

# ಶಬ್ದಭಾಂಡಾರದ ಸರಿಯಾದ ಅರ್ಥಗಳು

**1 ಮಾರ್ಮಿಕ**

(ಇ) ಮನಸ್ಸಿಗೆ ತಟ್ಟುವ, ಅಂತರಂಗಕ್ಕೆ ನಾಟುವ, ತಿರುಳನ್ನು ಅರಿತ. ಉದಾ:- ಮಾರ್ಮಿಕವಾದ ಹೇಳಿಕೆ. (ಸಂ. ಮರ್ಮನ್ =ದುರ್ಬಲ ಸ್ಥಾನ-ದಿಂದ)

**2 ಮಾರ್ದವ**

(ಈ) ಮೆತ್ತಗಿರುವಿಕೆ, ಮೆದುತನ, ಕೋಮಲತೆ. ಉದಾ:- ಮಾತಿನಲ್ಲಿ ಮಾರ್ದವವಿತ್ತು. (ಸಂ. ಮೃದು=ಮೆತ್ತಗೆ-ಇಂದ)

**3 ನಾಂದು**

(ಅ) ತೋಯಿಸು, ಒದ್ದೆಮಾಡು. ನೆನೆಯಿಸು, ತೋಯಿಸಿ ತೀಡಿ ಕಲಸು. ಉದಾ:- ಹಿಟ್ಟನ್ನು ನಾಂದಿದನು. (ದೇಶ್ಯ)

**4 ಪಿಠರ**

(ಅ) ಮಡಕೆ, ಗಡಿಗೆ, ಉಗ್ರಾಣ, ಕಡೆಗೋಲು, ಉದಾ:- ಜಠರ ಪಿಠರವನ್ನು ತುಂಬುವುದು ಕಷ್ಟ. (ಸಂ)

**5 ಪಿತೃವ್ಯ**

(ಅ) ಚಿಕ್ಕ ಅಥವಾ ದೊಡ್ಡ ತಂದೆ, ಮಾವನೇ ಹಿರಿಯ ಸಂಬಂಧಿಕ. ಉದಾ:- ಪಿತೃವ್ಯನ ಬೆಂಬಲ ಸಿಕ್ಕಿತು. (ಸಂ. ಪಿತೃ=ತಂದೆ+ವ್ಯ)

**6 ತುಪ್ಪಳು**

(ಇ) ಪುಕ್ಕ, ಹಕ್ಕಿಯ ಗರಿಯ ಮೆತ್ತನ್ನ ಅಂಶ, ಪ್ರಾಣಿಗಳ ತೊಗಲಿನ ಮೃದು ರೋಮರಾಜಿ. ಉದಾ:- ಹಂಸದ ತುಪ್ಪಳಿನ ಹಾಸಿಗೆ. (ದೇಶ್ಯ)

**7 ನಿತ್ರಾಣ**

(ಅ) ಅಶಕ್ತಿ, ಬಸವಳಿಕೆ. ಉದಾ:- ''ಪ್ರಾಣದೇವನು ನಿತ್ರಾಣನಾಗುತ್ತ ಬಂದ.'' (-ಬೇಂದ್ರೆ) (ಸಂ. ನಿ= ಇಲ್ಲ+ತ್ರಾಣ=ರಕ್ಷಣೆ)

**8 ಪತ್ತಾರ**

(ಈ) ಚಿನ್ನ, ಬೆಳ್ಳಿಯ ಕೆಲಸ ಮಾಡುವವ, ಅಕ್ಕಸಾಲಿಗ. ಉದಾ:- ಪತ್ತಾರರಿಗೆ ಈಗ ಸುಗ್ಗಿ. (ಪ್ರಾಕೃತ-ಪತ್ತರಕ=ಆಭರಣದಿಂದ.)

**9 ಶರಾಬು**

(ಇ) ಮದ್ಯ, ಹೆಂಡ, ಸೆರೆ. ಉದಾ:- ಬೀದಿ ಬೀದಿಗೆ ಶರಾಬಿನ ಅಂಗಡಿ. (ಅರಬ್ಬಿ-ಶರಾಬ್)

**10 ಭೃಂಗಾರ**

(ಇ) ಚಿನ್ನದ ಚೊಂಬು, ಸುವರ್ಣ ಕಲಶ; ಪಟ್ಟಾಭಿಷೇಕಕ್ಕೆ ಬಳಸುವ ಅಷ್ಟ ಲೋಹದ ಕುಂಭ. (ಸಂ.)

**11 ತುಲನೆ**

(ಅ) ಹೋಲಿಕೆ, ತೂಗಿನೋಡುವಿಕೆ. ಉದಾ:- ಎರಡರ ತುಲನೆ ಮಾಡಿ ನೋಡಿ (ಸಂ. ತುಲನಾ=ತೂಗುವಿಕೆ)

**12 ಪತ್ರಾವಳಿ**

(ಅ) ಎಲೆಗಳ ಜೋಡಣೆ (ಊಟಕ್ಕಾಗಿ), ಪತ್ರಗಳ ಸಾಲು. ಉದಾ:- ಉಂಡು ಬಿಸುಟ ಪತ್ರಾವಳಿಗಳು. (ಸಂ. ಪತ್ರ=ಎಲೆ+ಆವಲಿ= ಸಾಲು)

**ನಿಮ್ಮ ಶಬ್ದಶಕ್ತಿಯ ತರಗತಿ**

| | | |
|---|---|---|
| ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು | 6 - 8 ಸರಿಯಿದ್ದರೆ | ...ಸಾಧಾರಣ |
| ಸರಿಯಾಗಿದೆಯೆಂದು ಎಣಿಸಿ ನಿಮ್ಮ ಶಬ್ದ | 9 - 10 ಸರಿಯಿದ್ದರೆ | ...ಉತ್ತಮ |
| ಶಕ್ತಿಯ ತರಗತಿಗಳನ್ನು ತಿಳಿಯಿರಿ | 11 - 12 ಸರಿಯಿದ್ದರೆ | ...ಅತ್ಯುತ್ತಮ |

ಶ್ರೀಕಾಂತ ಮಳಗಿ

# ಕ್ಯಾಲೆಂಡರ್ ವಿಕಾಸಗೊಂಡಿದ್ದು ಹೀಗೆ

ನಾಗರಿಕತೆಯಲ್ಲಿಯೂ ವಿಜ್ಞಾನದಲ್ಲಿಯೂ ಮುಂದುವರಿದ ಈ ಜಗತ್ತಿನಲ್ಲಿ ಕಾಲವನ್ನು ನಿಖರವಾಗಿ ಅಳೆಯುವುದು ಅತ್ಯವಶ್ಯ. ಹಾಗೆ ನೋಡಿದರ ಈ ಭೂಮಂಡಲವೇ ಒಂದು ಗಡಿಯಾರ. ಒಂದು ನಿಶ್ಚಿತ ಸ್ಥಳಕ್ಕೆ ಸಂಬಂಧಿಸಿದಂತೆ ಸೂರ್ಯ, ಚಂದ್ರ ಹಾಗೂ ಇತರ ಗಗನಕಾಯಗಳ ಚಲನೆಯ ಮೂಲಕ ಕಾಲವನ್ನು ಅಳೆಯಲಾಗುತ್ತದೆ. ಹೀಗೆ ಲೆಕ್ಕಹಾಕಲಾದ ದಿನಗಳ ಒಂದು ಮೊತ್ತವನ್ನು ವರ್ಷವೆಂದು ಪರಿಗಣಿಸಲಾಗುತ್ತದೆ. ಕ್ಯಾಲಂಡರಿನ ಕಥೆ ಪ್ರಾರಂಭವಾಗುವುದು ಇಲ್ಲಿಂದಲೆ.

ಈವರೆಗೆ ಅನೇಕ ಕ್ಯಾಲಂಡರುಗಳು ಬಳಕೆಯಲ್ಲಿ ಬಂದುಹೋಗಿವೆಯಾದರೂ ವೇಳೆಯನ್ನು ನಿಖರವಾಗಿ ಸೂಚಿಸುವ ಕ್ಯಾಲಂಡರೇ ಹೆಚ್ಚು ಕಾಲ ಬಳಕೆಯಲ್ಲಿ ಉಳಿಯಬಲ್ಲದು. 365 ದಿನಗಳು 5 ಗಂಟೆ 48 ನಿಮಿಷ ಹಾಗೂ 46.3 ಸೆಕೆಂಡುಗಳನ್ನು ಈಗ ಬಳಕೆಯಲ್ಲಿರುವ ಕ್ಯಾಲಂಡರು ಒಳಗೊಂಡಿದೆ. ಪೃಥ್ವಿಯು ತನ್ನ ಅಕ್ಷದ ಸುತ್ತ ತಿರುಗುತ್ತ ಒಂದು ಸಲ ಸೂರ್ಯನ ಪ್ರದಕ್ಷಿಣೆ ಮಾಡಲು ತೆಗೆದುಕೊಳ್ಳುವ ಸಮಯಕ್ಕೆ ಒಂದು ವರ್ಷವೆಂದು ಹೆಸರು. ಇದರಿಂದ ಹೊರತಾದ ಕ್ಯಾಲೆಂಡರು ಸರಿಯಾಗಿರಲು ಸಾಧ್ಯವೇ ಇಲ್ಲ. ಉದಾಹರಣೆಗೆ ಹೇಳುವುದಾದರೆ 366 ದಿನಗಳ ಕ್ಯಾಲಂಡರು ಹಿಂದೆ ಬೀಳುವ ಗಡಿಯಾರದಂತೆ. ಹಾಗೆಯೆ 364 ಅಥವಾ ಅದಕ್ಕಿಂತ ಕಡಿಮೆ ದಿನಗಳನ್ನೊಳಗೊಂಡದ್ದಕ್ಕೆ ವರ್ಷವನ್ನು ಸೂಚಿಸುವ ಕ್ಯಾಲಂಡರು ಮುಂದೆ ಹೋಗುವ ಗಡಿಯಾರದಂತೆ.

ಹಿಂದೆ ಬ್ಯಾಬಿಲೋನಿನಲ್ಲಿ ವಾರಕ್ಕೆ ಹತ್ತು ದಿನಗಳೆಂದೂ ವರ್ಷಕ್ಕೆ 36 ವಾರಗಳೆಂದೂ ಪರಿಗಣಿಸಲಾಗಿತ್ತು. ಇಜಿಪ್ತಿನವರು ಸುಮಾರು ನಾಲ್ಕು ಸಾವಿರ ವರ್ಷಗಳವರೆಗೆ 360ದಿನಗಳ ಚಾಂದ್ರಮಾನ ಪದ್ಧತಿಯನ್ನನುಸರಿಸಿ ಅನಂತರ 365 ದಿನಗಳ ಸೌರಮಾನ ಪದ್ಧತಿಗೆ ತಮ್ಮ ಪಂಚಾಂಗವನ್ನು ಬದಲಿಸಿಕೊಂಡರು. ಈ ಪದ್ಧತಿಯೂ ವರ್ಷಕ್ಕೆ ಕಾಲು ದಿನದಷ್ಟು ಅರ್ಥಾತ್ ನಾಲ್ಕು ವರ್ಷಗಳಿಗೆ ಒಂದು ದಿನದಷ್ಟು ಕಡಿಮೆ ಕಾಲವನ್ನು ತೋರಿಸುತ್ತದೆಂಬುದನ್ನು ಮೊತ್ತಮೊದಲು ಕಂಡು

ಹಿಡಿದ ಕೀರ್ತಿ ಇಜಿಪ್ತಿನವರಿಗೆ ಸಲ್ಲಬೇಕು. ಆದರೆ ಅದನ್ನು ಕ್ಯಾಲಂಡರಿನಲ್ಲಿ ಸರಿಪಡಿಸಿ ಕೊಂಡವರು ರೋಮನ್ನರು.

ರೋಮಿನಲ್ಲಿ ರೋಮುಲಸ್ ಎಂಬ ದೊರೆ ಕ್ರಿಸ್ತಪೂರ್ವ 738ರಲ್ಲಿ 304 ದಿನಗಳನ್ನೊಳಗೊಂಡ ಹತ್ತು ವಾರಗಳ ಕ್ಯಾಲಂಡರನ್ನು ಬಳಕೆಯಲ್ಲಿ ತಂದ. ಅದರಲ್ಲಿ ಮಾರ್ಷಿಯಸ್, ಏಪ್ರಿಲಿಸ್, ಮೇಯಸ್, ಜೂನಿಯಸ್, ಕ್ವಿಂಟಿಲಿಸ್, ಸೆಕ್ಸ್ಟಿಲಿಸ್, ಸೆಪ್ಟೆಂಬ್ರಿಸ್, ಆಕ್ಟೋಬ್ರಿಸ್, ನವೆಂಬ್ರಿಸ್ ಹಾಗೂ ಡಿಸೆಂಬ್ರಿಸ್ ಎಂಬ ಹತ್ತು ತಿಂಗಳುಗಳಿದ್ದವು. ಮುಂದೆ ಕೆಲವು ವರ್ಷಗಳ ನಂತರ ನ್ಯೂಮಾ ಪಾರಿಪೆಲಿಯಸ್ ಎಂಬ ದೊರೆ ಚಾಂದ್ರಮಾನ ಚಕ್ರವನ್ನಾಧರಿಸಿ ಈ ಹತ್ತು ತಿಂಗಳುಗಳಿಗೆ ಜಾನುರಿಯಸ್ ಹಾಗೂ ಫೆಬ್ರುವರಿಯಸ್ ಎಂಬ ಎರಡು ತಿಂಗಳುಗಳನ್ನು ಹೊಸದಾಗಿ ಸೇರಿಸಿದ. ಈ ಬಗೆಯ ವ್ಯವಸ್ಥೆಯಲ್ಲಿ ವರ್ಷಕ್ಕೆ 355 ದಿನಗಳಿದ್ದವು. ಇದರಿಂದಾಗಿ ಸೌರಮಾನದ ಲೆಕ್ಕಾಚಾರದ ಪ್ರಕಾರ ವರ್ಷಕ್ಕೆ ಸುಮಾರು ಹತ್ತು ದಿನಗಳಷ್ಟು ಕಡಿಮೆ ಬೀಳುತ್ತದೆಂಬುದು ಅರಿವಿಗೆ ಬಂದ ಕೂಡಲೆ 22 ದಿನಗಳ ಹೊಸ ತಿಂಗಳನ್ನು ಎರಡು ವರ್ಷಗಳಿಗೊಮ್ಮೆ ಕ್ಯಾಲಂಡರಿನಲ್ಲಿ ಸೇರಿಸಲಾಯಿತು.

ಇದೂ ಸಾಲದೆಂಬಂತೆ ರಾಜರೂ ಧರ್ಮಾಧಿಕಾರಿಗಳೂ ತಿಂಗಳುಗಳಲ್ಲಿನ ದಿನಗಳ ಸಂಖ್ಯೆಯನ್ನು ಮನಬಂದಂತೆ ಬದಲಿಸಿದರು. ಇದರಿಂದಾಗಿ ಜನರ ಮನಸ್ಸಿನಲ್ಲಿ ಗೊಂದಲವೇರ್ಪಡುವುದು ಸ್ವಾಭಾವಿಕವೇ ಆಗಿತ್ತು. ಅದನ್ನು ನಿವಾರಿಸಲು ಜೂಲಿಯಸ್ ಸೀಜರನು ಕ್ರಿಸ್ತಪೂರ್ವ 48ರಲ್ಲಿ ಸೊಸಿಜಿನಸ್ ಎಂಬ ಆ ಕಾಲದ ಪ್ರಖ್ಯಾತ ಖಗೋಲ ಶಾಸ್ತ್ರಜ್ಞನ ಸಹಾಯದಿಂದ ಒಂದು ವರ್ಷವು 365 1/4 ದಿನಗಳನ್ನು ಒಳಗೊಂಡಿರುವುದೆಂದೂ ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಲೀಪ್ ಇಯರ್ ಬರುವುದೆಂದೂ ನಿರ್ಧರಿಸಿದ. ಅಲ್ಲಿಯವರೆಗೆ ಪ್ರಚಲಿತವಿದ್ದ ಕ್ಯಾಲೆಂಡರಿಗೆ ಈ ಹೊಸ ಕ್ಯಾಲಂಡರನ್ನು ಸರಿದೂಗಿಸಲು ಕ್ರಿ.ಪೂ.48ಅನ್ನು 'ಗೊಂದಲದ ವರ್ಷ'ವೆಂದೂ ಆ ವರ್ಷಕ್ಕೆ 445 ದಿನಗಳಿರುವವವೆಂದೂ ನಿರ್ಧರಿಸಲಾಯಿತು. ಇದಾದ ಬಳಿಕ ಕ್ರಿ.ಪೂ. 47ರಲ್ಲಿ ತನ್ನ ಹೆಸರು ಶಾಶ್ವತವಾಗಿ ಉಳಿಯಲೆಂಬ ಆಶಯದಿಂದ ಸೀಜರನು ಏಳನೆಯ ತಿಂಗಳಾದ ಕ್ವಿಂಟಿಲಿಸ್‌ಅನ್ನು ಜುಲೈ ಎಂದು ಬದಲಿಸಿದ. ಅಲ್ಲಿಯವರೆಗೆ ಆ ತಿಂಗಳಿಗೆ 30ದಿನಗಳಿದ್ದವು. ಜೂಲಿಯಸ್ ಸೀಜರ್ ತನ್ನ ಒಂದು ಕೈ ಮೇಲಾಗಲೆಂದೋ ಏನೋ ಜುಲೈಗೆ 31 ದಿನಗಳೆಂದು ನಿರ್ಧರಿಸಿದ. ಫೆಬ್ರುವರಿಗೆ ಆಗ 29 ದಿನಗಳಿದ್ದವು. ಹೀಗಾಗಿ ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಲೀಪ್ ಇಯರ್ ಬಂದಾಗ ಫೆಬ್ರುವರಿಗೆ 30 ದಿನಗಳಾಗುತ್ತಿದ್ದವು. ಮೊದಲು ಮಾರ್ಚ್ 25ರಿಂದ ಹೊಸ ವರ್ಷ ಪ್ರಾರಂಭವಾದರೆ ಸೀಜರನ ವರ್ಷ ಜನವರಿ ಒಂದರಿಂದ ಪ್ರಾರಂಭವಾಗತೊಡಗಿತು.

ಜೂಲಿಯಸ್‌ಸೀಜರ್ ತೀರಿಕೊಂಡ ನಂತರ ಪಾದ್ರಿಗಳ ಸಂಘ ಪ್ರತಿ ಮೂರು ವರ್ಷಗಳಿಗೊಮ್ಮೆ ಲೀಪ್ ಇಯರ್ ಬರುವಂತೆ ಕ್ಯಾಲೆಂಡರನ್ನು ಬದಲಿಸಿತು. ಈ ವ್ಯವಸ್ಥೆ 36 ವರ್ಷಗಳವರೆಗೆ ನಡೆದುಕೊಂಡು ಬಂದು ಕ್ರಿ.ಪೂ.8ರಲ್ಲಿ ಅಗಸ್ಟಸ್ ಸೀಜರನು ಮೊದಲ ಹದಿನಾರು ವರ್ಷಗಳವರೆಗೆ ಲಿಪ್ ಇಯರ್ ಇರಕೂಡದೆಂದೂ ಅನಂತರ ಪ್ರತಿ ನಾಲ್ಕು ವರ್ಷಕ್ಕೊಮ್ಮೆ ಅದು ಬರಬೇಕೆಂದೂ ವಿಧಿಸಿದ. ಬಳಿಕ ಆರನೆಯ ತಿಂಗಳಾದ ಸೆಕ್ಸ್ಟಿಲಿಸ್‌ಅನ್ನು ತನ್ನ ಹೆಸರಿಗೆ (ಅಗಸ್ಟ್) ಬದಲಿಸಿಕೊಂಡ. ಅಲ್ಲದೆ ಸರಿಸಂಖ್ಯೆ ಅಶುಭವೆಂಬ ಭಾವನೆ ಆಗ ಸಾರ್ವತ್ರಿಕವಾಗಿದ್ದುದರಿಂದ ಆ ತಿಂಗಳಿಗೆ 31 ದಿನಗಳೆಂದು ಗೊತ್ತು ಪಡಿಸಿ ಲೆಕ್ಕವನ್ನು ಸರಿಪಡಿಸಲು ಫೆಬ್ರುವರಿಯ ಒಂದು ದಿನವನ್ನು ಕಳೆದ.

ಬಹು ಜನಪ್ರಿಯವಾದರೂ ವರ್ಷ 365 1/4 ದಿನಗಳಿಗಿಂತ ಕೊಂಚ ಕಡಿಮೆಯಾದುದರಿಂದ ಈ ವ್ಯವಸ್ಥೆ ಒಂದು ರೀತಿಯಲ್ಲಿ 128

ವರ್ಷಗಳಲ್ಲಿ ಒಂದು ದಿನದಷ್ಟು ಹಿಂದೆ ಹೋಗುವ ಗಡಿಯಾರದಂತಿತ್ತು. ತತ್ಪರಿಣಾಮವಾಗಿ ಕ್ರಿ.ಶ. 1582ರ ಸುಮಾರಿಗೆ ಈ 'ಗಡಿಯಾರ' ಹತ್ತುದಿನಗಳಷ್ಟು ಹಿಂದೆ ಹೋಗಿ ವಾಸ್ತವಿಕ ಸಂಕ್ರಾಂತಿಗೂ ಇದು ತೋರಿಸುವ ಸಂಕ್ರಾಂತಿಗೂ ಸಂಬಂಧವೇ ಉಳಿಯಲಿಲ್ಲ.

ಇದನ್ನು ಸರಿಪಡಿಸಲು ಮೂರನೆಯ ಪೋಪ್ ಗ್ರಿಗೊರಿ 1582ರ ಅಕ್ಟೋಬರ್ 4ರ ನಂತರ ಅಕ್ಟೋಬರ್ 15 ಬರುವುದೆಂದು ಘೋಷಿಸಿದನಲ್ಲದೆ 400ರಿಂದ ಭಾಗಿಸಲ್ಪಡದ ಶತಮಾನಕ್ಕೆ ಲೀಪ್ ಇಯರ್ ಇರುವುದಿಲ್ಲವೆಂದು ಗೊತ್ತುಪಡಿಸಿದ. ಆದರೆ ಈ ವ್ಯವಸ್ಥೆಯೂ ದೋಷ ರಹಿತವಾಗಿಲ್ಲ. ಗ್ರಿಗೊರಿಯ 'ಗಡಿಯಾರ' ವರ್ಷಕ್ಕೆ 26 ಸೆಕೆಂಡುಗಳಷ್ಟು ಮುಂದೆ ಹೋಗುವುದರಿಂದ ಇನ್ನು ಹದಿಮೂರು ಶತಮಾನಗಳ ನಂತರ ಮತ್ತೆ ಒಂದು ದಿನವನ್ನು ಕೈಬಿಡಬೇಕಾಗುವುದು.

ಕ್ರಿ.ಶ.1752ರ ಸುಮಾರಿಗೆ ಜೂಲಿಯನ್ ಕ್ಯಾಲಂಡರಿನಲ್ಲಿ ಹನ್ನೊಂದು ದಿನಗಳು ಮುಂದೆ ಹೋದುದರಿಂದ ಅದನ್ನು ಸರಿಪಡಿಸಲು ಇಂಗ್ಲಂಡು ಗ್ರಿಗೊರಿಯ ಸುಧಾರಣೆಗಳನ್ನು ಜಾರಿಗೆ ತಂದಿತ್ತು. ಪರಿಣಾಮವಾಗಿ ಆ ವರ್ಷ ಸೆಪ್ಟೆಂಬರ 2ರ ನಂತರ ಸೆಪ್ಟೆಂಬರ 14 ಬಂತು. ವಾಸ್ತವಿಕವಾಗಿಯಲ್ಲವಾದರೂ ಅಧಿಕೃತವಾಗಿಯಾದರೂ ಒಂದೇ ದಿನದಲ್ಲಿ ಆ ದೇಶದ ಜನರು ಹನ್ನೊಂದು ದಿನಗಳಷ್ಟು ಹಳಬರಾದರು. 'ಕಸಿದುಕೊಂಡ ನಮ್ಮ ಹನ್ನೊಂದು ದಿನಗಳನ್ನು ವಾಪಸುಕೊಡಿ.' ಎಂದು ಕೆಲವರು ಆಗ ಸರಕಾರದ ವಿರುದ್ಧ ಲಂಡನ್ನಿನಲ್ಲಿ ಮತಪ್ರದರ್ಶನ ಮಾಡಿದ್ದು ಆಶ್ಚರ್ಯವಲ್ಲ. ಜಾರ್ಜ್ ವಾಷಿಂಗಟನ್ ಹುಟ್ಟಿದ್ದು ಫೆಬ್ರುವರಿ ಹನ್ನೊಂದಾದರೂ ಅವನ ಹುಟ್ಟುಹಬ್ಬವನ್ನು ಫೆಬ್ರುವರಿ



"ತಲೆ ಕೆಟ್ಟದೆಯೇನ್ರೀ ನಿಮಗೆ ಇಂಥವಳನ್ನು ಫಾಲೋ ಮಾಡೀದ್ರಂತಲ್ಲಾ.."

22ರಂದು ಆಚರಿಸುತ್ತಿರುವುದು ಇಂಗ್ಲಂಡು ಗ್ರಿಗೊರಿಯ ಸುಧಾರಣೆಗಳನ್ನು ಜಾರಿಗೆ ತಂದಿದ್ದರಿಂದ.

ರಶಿಯವು 1917ರಲ್ಲಿಯೂ ರುಮಾನಿಯ ಹಾಗೂ ಯುಗೋಸ್ಲಾವಿಯಗಳು 1919ರಲ್ಲಿಯೂ ಮತ್ತು ಗ್ರೀಸ್‌ದೇಶ 1923ರಲ್ಲಿಯೂ ಗ್ರಿಗೊರಿಯ ಸುಧಾರಣೆಗಳನ್ನು ಜಾರಿಗೆ ತಂದವು. ಆದರೆ ಮುಂದೆ ಹನ್ನೆರಡು ವರ್ಷಗಳ ನಂತರ ರಶಿಯವು ತನಗಾಗಿ ಹೊಸ ವ್ಯವಸ್ಥೆಯನ್ನು ರೂಪಿಸಿಕೊಂಡಿತು. ಆ ಪ್ರಕಾರ ತಿಂಗಳಿಗೆ 5 ದಿನಗಳ ವಾರಗಳುಳ್ಳ 6 ವಾರಗಳಿರುವವೆಂದೂ ವರ್ಷಾಂತ್ಯಕ್ಕೆ ಯಾವ ತಿಂಗಳಿಗೂ ವಾರಕ್ಕೂ ಸೇರದ 5 ದಿನಗಳನ್ನು ಸೇರಿಸಬೇಕೆಂದೂ ನಿರ್ಧರಿಸಲಾಯಿತು. ಆದರೆ ಇದು ಜನಪ್ರಿಯವಾಗಲಿಲ್ಲವಾದ ಕಾರಣ ರಶಿಯವು 1940ರಲ್ಲಿ ಮತ್ತೆ ಗ್ರಿಗೊರಿಯ ವ್ಯವಸ್ಥೆಗೆ ಮರಳಿತು.

ಅರಬ್ಬಿ ದೇಶಗಳು ಧಾರ್ಮಿಕ ಉದ್ದೇಶಗಳಿಗಾಗಿ ಚಾಂದ್ರಮಾನ ಪದ್ಧತಿಯನ್ನಾಧರಿಸಿದ ಕ್ಯಾಲಂಡರನ್ನು ಅನುಸರಿಸುವವಾದರೂ ವ್ಯಾವಹಾರಿಕವಾಗಿ ಗ್ರಿಗೊರಿಯ ಕ್ಯಾಲಂಡ

ರನ್ನೇ ಬಳಸುವವು. ಮಹಮ್ಮದೀಯರ ಪಂಚಾಂಗದಲ್ಲಿ ವರ್ಷಕ್ಕೆ ಮೂನ್ನೂರ ಐವತ್ತುನಾಲ್ಕೆ ದಿನಗಳು. ಹೀಗಾಗಿ 33 ವರ್ಷಗಳಿಗೊಮ್ಮೆ ಒಂದು ವರ್ಷ ಹೆಚ್ಚಿಗೆ ಬರುವುದು. ಕ್ರಾಂತಿಯ ನಂತರ ಜನರ ಮೇಲಿದ್ದ ಕ್ಯಾಥೋಲಿಕ್ ಚರ್ಚಿನ ಹಿಡಿತವನ್ನು ತಪ್ಪಿಸುವ ಒಂದೇ ಒಂದು ಉದ್ದೇಶದಿಂದ 1795ರಲ್ಲಿ ಫ್ರಾನ್ಸ್ ಹೊಸ ಬಗೆಯ ಕ್ಯಾಲಂಡರನ್ನು ಅಮಲಿನಲ್ಲಿ ತಂದಿತು. ಆ ಪ್ರಕಾರ ವರ್ಷದ ಹನ್ನೆರಡೂ ತಿಂಗಳುಗಳಿಗೂ 30 ದಿನಗಳು, ಹನ್ನೆರಡನೆಯ ತಿಂಗಳ ಕೊನೆಗೆ ಐದಾರು 'ಎಕ್ಸಟ್ರಾ' ದಿನಗಳು. ಮುಂದೆ ನೆಪೋಲಿಯನ್ನನು ಗ್ರಿಗೊರಿಯ ಪದ್ಧತಿಯನ್ನೇ ಅನುಸರಿಸಿದ.

1957ರ ಮಾರ್ಚ್ 22ರಂದು ಗ್ರಿಗೊರಿಯ ಪದ್ಧತಿಗೆ ಸರಿಹೊಂದುವ ಹಾಗೆ ಮೊದಲಿನಿಂದಲೂ ಜಾರಿಯಲ್ಲಿದ್ದ ಶಕ ವರ್ಷವನ್ನು ಅಧಿಕೃತವಾಗಿ ಸ್ವೀಕರಿಸಲಾಯಿತು. ಆ ಪ್ರಕಾರ ಹೊಸ ವರ್ಷವು ಮಾರ್ಚ್ 22ರಂದು (ಲೀಪ್ ಇಯರ್ ಇದ್ದಾಗ ಮಾರ್ಚ್ 23ರಂದು) ಪ್ರಾರಂಭವಾಗುವುದು. ಇದು ಯಾವಾಗಲೂ ಗ್ರಿಗೊರಿಯ ಕ್ಯಾಲಂಡರಿಗಿಂತ 78 ವರ್ಷಗಳಷ್ಟು ಮುಂದಿರುವುದು.

ಉಳಿದ ಕ್ಯಾಲಂಡರುಗಳ ಹಾಗೆ ಗ್ರಿಗೊರಿಯ ಕ್ಯಾಲಂಡರೂ ದೋಷರಹಿತವಾಗಿಲ್ಲ. ಬೇರೆ ಬೇರೆ ತಿಂಗಳುಗಳ ಮೊದಲ ದಿವಸ ಬೇರೆ ಬೇರೆ ದಿನಗಳಂದೇ ಪ್ರಾರಂಭವಾಗುವುದು. ವರ್ಷದ ಹನ್ನೆರಡು ತಿಂಗಳುಗಳು ಒಂದೇ ಸಮನಾಗಿಲ್ಲ. ವರ್ಷ ಸರಿಯಾಗಿ 52 ವಾರಗಳಿಗೇ ಕೊನೆಗೊಳ್ಳುವುದಿಲ್ಲ.

ಇದನ್ನು ಸರಿದೂಗಿಸಲು ಅನೇಕ ಸೂಚನೆಗಳು ಮುಂದೆ ಬಂದಿವೆ. ಒಂದು ಸಲಹೆಯ ಪ್ರಕಾರ ಇಪ್ಪತ್ತೆಂಟು ದಿನಗಳ ಅರ್ಥಾತ್ ನಾಲ್ಕು ವಾರಗಳನ್ನೊಳಗೊಂಡ ಹದಿಮೂರು ತಿಂಗಳುಗಳು ವರ್ಷಕ್ಕಿರಬೇಕು. ವರ್ಷದ ಕೊನೆಗೆ 365 ದಿನಗಳಿಗೆ ಸರಿದೂಗಿಸಲು ಒಂದು ದಿನವನ್ನು, ಲೀಪ್ ಇಯರ್ ಇದ್ದ ಪಕ್ಷದಲ್ಲಿ ಎರಡು ದಿನಗಳನ್ನು ಸೇರಿಸಬೇಕು. ಈ ದಿನಗಳು ಯಾವ ತಿಂಗಳಿಗಾಗಲಿ ವಾರಕ್ಕಾಗಲಿ ಸೇರಬೇಕೆಂದಿಲ್ಲ. ಹೀಗೆ ಮಾಡಿದರೆ ಪ್ರತಿ ತಿಂಗಳ ಮೊದಲ ದಿನಾಂಕ ಸೋಮವಾರದಿಂದಲೇ ಪ್ರಾರಂಭವಾಗುವುದು. ಇನ್ನೊಂದು ಸಲಹೆಯ ಪ್ರಕಾರ ವರ್ಷವನ್ನು ನಾಲ್ಕು ಪಾದಗಳಲ್ಲಿ ವಿಭಾಗಿಸಿ ಮೊದಲ ಪಾದವನ್ನು ಸೋಮವಾರದಿಂದ ಪ್ರಾರಂಭಿಸಿ ಕೊನೆಯ ಪಾದವನ್ನು ರವಿವಾರದಂದು ಅಂತ್ಯಗೊಳಿಸಬೇಕು. ಇಲ್ಲಿ ಪ್ರತಿ ಪಾದದಲ್ಲಿಯೂ 30, 30 ಹಾಗೂ 31 ರಂತೆ ಒಟ್ಟು 91 ದಿವಸಗಳಿರುತ್ತವೆ. ಆದರೆ ಈ ವ್ಯವಸ್ಥೆಯಲ್ಲಿಯೂ ವರ್ಷಕ್ಕೆ ಒಂದು ದಿನದಂತೆಯೂ ಲೀಪ್ ಇಯರ್‌ಗೆ ಎರಡು ದಿನಗಳಂತೆಯೂ ಕೂಡಿಸಬೇಕಾಗುವುದು.

ಗ್ರಹಗಳಿಗೆ ತಮ್ಮ ಅಕ್ಷದ ಸುತ್ತ ಸುತ್ತಲು ಬೇರೆ ಬೇರೆ ಅವಧಿ ತಗಲುವುದರಿಂದ ಕ್ಯಾಲಂಡರಿನ ಉಪಯೋಗ ಭೂಮಂಡಲಕ್ಕೆ ಮಾತ್ರ ಸೀಮಿತವಾಗಿದೆ. ಸೌರಮಂಡಲದ ಹೊರಗೆ ಬಾಹ್ಯಾವಕಾಶದಲ್ಲಿ ಕ್ಯಾಲಂಡರಿನ ಮಾತೇ ಅರ್ಥಹೀನ. ನಿಜಹೇಳಬೇಕೆಂದರೆ ನಾವು ಭಾವಿಸಿರುವ ಕಾಲವೇ ಬೇರೆ, ವಾಯುನೌಕೆಯಲ್ಲಿದ್ದವರು ಅನುಭವಿಸುವ ಕಾಲವೇ ಬೇರೆ. ಐನ್‌ಸ್ಟೈನರು ಒಮ್ಮೆ ಹೇಳಿದ ಹಾಗೆ ವಾಯುನೌಕೆಯ ವೇಗ ಹೆಚ್ಚಿದಂತೆಲ್ಲ ಕಾಲ ಕುಗ್ಗುತ್ತಾ ಹೋಗುತ್ತದೆ. ★



# ಕಣ್ಣಿಲ್ಲದೆಯೇ ನೋಡಬಲ್ಲ

# ಸೀಗಡಿ ಮೀನು

*ಬಿ. ಆರ್. ಶ್ರೀನಿವಾಸ*

ವಿಕಾಸದ ಕ್ರಮದಲ್ಲಿ ಕಂಡುಬರುವ ಅನೇಕ ಆಕಸ್ಮಿಕ ಘಟನೆಗಳನ್ನು ವಿಜ್ಞಾನಿಗಳು ಶೋಧಿಸಲಾಗಿ, ಸೋಜಿಗದ ವಿಷಯಗಳು ಹೊರಬಿದ್ದಿವೆ. ಅಟ್ಲಾಂಟಿಕ್ ಮಹಾಸಾಗರದ ಮಧ್ಯಭಾಗದಲ್ಲಿ ಸಾಗರ ತಲದಲ್ಲಿ ವಾಸಿಸುತ್ತಿರುವ ಸೀಗಡಿ ಮೀನು ಇದಕ್ಕೆ ಹೊರತಲ್ಲ.

ಸಾಗರದಲ್ಲಿ ಎರಡು ಸಾವಿರದಿಂದ ಆರು ಸಾವಿರ ಮೀಟರುಗಳ ಆಳದಲ್ಲಿ ವಾಸಿಸುವ ಪ್ರಾಣಿಸಮೂಹಕ್ಕೆ ಜಲತಲ ಪ್ರಾಣಿವರ್ಗ ಎಂದು ಹೆಸರು. ಈ ಜಲತಲ ಪ್ರದೇಶ ತನ್ನ ಭೌತಲಕ್ಷಣಗಳ ವೈಪರೀತ್ಯಗಳಿಗೆ ಹೆಸರಾಗಿದೆ. ಪರಿಸ್ಥಿತಿಗಳಲ್ಲಿ ಹೆಚ್ಚು ಬದಲಾವಣೆಗಳಾಗುವುದಿಲ್ಲ. ಸೂರ್ಯನ ಬೆಳಕು ಜಲತಲ ಪ್ರದೇಶದ ಆಳಕ್ಕೆ ಇಳಿಯುವುದಿಲ್ಲವಾದ್ದರಿಂದ ಇಲ್ಲಿ ಸದಾ ಕಾರ್ಗತ್ತಲು.

ಆಹಾರದ ಅಭಾವ ಮತ್ತು ಪ್ರತಿಕೂಲ ಪರಿಸರದಿಂದಾಗಿ ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ಸಾಗರಜೀವಿಗಳು ಕಂಡು ಬರದಿದ್ದರೂ ಕೆಲವು ಅಪೂರ್ವ ಬಗೆಯ ಪ್ರಾಣಿಗಳು ಉಂಟು. ಇದಕ್ಕೆ ಜ್ವಲಂತ ಸಾಕ್ಷಿಯೆಂದರೆ ಮಧ್ಯ ಅಟ್ಲಾಂಟಿಕ್ ಮಹಾಸಾಗರದ ತಲದಲ್ಲಿ ನೆಲೆಸಿರುವ ಸೀಗಡಿ ಮೀನು.

ಈ ಸಾಗರದ 800ರಿಂದ ಸಾವಿರ ಮೀಟರುಗಳ ಆಳದಲ್ಲಿ ಗಂಧಕ ಚಿಲುಮೆಯಿದೆ. ಈ ಚಿಲುಮೆಯಲ್ಲಿ ಸತತವಾಗಿ ರಾಸಾಯನಿಕ ಕ್ರಿಯೆ ನಡೆಯುತ್ತಿದ್ದು ಇದರಿಂದ ಸುಮಾರು 350 ಸೆಂಟಿ ಗ್ರೇಡಿನಷ್ಟು ಉಷ್ಣತೆ ಸದಾ ಉತ್ಪನ್ನವಾಗುತ್ತಿರುತ್ತದೆ. ಅದಲ್ಲದೇ ಈ ಕ್ರಿಯೆ



**ಮೇಲೆ ತೋರಿಸಿರುವುದು ನಮ್ಮ ಪಶ್ಚಿಮ ಕರಾವಳಿಯಲ್ಲಿ ದೊರೆಯುವ ಸೀಗಡಿ ಮೀನು. ಆದರೆ ಅಟ್ಲಾಂಟಿಕ್ ಸಾಗರದಲ್ಲಿ ನೆಲೆಸಿರುವ ಸೀಗಡಿ ಮೀನಿಗೆ ಇದರಂತೆ ಕಣ್ಣಿರುವುದಿಲ್ಲ.**

ಯಿಂದ ಮಂದಗತಿಯ ಬೆಳಕು ಸಹ ಉದ್ಭವಿಸುತ್ತದೆ. ಆದರೆ ಈ ಮಂದಗತಿಯ ಬೆಳಕನ್ನು ಬರಿಗಣ್ಣಿನಿಂದ ನೋಡಲು ಸಾಧ್ಯವಿಲ್ಲ. ಅರ್ಥಾತ್ ಜಲತಲ ಪ್ರದೇಶದ ಅನೇಕ ಭಾಗಗಳು ಕಾರ್ಗತ್ತಲಲ್ಲಿ ಮುಳುಗಿರುವಾಗ 'ಗಂಧಕ ಚಿಲುಮೆ'ಯಿರುವಲ್ಲಿ ಮಂದಗತಿಯ ಬೆಳಕು ಪಸರಿಸಿರುತ್ತದೆ. ಗಂಧಕವನ್ನೇ ಆಹಾರವನ್ನಾಗಿ ಉಪಯೋಗಿಸುವ ಮತ್ತು ಸೂಕ್ಷ್ಮ ಜೀವಿಗಳು (Micro-organism) ಇಲ್ಲಿ ಉಷ್ಣ ಪರಿಸರದಲ್ಲಿ ಹಾಯಾಗಿ ವಾಸಿಸುವುದೊಂದು ವಿಚಿತ್ರ. ವಿಪರ್ಯಾಸವೆಂದರೆ, ಈ ಜೀವಿಗಳೇ ಸೀಗಡಿ ಮೀನಿನ ಆಹಾರದ ಅವಿಭಾಜ್ಯ ಅಂಗ. ಜಲತಲ ಪ್ರದೇಶದಲ್ಲಿ ವಾಸಿಸುವ ಪ್ರಾಣಿಗಳು ಪ್ರತಿಕೂಲ ಪರಿಸರವನ್ನು ತಾಳಿಕೊಳ್ಳಲು ಅನುವಾಗುವಂತೆ ವಿಕಾಸಗೊಂಡಿವೆ. ಜಲತಲ ಪ್ರದೇಶದ ಕಾರ್ಗತ್ತಲು ಇಲ್ಲಿನ ಪ್ರಾಣಿಗಳ ಕಣ್ಣುಗಳ ಮೇಲೆ ಪ್ರಭಾವ ಬೀರಿದೆ. ಅನೇಕ ಅಕಶೇರುಕಗಳಲ್ಲಿ ಕಣ್ಣುಗಳು ಕ್ಷೀಣಿಸಿವೆ. ಕೆಲವಕ್ಕೆ ಕಣ್ಣುಗಳೇ ಇಲ್ಲ. ಮತ್ತೆ ಕೆಲವಕ್ಕೆ ಬಹು ದೊಡ್ಡ ಕಣ್ಣುಗಳಿವೆ. ಇನ್ನು ಕೆಲವಕ್ಕೆ ದೂರದರ್ಶನವನ್ನು ಹೋಲುವ ಕಣ್ಣುಗಳಿವೆ. ಈ ರೀತಿಯ ಮಾರ್ಪಾಡುಗಳನ್ನು ಮೀನುಗಳಲ್ಲೂ ಕಾಣಬಹುದು. ಕೆಲವು ಮೀನುಗಳಲ್ಲಿ ಕಣ್ಣುಗಳಿದ್ದರೂ ದೃಷ್ಟಿಮಾಂದ್ಯ ಎಂದು ವಿಜ್ಞಾನಿಗಳ ಅಭಿಪ್ರಾಯ. ಕುರುಡು ಅಥವಾ ಕ್ಷೀಣಗೊಂಡ ಕಣ್ಣುಳ್ಳ ಮೀನುಗಳಲ್ಲಿ, ಬೆನ್ನಿನ ರೆಕ್ಕೆ, ಹೊಟ್ಟೆ ಅಥವಾ ಬಾಲಗಳಲ್ಲಿ ಉದ್ದವಾದ ತಂತುಗಳು ಸ್ಪರ್ಶೇಂದ್ರಿಯಗಳಾಗಿ ಮಾರ್ಪಾಡಾಗಿವೆ. ಆದರೆ ಸೀಗಡಿ ಮೀನು ಇವೆಲ್ಲವುಗಳಿಗಿಂತ ಭಿನ್ನ.

ಗಂಧಕದ ಚಿಲುಮೆಯಲ್ಲಿ ಸೂಕ್ಷ್ಮಕ್ರಿಮಿಗಳು ಸೀಗಡಿ ಮೀನಿನ ಉಳಿವಿಗೆ ಅತ್ಯವಶ್ಯಕ. ಇದರ ಅಲ್ಪ ಭಾಗ ಇದರ ಆಹಾರವಾದರೆ, ಉಳಿದ ಭಾಗ ಮೀನಿನ ಕರುಳಿನಲ್ಲಿ ವಾಸಮಾಡಿ ಒಂದು ರೀತಿಯ ಕಿಣ್ವಗಳನ್ನು ಉತ್ಪಾದಿಸುತ್ತದೆ. ಹೀಗೆ ಉಂಟಾದ ಕಿಣ್ವಗಳು, ಮೀನು ನುಂಗಿದ ಇತರ ಆಹಾರ ಪದಾರ್ಥಗಳು ಜೀರ್ಣವಾಗಲು ಅತ್ಯವಶ್ಯಕ.

ಈ ಏಕ ಜೀವಾಣುಗಳು ಗಂಧಕ ಚಿಲುಮೆಯ ಪರಿಸರದಲ್ಲಿ ಹೆಚ್ಚು ಪ್ರಮಾಣದಲ್ಲಿ ಇರುತ್ತವೆ. ಆದರೆ ಸೀಗಡಿ ಮೀನು ಚಿಲುಮೆಯ ಹತ್ತಿರ ಹೋದರೆ ಬೆಂದು ಹೋಗುತ್ತದೆ. ಆದ್ದರಿಂದ ಚಿಲುಮೆಯಿಂದ ಒಂದು ಮೀಟರ್ ದೂರದಿಂದಲೇ ಆಹಾರವನ್ನು ಎಳೆದುಕೊಳ್ಳುತ್ತದೆ. ಆದರೆ ಈ ಮೀನಿಗೆ ಕಣ್ಣೇ ಇಲ್ಲ. ಅಲ್ಲದೆ ಈ ಮೀನಿಗೆ ಇತರ ಮೀನುಗಳಿಗೆ ಅಲ್ಲದೆ ಇತರ ಪ್ರಾಣಿಗಳಿಗೆ ಇರುವಂತಹ ಕಣ್ಣಾಲಿಗಳಿಲ್ಲ. ವಿಶೇಷವೆಂದರೆ ದೃಷ್ಟಿಕೋನಕ್ಕೆ ಅತ್ಯವಶ್ಯಕವಾದ ರೊಡೋಪ್ಸಿನ್ ಎಂಬ ಸಸಾರಜನಕ ಇದರಲ್ಲಿ ಬೇರೆ ಮೀನುಗಳಲ್ಲಿ ಇರುವ ಪ್ರಮಾಣಕ್ಕಿಂತ ಅಧಿಕವಾಗಿದೆ.

ಕಣ್ಣೇ ಇಲ್ಲದ ಈ ಮೀನು ವಸ್ತುಗಳ ಬಿಂಬವನ್ನು ಮತ್ತು ಆಹಾರವನ್ನು ಹೇಗೆ ಗ್ರಹಿಸುತ್ತದೆ? ಇದರ ಕಣ್ಣಾಲಿಗಳು, ಕಣ್ಣುಗುಡ್ಡೆ ಮತ್ತು ಪಾಪೆಗಳು ನಮ್ಮ ಕಣ್ಣಿಗೆ ಕಾಣುವುದಿಲ್ಲ. ಆದರೆ ಕಣ್ಣಿನ ಅಂಗವೇ ಒಂದು ಬಗೆಯಲ್ಲಿ ರೂಪಾಂತರ ಹೊಂದಿದೆ. ಇದರಿಂದಾಗಿ ಬೆಳಕಿನ ಸಾಂದ್ರತೆಯನ್ನು ಅರಿಯಲು ಮತ್ತು ವಸ್ತುವಿನ ಬಿಂಬರೂಪ ಗ್ರಹಿಸಲು ಅನುವಾಗುವ ಹಾಗೆ ವಿಶೇಷವಾದ ಕಣ್ಣಿನ ಅಂಗರಚನೆ ಉಂಟಾಗಿದೆ. ಪ್ರಕೃತಿಯಲ್ಲಿ ಇರುವ ಪ್ರತಿಕೂಲ ಪರಿಸರಕ್ಕೆ ಹೊಂದಿಕೊಂಡು, ವಿಕಾಸಹೊಂದುತ್ತಿರುವ ಜೀವರಾಶಿಗಳ ಜೀವನಚಕ್ರಕ್ಕೆ ಸೀಗಡಿ ಮೀನು ಒಂದು ಜ್ವಲಂತ ಸಾಕ್ಷಿಯಾಗಿದೆ. ಕಣ್ಣಿನ ವಕ್ರೀಭವನ ತಂತ್ರದ ಬಗ್ಗೆ ಹೊಸ ಬೆಳಕನ್ನು ಚೆಲ್ಲಲು ಈ ಮೀನಿನ ಕಣ್ಣಿನ ಅಂಗರಚನೆಯ ಬಗ್ಗೆ ಸಂಶೋಧನೆಯೀಗ ನಡೆಯುತ್ತಿದೆ. ●



# ಸಮೇತನ ಹಳ್ಳಿ ರಾಮರಾಯರು

**ತಾ.** 21.08.1987ರಂದು ಮೈಸೂರಿನಲ್ಲಿ ನಡೆಯುವ ರಾಜ್ಯ ಮಟ್ಟದ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಹಾಗೂ ಸಂಯುಕ್ತ ಕಿರಿಯ ಮಹಾ ವಿದ್ಯಾಲಯಗಳ ಪ್ರಾಂಶುಪಾಲರ ಸಂಘದ ಮಹಾ ಸಭೆಯಲ್ಲಿ ನಾನು ಭಾಗವಹಿಸುಪವನಿದ್ದೇನೆ. ನೀವು ಅಲ್ಲಿ ಬಂದು ನನ್ನನ್ನು ಭೇಟಿ ಮಾಡಬಹುದು,'' ಎಂಬ ನನ್ನ ಪ್ರಾಂಶುಪಾಲರಾದ ಶ್ರೀ ದತ್ತಾತ್ರಿಮೂರ್ತಿಗಳ ಪತ್ರ ನನಗೆ ಬಂದಿತು. ಅದರಂತೆ ಆ ದಿನ ಮಧ್ಯಾಹ್ನ ಸಭೆ ಮುಗಿಯುತ್ತಿದ್ದಂತೆ ಬಸವಾನಿಯ ಕಿರಿಯ ಮಹಾ ವಿದ್ಯಾಲ-
ಯದ ಪ್ರಾಂಶುಪಾಲರೂ ನನ್ನ ಪೂಜ್ಯ ಗುರುಗಳೂ ಆಗಿರುವ ಶ್ರೀ ಎಸ್.ವರದಾಚಾರ್ಯರೂ ನನ್ನ ಕೈಗೆ ಒಂದು ಚೀಟಿ ಕೊಟ್ಟು, ''ನೋಡೋ, ಈ ವಿಳಾಸದವರ ಮನೆಗೆ ಹೋಗಿಬರಬೇಕು. ನನ್ನ ಸಹೋದ್ಯೋಗಿ ಶ್ರೀ ಸೂರ್ಯನಾರಾಯಣ ವಾಕೋಡರವರು ಹೇಳಿದ್ದಾರೆ; ಈ ಪುಸ್ತಕ ತರಬೇಕಂತೆ,'' ಎಂದರು. ಚೀಟಿ ಬಿಡಿಸಿ ನೋಡಿದಾಗ ಅದರಲ್ಲಿ 'ರಾಸ ಪ್ರಕಾಶನ, ಗೋಕುಲ 3ನೇ ಹಂತ, ಶ್ರೀ ಸಮೇತನಹಳ್ಳಿ ರಾಮರಾಯರು, ಪುಸ್ತಕ 'ಶ್ರೀಕೃಷ್ಣದರ್ಶನ' ಎಂದಿತ್ತು.

ಗೋಕುಲಂನ ಮೂರನೇ ಹಂತವನ್ನೂ ತಲುಪಿದ್ದಾಯಿತು. ಜೊತೆಗೆ ನನ್ನ ಒರಿಸ್ಸದ ಮಿತ್ರರೂ ಇದ್ದರು. ಆದರೆ ಅಡ್ಡದಾರಿ, ಮನೆ ಸಂಖ್ಯೆ ಇಲ್ಲದೆ ನಾವು ಅಡ್ಡಾಡುತ್ತಿದ್ದಾಗ, ಮಗುವನ್ನು 'ಬಾಲಬಂಡಿ'ಯಲ್ಲಿಟ್ಟು

**ಪಿ.ಶಾಂತಾರಾಮಪ್ರಭು**

ವಾಯುವಿಹಾರ ಮಾಡುತ್ತಿದ್ದವರೊಬ್ಬರನ್ನು ವಿಚಾರಿಸಿದೆವು. ''ನನಗೆ ಅವರ ಹೆಸರು, ಮನೆ ಗೊತ್ತು ಸಾರ್. ಆದರೆ ಅವರೊಬ್ಬ ಲೇಖಕರೆಂದು ಮಾತ್ರ ನನಗೆ ಗೊತ್ತಿಲ್ಲ. ನಾನು ಜಯರಾಂ ಅಂತ. ಅವರ ಮೊಮ್ಮಗ ಮತ್ತು ನಾನು ಇಬ್ಬರೂ ಸತೀರ್ಥರು. ಬನ್ನಿ, ಮನೆ ತೋರಿಸುತ್ತೇನೆ,'' ಎಂದು ಮನೆಯವರೆಗೂ ಕರೆತಂದು, ''ರವಿ, ನಿನ್ನ ತಾತನನ್ನು ಹುಡುಕಿಕೊಂಡು ಯಾರೋ ಬಂದಿದ್ದಾರೆ. ತಾತ ಮನೇಲಿ ಇದಾರಾ?'' ಎಂದು ಕೇಳಿದರು. ''ಇದಾರೆ ಬನ್ನಿ,'' ಎಂದು ಉತ್ತರ ಬಂತು. ಒಳಗೆ ಕಾಲಿರಿಸಿದೆವು. ಸುಖಾಸನದಲ್ಲಿ ಮಂಡಿತರಾಗಿದ್ದ ಈ ಪಂಡಿತರನ್ನು ಕಂಡಾಗ, ನಾನು ಬಹಳ ಹಿಂದೆ ಓದಿದ 'ಸವತಿ ಗಂಧವಾರಣೆ' ಹಾಗೂ 'ತಲಕಾಡುಗೊಂಡ'ಗಳು ಮನಸ್ಸನ್ನು ತುಂಬಿದವು. ವಿಶ್ವವಿಖ್ಯಾತೆಯಾದ ಶಾಂತಲೆಯನ್ನು ಕುರಿತ ಕೆ.ವಿ.ಅಯ್ಯರ್, ತ.ರಾ.ಸು., ಸಿ.ಕೆ.ನಾಗರಾಜರಾವ್, ಸಾ.ಶಿ.ಮರುಳಯ್ಯ-ಮುಂತಾದವರ ಪುಸ್ತಕಗಳನ್ನೂ ಓದಿದ್ದೇನೆ. ಆದರೆ 'ಸವತಿ ಗಂಧವಾರಣೆ' ನನ್ನ ಮನಸ್ಸಿನಲ್ಲಿ ಆಳವಾಗಿ ಬೇರೂರಿದ ಪುಸ್ತಕ. ನಮ್ಮನ್ನು ಚಿರಪರಿಚಿತರಂತೆ ಸೌಜನ್ಯ ಹಾಗೂ ಆತ್ಮೀಯತೆಯಿಂದ ಆದರಿಸಿ, ಕುಳ್ಳಿರಿಸಿ ಮಾತನಾಡಿದರು. ಆಗಾಗ ಅಲ್ಲಿ ಬರುತ್ತಿದ್ದ ತಮ್ಮ ಪರಿವಾರದವರನ್ನೆಲ್ಲ ನನಗೆ ಪರಿಚಯಿಸುತ್ತಲಿದ್ದರು. ಅವರ ಮಾತುಗಳನ್ನು ಕೇಳುತ್ತಾ ಕುಳಿತ ನಮಗೆ ಸಮಯ ಸರಿದುದೇ ತಿಳಿಯಲಿಲ್ಲ.

ಜ್ಞಾನವೃದ್ಧರೂ, ವಯೋವೃದ್ಧರೂ ಆದ ರಾಮರಾಯರು ಹುಟ್ಟಿದ್ದು ಬೆಂಗಳೂರಿನ (ವೈಟ್‌ಫೀಲ್ಡ್) 'ಶ್ವೇತಕ್ಷೇತ್ರ'ದಿಂದ ನಾಲ್ಕು ಕಿಲೋಮೀಟರ್ ದೂರದ ಸಮೇತನ ಹಳ್ಳಿಯಲ್ಲಿ (24.11.1917). ಎಸ್.ಎಸ್.ಎಲ್.ಸಿ.ವರೆಗೆ ಶಿಕ್ಷಣ. ವೃತ್ತಿಯಿಂದ ಆರೋಗ್ಯ ತನಿಖಾಧಿಕಾರಿಗಳಾದರೂ (Health Inspector) ಪ್ರವೃತ್ತಿಯಿಂದ ಸಾಹಿತ್ಯಾಭ್ಯಾಸಿಗಳು. ವೃತ್ತಿಯಿಂದ ನಿವೃತ್ತರಾದರೂ ಅಧ್ಯಯನ ಬರಹಗಳ ನಿರಂತರ ಕ್ರಿಯಾಶೀಲತೆ. ಸದಾಕಾಲವೂ ಮಾತಿನಲ್ಲಿ ಇಂಪು. ಮುಖದಲ್ಲಿ ಶುಭ್ರ ಮಂದಹಾಸ. ಉತ್ಸಾಹದ ಬುಗ್ಗೆಯಾಗಿರುವುದಕ್ಕೆ ಇವರ ಕ್ರಿಯಾಶೀಲ ಜೀವನವೇ ಕಾರಣ ಎಂಬುದು ಇಂದಿನ ಯುವ ಜನಾಂಗಕ್ಕೊಂದು ಮಾದರಿ. ಈಗ 'ಶ್ರೀಕೃಷ್ಣ ದರ್ಶನ'ವೆಂಬ ಸುಮಾರು 600 ಪುಟಗಳನ್ನೂ ಮಿಕ್ಕ ಒಂದು ಪುಸ್ತಕವನ್ನು ಬರೆದು ಅದರ ಪ್ರಕಟಣೆಯ ಹೊರೆಯನ್ನು ಹೊತ್ತಿದ್ದಾರೆ. (ಈ ಚಿಕಿತ್ಸಕ ದೃಷ್ಟಿಯ ಪುಸ್ತಕಕ್ಕೆ ಪ್ರಕಟಣ ಪೂರ್ವ ಬೆಲೆ ರೂ. 60-00ನ್ನಿಟ್ಟು ರಾಯರು ಸುಮಾರು ಎರಡು ಮೂರು ಸಾವಿರ ಸಾಹಿತ್ಯಾಸಕ್ತರಿಗೆ ಈ ಪುಸ್ತಕದ ಬಗ್ಗೆ ಪತ್ರ ಬರೆದರಂತೆ.)

''ನೋಡಿ, ಐತಿಹಾಸಿಕ ವ್ಯಕ್ತಿಯಾದ ಕೃಷ್ಣ ಪುರಾಣ ಪುರುಷನಾದ, ಪವಾಡ ಪುರುಷನಾದ. ಶೃಂಗಾರಕ್ಕೆ ಮತ್ತೊಂದು ಹೆಸರು ಕೃಷ್ಣ. ಆತನ ಪತ್ನಿಯರು ಎಷ್ಟು ಎಂಬ ವಿಚಾರವಾಗಿ ಎಲ್ಲಿಯೂ ಏಕಾಭಿಪ್ರಾಯವಿಲ್ಲ. ಭಾಗವತ, ವಿಷ್ಣು ಪುರಾಣ, ಬ್ರಹ್ಮವೈವರ್ತ ಪುರಾಣ ಮುಂತಾದ ಕಡೆಯಲ್ಲಿ ಕೃಷ್ಣನ ವರ್ಣನೆಗಳಿವೆ. ವಿಷ್ಣು ತನ್ನೆಲ್ಲ ಅವತಾರಗಳಲ್ಲಿಯೂ ಏಕಪತ್ನೀಕಾಂತ. ಆದರೆ ಕೃಷ್ಣನೊಬ್ಬ 'ಬಹುಪತ್ನೀಕಾಂತ'ನಾಗುವುದಾದರೂ ಹೇಗೆ? ಕೃಷ್ಣನ ಸುತ್ತ ಅಂತಹ ಕಥೆಗಳು ಏಕೆ ಹೆಣೆಯಲ್ಪಟ್ಟವು?'' ನಾನು ಕೇಳಿದೆ.

''ಏಕೆಂದರೆ, ಮನುಷ್ಯನಿಗೆ ಸಾಹಿತ್ಯದಲ್ಲಿ ಒಲವು ಮೂಡುವುದು ಅದರಲ್ಲಿ ಶೃಂಗಾರವಿರುವಾಗ. ಕೃಷ್ಣ ಕಥೆಯನ್ನು ಜನಪ್ರಿಯವಾಗಿಸುವುದಕ್ಕೆ ಇಂತಹ ಶೃಂಗಾರ ಕಥೆಗಳು ಹಬ್ಬಿದವು. ವಿಜ್ಞಾನದ ನಿಯಮಗಳಿಗೆ ಸಂಪೂರ್ಣ

ವಿರುದ್ಧವಾದ ಘಟನೆಗಳನ್ನು ನಮ್ಮ ಗ್ರಂಥಗಳಲ್ಲಿ ಸೇರಿಸಿದರು.''

''ಶ್ರೀಕೃಷ್ಣದರ್ಶನದ ನಿಮ್ಮ ಕೃಷ್ಣ ಹೇಗೆ?''

''ನಾನು ಕಂಡ ಕೃಷ್ಣ ಸ್ವಲ್ಪ - ಸ್ವಲ್ಪ ಏನು, ಸಂಪೂರ್ಣ-ಭಿನ್ನ. ಪೌರಾಣಿಕ ಕೃಷ್ಣನನ್ನು ಮೆಚ್ಚುವವರು ಈ ಬಗ್ಗೆ ನನ್ನ ಮೇಲೆ ಗದಾಪ್ರಹಾರ ಮಾಡಿದರೂ ಮಾಡಬಹುದು. ನಾನು ಚಿತ್ರಿಸಿದ ಕೃಷ್ಣ ಧೀರೋದಾತ್ತ. ಅವನಿಗೆ ರುಕ್ಮಿಣಿ ಒಬ್ಬಳೇ ಪತ್ನಿ.''

''ಗದಾಪ್ರಹಾರವೇಕೆ?''

''ಕೃಷ್ಣ ಮಾಂಸ ತಿನ್ನುತ್ತಿದ್ದ, ಮಧುವನ್ನು ಕುಡಿಯುತ್ತಿದ್ದ ಎಂದೆಲ್ಲಾ ಹೇಳಿದರೆ ನೀವು ಸುಮ್ಮನಿರುತ್ತೀರಾ? ಕೃಷ್ಣನನ್ನು ನಮ್ಮ ಮುಂದಿನ ಜನಾಂಗದವರು ಹೇಗೆ ತಿಳಿದುಕೊಳ್ಳಬೇಕು ಎಂಬ ವಿಚಾರ ಈ ಪುಸ್ತಕದಲ್ಲಿದೆ.''

ರಾಯರು ತಮ್ಮ ನೆನಪಿನ ಭಾಂಡಾರ ಬಿಚ್ಚಿದರು. ತಮ್ಮ ಜೀವನ ಕಷ್ಟಗಳನ್ನು ನೆನಪಿಗೆ ತಂದುಕೊಂಡರು. ಕನ್ನಡದಲ್ಲಿ ಎಂ.ಎ. ಮಾಡಬೇಕೆಂಬ ಹೆಬ್ಬಯಕೆ ಇದ್ದರೂ, ಮನೆಯ ಪರಿಸ್ಥಿತಿ ಅದನ್ನು ಈಡೇರಗೊಡಲಿಲ್ಲ. ಹಿರಿಯ ಮಗನಾಗಿ ಹೊಣೆಯ ಹೊರೆ ಹೊತ್ತರು. ಸೋದರ ಸೋದರಿಯರ ಭವಿಷ್ಯ ರೂಪಿಸಲು ಶ್ರಮಿಸಿದರು. ನೈರ್ಮಲ್ಯ ಪರೀ

### ಸಮೇತನಹಳ್ಳಿಯವರ ಕೃತಿಗಳು

**ನಾಟಕಗಳು:**
ಭೀಷ್ಮ ಸಂಕಲ್ಪ, ಮಹಾಶ್ವೇತೆ, ತಲಕಾಡುಗೊಂಡ, ಶಿಲ್ಪ ಸಂಗೀತ, ರಾಸಲೀಲೆ *(ಗೀತನಾಟಕ)*, ದ್ರೋಹಾಡಂಬರ, ನಾಟ್ಯಮಂದಾರ *(ಐತಿಹಾಸಿಕ)*, ಕಲಾರಾಧನೆ *(ಏಕಾಂಕಗಳು)* ಪಿನಾಕಿನಿ *(ಏಕಾಂಕಗಳು)*

**ಕಾದಂಬರಿಗಳು:**
ಎಲೆಮರೆಯ ಹೂ, ಸವತಿ ಗಂಧವಾರಣೆ, ನೃತ್ಯಸರಸ್ವತಿ, ಯದುವೊಡೆಯ, ಸಿರಿಯಲದೇವಿ

**ಕಥಾ ಸಂಕಲನಗಳು:**
ಮಹಾಶ್ವೇತೆ *(ನೀಳ್ಗತೆ)*, ಸ್ವರ್ಗಸೋಪಾನ, ಪ್ರಾಣವೀಣೆ

**ಮಹಾಕಾವ್ಯ:**
ಶಾಕುಂತಲಾ

**ಜೀವನಕಥೆ:**
ಅಳಿಲು ಸೇವೆ (ಶ್ರೀ ತಗಡೂರು ರಾಮಚಂದ್ರರಾಯರ ಕುರಿತು)

**ಅನುವಾದ:**
ಜೂಲಿಯಸ್ ಸೀಜರ್

**ಪೌರಾಣಿಕ:**
ಶ್ರೀಕೃಷ್ಣ ದರ್ಶನ

ಕ್ಷಕನಾಗಿ ವೃತ್ತಿ ಜೀವನದಲ್ಲಿ ಪದಾರ್ಪಣ ಮಾಡಿದರು. 'I joined as a health inspector, I retired as a health inspector, but want to die something else' ಎಂದಿದ್ದ ನೋಡಿ ಯಾವುದೋ ಸಂದರ್ಭದಲ್ಲಿ.

''ನಾನು ಯಾವುದೇ ಸಂದರ್ಭದಲ್ಲಿಯೂ ನನ್ನ ಪುಸ್ತಕಗಳಲ್ಲಿ ನಾನೊಬ್ಬ Health Inspector ಎಂದು ಹೇಳಿಕೊಂಡಿಲ್ಲ. ಬಾಕಿ ಸಂದರ್ಭದಲ್ಲಿ ನಾನೊಬ್ಬ ಲೇಖಕ ಎಂದೂ ಹೇಳಿಲ್ಲ. ನಮ್ಮ ಮನೆಯವರಿಗೆಲ್ಲಾ ನನ್ನ strict instruction ಏನೆಂದರೆ ಅಪರಿಚಿತರಿಗೆ ನಾನೊಬ್ಬ ಲೇಖಕನೆಂದು ಹೇಳಬಾರದೆಂಬುದು.'' ಈ ಇಳಿ ವಯದಲ್ಲಿಯೂ ಇಷ್ಟತ್ತೊಂದರ ಲವಲವಿಕೆ ಅವರದು. ಕಷ್ಟ ಕಾಲದಲ್ಲಿ ತಮಗೆ ನೆರವಾದವರನ್ನೆಲ್ಲಾ ಬಹು ಕೃತಜ್ಞತೆಯಿಂದ ಸ್ಮರಿಸುತ್ತಾರೆ ರಾಯರು.

''ನೋಡಿ, 1944ರಿಂದ ಡಾ.ಜಿ.ವರದರಾಜರಾವ್ ನನ್ನ ಸ್ನೇಹಿತರು. ನನ್ನ ಮೊದಲ ಕೃತಿಗೆ 'ಭೀಷ್ಮ' ಎಂದು ನಾಮಕರಣ ಮಾಡಿದವರು ಅವರೇ. ನನ್ನ ಪುಸ್ತಕಗಳನ್ನು ಬಹುಸುಂದರವಾಗಿ ಮುದ್ರಿಸಿಕೊಟ್ಟವರು ದಿ.ಜಿ.ಹೆಚ್. ರಾಮರಾಯರು. ನನ್ನ ಪುಸ್ತಕಗಳನ್ನು ಚೆನ್ನಾಗಿ ಮುದ್ರಿಸಿ, ನಾನು ಕೊಟ್ಟಾಗ ಕೊಟ್ಟಷ್ಟು ಹಣ ತೆಗೆದುಕೊಂಡರು. ರಾ.ನಾ. ಹುಬ್ಬುರವರು ನನ್ನ ಮತ್ತೊಬ್ಬ ಆತ್ಮೀಯ ಸ್ನೇಹಿತರು; ನನ್ನ ಅತ್ಯಂತ ಆತ್ಮೀಯ ನಿಕಟವರ್ತಿಗಳು. ನನ್ನಂಥವನಲ್ಲಿದ್ದ ಕಾವ್ಯಾಸಕ್ತಿಯನ್ನು ಗಮನಿಸಿ ಗುರುತಿಸಿ, ಪ್ರೋತ್ಸಾಹಿಸಿದರು. ನನ್ನ ಪುಸ್ತಕಗಳನ್ನು ಪಠ್ಯ ಪುಸ್ತಕಗಳನ್ನಾಗಿ ಮಾಡಿದರು. ನನ್ನನ್ನು ತಮ್ಮ ಕಾರಿನಲ್ಲಿ ಕರೆದುಕೊಂಡು ಹೋಗಿ ನನಗಾಗಿ ಒಂದು ಗಂಟೆ ಕಾದು, ಆಗ DPI ಆಗಿದ್ದ ವಾಸುದೇವಯ್ಯನವರಿಗೆ ಪರಿಚಯ ಮಾಡಿಸಿ, ನನ್ನ



ಕೃತಿಗಳಲ್ಲಿ ಒಂದನ್ನು ಪಠ್ಯ ಪುಸ್ತಕವನ್ನಾಗಿ ಮಾಡುವಂತೆ ಕೇಳಿಕೊಂಡರು.'' ಎಂದರು.

ರಾಯರು 'ಶಾಕುಂತಲಾ' ಎಂಬ ಕಾವ್ಯವನ್ನೂ ಬರೆದಿದ್ದಾರೆ. ಕುವೆಂಪುರವರ 'ಶ್ರೀರಾಮಾಯಣದರ್ಶನಂ' ಬಿಟ್ಟರೆ ಇಂತಹ ಕಾವ್ಯ ಅದುವರೆಗೆ ಇನ್ನೊಂದು ಸೃಷ್ಟಿಯಾಗಿರಲಿಲ್ಲ.

'ಶ್ರೀಕೃಷ್ಣದರ್ಶನಂ' ಅವರ ಇಪ್ಪತ್ತು ವರ್ಷದ ಅಧ್ಯಯನದ ಫಲ. ಅದಕ್ಕಾಗಿ ಭಾರತ, ಭಾಗವತ, ಬಂಕಿಮಚಂದ್ರರ ಕೃಷ್ಣನನ್ನು ಕುರಿತ ಪ್ರಬಂಧಗಳು, ವಿವಿಧ ಭಾರತಗಳು, ವಿವಿಧ ಆವೃತ್ತಿಯ ಭಗವದ್ಗೀತೆಗಳು ಎಲ್ಲವನ್ನೂ ತರಿಸಿ ಅಧ್ಯಯನ ಮಾಡಿದ್ದಾರೆ. ಶ್ರೀ ಎಸ್. ಶ್ರೀಕಂಠಶಾಸ್ತ್ರಿಗಳ ಹಾಗೂ ಶ್ರೀ ಎಂ. ಗೋವಿಂದ ಪೈಗಳ ಅಪಾರ ಸಹಕಾರವನ್ನು ಹೃತ್ಪೂರ್ವಕವಾಗಿ ಅವರು ಸ್ಮರಿಸಿಕೊಂಡರು.

''ಗೋವಿಂದ ಪೈಗಳಂತಹ ಧೀಮಂತ ವಿದ್ವಾಂಸನನ್ನು ಎಲ್ಲಿಂದ ತರೋಣ! ಏನೇ ಬರೆದರೂ 2-3 ದಿನಗಳಲ್ಲಿ ಉತ್ತರ ಬರೆಯುತ್ತಿದ್ದರು. ಅವರು ಸಾಯುವ ಹದಿನೈದು ದಿನ ಮೊದಲು ನನಗೊಂದು ಪತ್ರ ಬರೆದಿದ್ದರು. ಶ್ರೀಕಂಠಶಾಸ್ತ್ರಿಗಳಂತೂ ನಾನು 'ಸವತಿ ಗಂಧವಾರಣ' ಬರೆಯುವಾಗ ತುಂಬಾ ಸಹಾಯ ಮಾಡಿದರು.''

ಶ್ರೀಯುತರು ಒಟ್ಟು 3117 ಪುಟಗಳಷ್ಟು ಸಾಹಿತ್ಯ ರಚಿಸಿದ್ದಾರೆ. ಅದರಲ್ಲಿ 1147 ಪುಟಗಳಷ್ಟು ಹೊಯ್ಸಳರ ಬಗ್ಗೆಯೇ ಬರೆದಿದ್ದಾರೆ. ಒಂದು ಪುಸ್ತಕವನ್ನು ಬರೆಯುವಾಗ ಅವರು ಹತ್ತಾರು ವರ್ಷ ಸಂಬಂಧಪಟ್ಟ ಪುಸ್ತಕಗಳನ್ನು ತಲಸ್ಪರ್ಶಿಯಾಗಿ ಅಭ್ಯಾಸ ಮಾಡುತ್ತಾರೆ. ಐತಿಹಾಸಿಕ ಸ್ಥಳಗಳಿಗೆ ಭೇಟಿಕೊಟ್ಟು, ಅಧ್ಯಯನ ಮಾಡುತ್ತಾರೆ. ಹಿರಿಯ ವಿದ್ವಾಂಸರೊಡನೆ ವಿಚಾರ ವಿನಿಮಯ, ಪತ್ರವ್ಯವಹಾರ ನಡೆಸಿ ಸಲಹೆ ಪಡೆಯುತ್ತಾರೆ. ಅಂತಹ ಘನ




''ವರದಕ್ಷಿಣೆಯ? ಎಷ್ಟು ಬೇಕೂಂತ ಹೇಳಿ ... ಎರಡೇ ದಿನದಲ್ಲಿ ತಂದು ಕೊಡ್ತೀನಿ..''

ವಿದ್ವಾಂಸರು ಇಂದು ಕಣ್ಣ ಮುಂದಿಲ್ಲದಿದ್ದರೂ ಅವರ ಅಮೂಲ್ಯ ಸಲಹೆ-ಸಹಾಯಗಳನ್ನು ನೆನೆಯುತ್ತಾರೆ.

ಶ್ರೀ ರಾಮರಾಯರು ನಿರಂತರ ಸ್ವಾಧ್ಯಾಯಿಗಳು. ಅವರ ಪುಸ್ತಕ ಭಾಂಡಾರ ಅವರ ಜ್ಞಾನ ಭಾಂಡಾರದಂತೆ ವೈವಿಧ್ಯಮಯ. ಅವರ ಸಂಶೋಧಕ ದೃಷ್ಟಿ-ಸಾಧನೆಗಳು ಅಪೂರ್ವ. ಗಿಡಬಳ್ಳಿಗಳ ಕುರಿತೂ ಅಪಾರ ಆಸಕ್ತಿ. ತಾವೇ ನೀರುಣಿಸಿ ಕಳಕಿತ್ತು ಸೊಂಪಾಗಿ ಬೆಳೆಸಿದ ಕೈತೋಟವೆಂದರೆ ಅವರಿಗೆ ಪಂಚಪ್ರಾಣ.

ಜೊತೆಗೆ ಬಂದಿದ್ದ ನನ್ನ ಒರಿಸ್ಸಾ ಮಿತ್ರ ಶ್ರೀ ತಾರಿಣಿ ಚರಣ ಪಾಣಗ್ರಾಹಿಯ ಹಲವು ಪ್ರಶ್ನೆಗಳಿಗೆ ತಕ್ಕ ಉತ್ತರ ನೀಡಿದರು.

ಗೋಕುಲಂನಲ್ಲಿ ಮಗ ಕಟ್ಟಿಸಿರುವ ಚಿಕ್ಕ ಚೊಕ್ಕ ಮನೆಯಲ್ಲಿ, ಪ್ರಶಾಂತ ಪರಿಸರದಲ್ಲಿ ಅಷ್ಟೇ ಪ್ರಶಾಂತ ಜೀವನ ನಡೆಸುತ್ತಿರುವ ಶ್ರೀ ರಾಮರಾಯರ ಅಖಂಡ ಸಾರಸ್ವತ ತಪಸ್ಸು ಇನ್ನೂ ನಡೆದಿದೆ. ಹೀಗೆಯೇ ನಿರಂತರವಾಗಿ ನಡೆಯುತ್ತಿರಲಿ. ●




# ಗುರುಪಕ್ಷಿಧಾಮ

ಕರ್ನಾಟಕದ ಪಕ್ಷಿಧಾಮಗಳು ಎಂದಾಕ್ಷಣ ಸಾಮಾನ್ಯವಾಗಿ ಎಲ್ಲರಿಗೂ ನೆನಪಿಗೆ ಬರುವುದು ರಂಗನ ತಿಟ್ಟು. ಕೆಲವರಿಗೆ ಮಾತ್ರ ಕೊಕ್ಕರೆ ಬೆಳ್ಳೂರು ಹಾಗೂ ಮಂಡಗದ್ದೆ ಗೊತ್ತಿರಬಹುದು. ಆದರೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಗುಡವಿಯ ಪಕ್ಷಿಧಾಮ ಬಹು ಜನರಿಗೆ ಗೊತ್ತಿಲ್ಲ. ಶಿವಮೊಗ್ಗ ಜಿಲ್ಲೆಯ ಜನರಿಗೆ ಸೊರಬದ ಚಂದ್ರಗುತ್ತಿ ಗೊತ್ತು. ಆದರೆ ಅದರಿಂದ ಕೇವಲ 10-15 ಕಿಲೋಮೀಟರುಗಳ ಅಂತರದಲ್ಲಿ ಇರುವ ಗುಡವಿ ಗ್ರಾಮ ಅನೇಕರಿಗೆ ಇನ್ನೂ ಅಪರಿಚಿತ. ನಾಗರಿಕತೆಯಿಂದ ಇನ್ನೂ ದೂರವಿರುವ ಈ ಗ್ರಾಮದ ಕೆರೆ ಇಂದು ಸಾವಿರಾರು ಪಕ್ಷಿಗಳಿಗೆ ಆಶ್ರಯ ನೀಡುತ್ತಿದೆ.

ಸೊರಬದಿಂದ ವಾಯವ್ಯ ದಿಕ್ಕಿನಲ್ಲಿ ಹದಿನೈದು ಕಿಲೋಮೀಟರು ದೂರದಲ್ಲಿ, ಇನ್ನೂ ಮಲೆನಾಡಿನ ಹಸಿರನ್ನೂ ಶಾಂತಿಯನ್ನೂ ಸೊಬಗನ್ನೂ ಉಳಿಸಿಕೊಂಡಿರುವ ಪರಿಸರದ ಮಧ್ಯೆ ಈ ಗುಡವಿ ಕೆರೆ ಇದೆ. ಸೊರಬ-ಬನವಾಸಿ ಟಾರು ರಸ್ತೆಯ ಮೇಲೆ ಸುಮಾರು 8 ಕಿಲೋಮೀಟರುಗಳವರೆಗೆ ಎತ್ತರವಾಗಿ ಬೆಳೆದು ತಂಪೆರೆವ ಗಿಡಗಳ ನೆರಳಿನಲ್ಲಿ ಹೋಗಿ, ಪಶ್ಚಿಮಕ್ಕೆ ತಿರುಗಿ, ಅಲ್ಲಿಂದ ಟಾರ್ ರಸ್ತೆಯನ್ನು ದಾಟಿ, ಮಣ್ಣು ರಸ್ತೆಯ ಮೇಲೆ ಸುಮಾರು ಎಂಟು ಕಿಲೋಮೀಟರು ಕ್ರಮಿಸಿದ ಮೇಲೆ ಒಂದು ಕೆರೆ ಬರುತ್ತದೆ. ಆಗ ಹಕ್ಕಿಗಳ ಚಿಲಿ ಪಿಲಿ ಇಂಚರ ನಿಮ್ಮನ್ನು ಸ್ವಾಗತಿಸುತ್ತದೆ. ಮಾರ್ಗ ಮಧ್ಯೆ ಒಂದೆರಡು ಕಿರಿ

*ಡಾ.ಹೆಚ್.ಚಂದ್ರಶೇಖರ*

ಮೊಗದ ಕೋತಿಗಳು(Langur) ನಿಮ್ಮನ್ನು ನೋಡಿ ಗಿಡಗಳನ್ನು ಹತ್ತಿ ದೂರ ಹೋಗಬಹುದು. ಹೆದರಬೇಡಿ, ಅವು ಆಕ್ರಮಣಕಾರಿಗಳಲ್ಲ.

ಗುಡವಿಯ ಕೆರೆ ದಕ್ಷಿಣೋತ್ತರವಾಗಿ ಹಬ್ಬಿಕೊಂಡಿದೆ. ಇದರ ವಿಸ್ತೀರ್ಣ ಸುಮಾರು 80 ಎಕರೆಗಳಷ್ಟು. ಕೆರೆಯ ಮಧ್ಯೆ ಒಂದು ಒಡ್ಡು. ಈ ಒಡ್ಡಿನ ಮೇಲೆ ಬಿದರಿನ ಹಾಗೂ ಇತರ ಮರಗಳ ಮಧ್ಯೆ ನಡೆದು ಕೊಂಚ ದೂರ ಹೋದರೆ ನಿಮ್ಮ ಎಡಬಲಕ್ಕೂ ಪಕ್ಷಿ ಸಾಮ್ರಾಜ್ಯ! ಕೆರೆಗಳ ಮಧ್ಯೆ ಬೆಳೆದಿರುವ ಹೊಳಲಕ್ಕಿ ಮರ, ಬಿದಿರಿನ ಮರ ಮತ್ತಿತರ ಮುಳ್ಳಿನ ಮರಗಳ ಮೇಲೆ ಬಗೆ ಬಗೆಯ ಪಕ್ಷಿಗಳು ಗೂಡು ಕಟ್ಟಿ ಸಂಸಾರ ಹೂಡಿರುವುದನ್ನು ನೋಡಿದರೆ ಸಂತೋಷವಾಗುತ್ತದೆ. ಈ ಪಕ್ಷಿಗಳನ್ನು ಎಣಿಸುವುದು ಸುಲಭವಲ್ಲ. ನನ್ನ ಅಂದಾಜಿನ ಪ್ರಕಾರ ನಾನು ನೋಡಿದಾಗ ಸುಮಾರು 5000 ಇರಬಹುದು. ನಾನು ನಮ್ಮ ನಾಡಿನ ಇತರ ಯಾವ ಪಕ್ಷಿಧಾಮದಲ್ಲಿಯೂ ಇಷ್ಟು ಪಕ್ಷಿಗಳಿರುವುದನ್ನು ನೋಡಿಲ್ಲ. ಒಬ್ಬ ಅರಣ್ಯಾಧಿಕಾರಿಯ ಪ್ರಕಾರ ಸೆಪ್ಟೆಂಬರ ತಿಂಗಳಿನಲ್ಲಿ ಈ ಸಂಖ್ಯೆ



ಸುಮಾರು 20,000ಕ್ಕೂ ಏರಬಹುದು.

**ಸುರಕ್ಷಿತ ಶಾಂತ ಪರಿಸರ:**

ಈ ಪಕ್ಷಿಧಾಮ ಬೆಳಕಿಗೆ ಬಂದದ್ದು ಸುಮಾರು 1983ರಲ್ಲಿ. ಆದರೆ ಯಾವ ಸೌಕರ್ಯಗಳಿಲ್ಲದಿದ್ದರೂ (ಒಂದು ರೀತಿಯಿಂದ ಒಳ್ಳೆಯದು!) ಈ ಪಕ್ಷಿಧಾಮ ವನ್ಯಜೀವಿ ಪ್ರೇಮಿಗಳ ಗಮನ ಸೆಳೆದಿದೆ. ಈ ಪಕ್ಷಿಧಾಮದಲ್ಲಿ, ರಂಗನ ತಿಟ್ಟಿನಲ್ಲಿ ಕಾಣಸಿಗುವಂಥ ಮೋಜಿನ ಪ್ರವಾಸಿಗರಿಲ್ಲ. ಗದ್ದಲವಿಲ್ಲ! ಗಲಾಟೆ ಇಲ್ಲ!! ಬಾಟಲಿಗಳ ಸದ್ದಿಲ್ಲ!!, ಬರುವ ಪಕ್ಷಿ ವೀಕ್ಷಕರನ್ನು ಕಾಡುವ ಹಳ್ಳಿಗರಿಲ್ಲ. ಪಕ್ಷಿಗಳನ್ನು ಕಳ್ಳತನದಲ್ಲಿ ಹಿಡಿದು ತಿನ್ನುವ ರಾಕ್ಷಸರ ವಸತಿಯಿಲ್ಲ. ಇದೇ ಈ ಪಕ್ಷಿಧಾಮದ ಮೇಲ್ಮೆ. ಅಷ್ಟೇ ಅಲ್ಲ, ಸಾಗರ, ಸೊರಬ, ಶಿಕಾರಿಪುರ ತಾಲೂಕುಗಳಲ್ಲಿ ಇನ್ನೂ ಸಾಕಷ್ಟು ಕಾಡು ಉಳಿದಿದೆ. (ನಮ್ಮ ಪುಣ್ಯ!) ಅಲ್ಲದೆ ಈ ಮೂರು ತಾಲೂಕುಗಳಲ್ಲಿ ಹಲವಾರು ಸಣ್ಣ ಪುಟ್ಟ ಕೆರೆ ಕುಂಟೆಗಳಿವೆ.

ಈ ಮರ, ಕೆರೆಗಳ ಕ್ರಿಮಿ ಕೀಟಗಳು, ಮೀನುಗಳು ಈ ಪಕ್ಷಿ ಸಂಕುಲಕ್ಕೆ ಆಹಾರ ಒದಗಿಸಿದರೆ, ಗುಡವಿ ಕೆರೆಯ ನೀರ ಮಧ್ಯದಲ್ಲಿ ಇರುವ ಮುಳ್ಳಿನ ಮರಗಳು ಸುರಕ್ಷಿತ ವಾಸಸ್ಥಾನವನ್ನು ಒದಗಿಸಿವೆ. ಸೂಕ್ಷ್ಮ ಸಂವೇದಿಗಳಾದ ಪಕ್ಷಿಗಳು ರಂಗನತಿಟ್ಟಿನಲ್ಲಿ ಆಗುತ್ತಿರುವ ಜಲ ಮಾಲಿನ್ಯ, ಶಬ್ದ ಮಾಲಿನ್ಯಗಳಿಂದ ದೂರವಿರುವ ಈ ಸುಂದರ ಪರಿಸರವನ್ನು ಆಯ್ದುಕೊಂಡಿದ್ದು ಆಶ್ಚರ್ಯವಲ್ಲ.

**ಪಕ್ಷಿ ಪ್ರಭೇದಗಳು:**

ನಾನು ಹೋದಾಗ ಕರಿ ತಲೆಯ ಹಕ್ಕಿ(White ibis), ಬೆಳ್ಳಕ್ಕಿ (Egret),ತೆರೆದ ಕೊಕ್ಕಿನ ಕೊಕ್ಕರೆ(Open billed stork), ಕೊಳದ ಬಕ (Pond heron),ರಾತ್ರಿ ಬಕ(Night heron), ಹಾವಕ್ಕಿ (Darter),ಪುಟ್ಟ ನೀರುಡುಗೆ(Little Cormorant),ಮಿಂಚುಳಿ (King fisher), ಮರಕುಟಿಕ (Wood Pecker),ಸೂರಕ್ಕಿ (Yellow backed sun bird),ಕಪ್ಪು-ಬಿಳಿ ಸಿಪಿಲೆ ಇತ್ಯಾದಿ ಬಗೆ ಬಗೆಯ ಪಕ್ಷಿಗಳ ಹಾರಾಟ, ಅವುಗಳ ಇಂಚರದಿಂದ ಪುಳಕಿತನಾದೆ. ಈ ಕೆರೆ ಮತ್ತು ಇತರ ಸುತ್ತ ಮುತ್ತಲ ಪರಿಸರದಲ್ಲಿ ಸುಮಾರು 40 ಬಗೆಯ ಪಕ್ಷಿಗಳನ್ನು ಗುರುತಿಸಲಾಗಿದೆ. ಉಳಿದೆಲ್ಲ ಪಕ್ಷಿಗಳಿಗಿಂತ ಕರಿ ತಲೆಯ ಹಕ್ಕಿಗಳ ಸಂಖ್ಯೆಯೇ ಹೆಚ್ಚು.

ಇಲ್ಲಿ ಪಕ್ಷಿಗಳ ಫೋಟೋಗಳನ್ನು ತೆಗೆಯುವುದು ತುಂಬಾ ಕಷ್ಟ. ಚಿತ್ರಗ್ರಾಹಕರಿಗೆ ನೆಲೆ ನಿಲ್ಲಲು ಪೂರ್ವ ಪಶ್ಚಿಮವಾಗಿ ಇರುವ ಒಡ್ಡು ಮಾತ್ರ ಸಹಾಯಕ. ಈ ಒಡ್ಡಿನಿಂದ ತೀರ ಹತ್ತಿರದ ಪಕ್ಷಿ ವಾಸವಾಗಿರುವ ಗಿಡ ಸುಮಾರು 30-40 ಮೀಟರುಗಳಷ್ಟು ದೂರ. ಇದರಿಂದ ಸಾಮಾನ್ಯವಾಗಿ ಉಪಯೋಗಿಸುವ 200 ಮೀಲಿ ಮೀಟರು ಅಳತೆಯ ಲೆನ್ಸ್ ಉಪಯುಕ್ತವಾಗುವುದಿಲ್ಲ. ನಾನು 400 I.S.O. ವೇಗದ ಫಿಲ್ಮನ್ನು ಉಪಯೋಗಿಸಿ, 300 ಮಿಲಿ ಮೀಟರ್ ಜೂಮ್ ಲೆನ್ಸ್‌ಗೆ 2 - x Converter ಅನ್ನು ಉಪಯೋಗಿಸಿ ಚಿತ್ರಗಳನ್ನು ತೆಗೆದೆ. ಆದರೂ ನನಗೆ ತೃಪ್ತಿ ನೀಡುವಂಥ ಸನ್ನಿವೇಶ ಸಿಗಲಿಲ್ಲ. ಅದೂ ಅಲ್ಲದೆ ಈ ಪಕ್ಷಿಗಳು ರಂಗನತಿಟ್ಟಿನ ಪಕ್ಷಿಗಳಂತೆ ಜನರ ಓಡಾಟಕ್ಕೆ ಹೊಂದಿಕೊಂಡಿಲ್ಲ. ಪೊದೆಗಳಲ್ಲಿ ತಗ್ಗಿ, ಬಗ್ಗಿ ಕುಳಿತು ದೂರದಿಂದಲೇ ಚಿತ್ರ ಹಿಡಿಯಬೇಕು.

**ಕೆಲವು ಸೂಚನೆಗಳು**

ಸದ್ಯ ಇಲ್ಲಿ ಪ್ರವಾಸಿಗರಿಗೆ ಅಥವಾ ಪಕ್ಷಿ ವೀಕ್ಷಕರಿಗೆ ಸೌಕರ್ಯಗಳಿಲ್ಲ. ಇಲ್ಲಿ ಪ್ರವಾಸಿಗರಿಗಾಗಿ ಹಲವು ಸೌಕರ್ಯಗಳನ್ನು ಒದಗಿಸುವ ಯೋಜನೆಗಳಿವೆ ಎಂದು ತಿಳಿದು ಬಂತು. ಆದರೆ ಈ ಸೌಕರ್ಯಗಳನ್ನು ಒದಗಿಸುವಾಗ ತುಂಬಾ ಎಚ್ಚರಿಕೆ ವಹಿಸಬೇಕು. ಪರಿಸರವನ್ನು ಕದಡಿಸುವ ಅಥವಾ ಕದಡಿಕೆಗೆ

ಕಾರಣವಾಗುವ ಯಾವ ಸೌಕರ್ಯಗಳನ್ನೂ ಒದಗಿಸಬಾರದು. ಈ ತತ್ವವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಕೆಲ ಸೂಚನೆಗಳನ್ನು ಅರಣ್ಯ ಇಲಾಖೆಯ ಗಮನಕ್ಕೆ ತರಲಿಚ್ಛಿಸುತ್ತೇನೆ.

(i) ಸುಮಾರು ಒಂದು ಕಿಲೋಮೀಟರು ಸುತ್ತಳತೆಯಲ್ಲಿ ಕ್ಯಾಂಟೀನ್ ಇತ್ಯಾದಿ ಸೌಕರ್ಯಗಳನ್ನು ನಿರ್ಮಿಸಬಾರದು.

(ii) ಕಲ್ಲಂಬಿ-ಗುಡವಿ ರಸ್ತೆಯಲ್ಲಿ ಸಿಗುವ ಪಕ್ಷಿಧಾಮದ ತಿರುವಿನಿಂದ ಕೆರೆಯವರೆಗೆ ಒಳ್ಳೆಯ ಮುರಮ್ ರಸ್ತೆಯೇ ಸಾಕು. ಟಾರು ರಸ್ತೆ ಬಹುಶಃ ಪಕ್ಷಿಗಳನ್ನು ಬೆದರಿಸೀತು.

(iii) ಕೆರೆಯ ಉತ್ತರ ಮತ್ತು ಈಶಾನ್ಯ ಭಾಗದ ಪ್ರದೇಶದಲ್ಲಿ ಹೂವು ಮತ್ತು ಹಣ್ಣು ನೀಡುವ ಮತ್ತು ಹೊಳಲಕ್ಕಿ ಮರದಂಥ ಮುಳ್ಳಿನ ಮರಗಳನ್ನು ಬೆಳೆಸಬೇಕು. ನೀಲಗಿರಿಯಂಥ ಗಿಡಗಳನ್ನು ಸರ್ವಥಾ ಬೆಳೆಸಬಾರದು.

(iv) ಕೆರೆಯಲ್ಲಿ ನೀರು ಸಂಗ್ರಹವಾಗಲು ತಡವಾದರೆ ಪಕ್ಕದ ವರದಾ ನದಿಯಿಂದ ನೀರನ್ನು ಪಂಪು ಮಾಡಲು ವ್ಯವಸ್ಥೆ ಮಾಡಬೇಕು. ಇದು ತುಂಬಾ ಖರ್ಚಿನ ಕ್ರಮವಾದರೂ ಬರಗಾಲದಂಥ ಪರಿಸ್ಥಿತಿಯಲ್ಲಿ ಇದು ಅವಶ್ಯಕ.

(v) ಕೆರೆಯ ಹೂಳನ್ನು ತೆಗೆಸಿ ಆಳ ಹೆಚ್ಚಿಸಬೇಕು.

(vi) ಕೆರೆಯ ದಕ್ಷಿಣ ಭಾಗದಲ್ಲಿ ಇರುವ ಸುಮಾರು 2-3 ಎಕರೆ ಗದ್ದೆಯನ್ನು ವಶಪಡಿಸಿಕೊಂಡು ಕೆರೆಯಂಗಳವನ್ನು ವಿಸ್ತಾರಗೊಳಿಸಬೇಕು. ಇದರಿಂದ ಪಕ್ಷಿಧಾಮದ ಹತ್ತಿರ ಇರುವ ಮಾನವ ಚಟುವಟಿಕೆಗಳು ಇಲ್ಲದಂತಾಗಿ ಪೂರ್ಣ ಶಾಂತ ವಾತಾವರಣ ನಿರ್ಮಿತವಾಗುತ್ತದೆ.

(vii) ಕೆರೆಯಲ್ಲಿ ಮೀನುಗಳನ್ನು ಬೆಳೆಸಬೇಕು. ಆದರೆ ಮೀನು ಹಿಡಿಯುವುದಕ್ಕೆ ಅವಕಾಶ ನೀಡಬಾರದು.

## ಜೀವನ ಚಕ್ರ

ಇಲ್ಲಿಗೆ ಪಕ್ಷಿಗಳು ದೂರದ ಸೈಬೇರಿಯದಿಂದ ಬರುತ್ತವೆ ಎಂದು ಕೆಲವರ ನಂಬಿಕೆ. ಆದರೆ ಇದಕ್ಕೆ ವೈಜ್ಞಾನಿಕ ಆಧಾರಗಳಿಲ್ಲ. ಇವೆಲ್ಲ ನಮ್ಮ ದೇಶದ ಹಕ್ಕಿಗಳೇ; ಆದರೆ ದೂರ ದೂರದ ಪ್ರದೇಶದಿಂದ ಋತುಮಾನಕ್ಕೆ ಅನುಗುಣವಾಗಿ ಇಲ್ಲಿಗೆ ವಲಸೆ ಬರುತ್ತವೆ.

ಮೇ ಅಥವಾ ಜೂನ್ ತಿಂಗಳಲ್ಲಿ ಆರಂಭವಾಗುವ ಮಳೆಗಾಲದೊಂದಿಗೆ, ಈ ಅಪರೂಪದ ಅತಿಥಿಗಳ ಆಗಮನ. ಗುಂಪು ಗುಂಪಾಗಿ ವಲಸೆ ಬಂದು ಇಲ್ಲಿ ಗಂಡು ಹೆಣ್ಣುಗಳು ಒಂದಾಗಿ ತಾವು ನೆಲೆ ನಿಲ್ಲು ಗಿಡವನ್ನು ಆರಿಸುತ್ತವೆ. ನಲ್ಲ ನಲ್ಲೆಯರು ಕೂಡಿ ಕಡ್ಡಿಗಳನ್ನಾಯ್ದು ತಂದು ಸುಭದ್ರವಾದ ಮನೆಗಳನ್ನು ಕಟ್ಟಲು ಪ್ರಾರಂಭಿಸಿ ಜುಲೈ ಅಂತ್ಯದ ವೇಳೆಗೆ ಸಂಸಾರ ಹೂಡುತ್ತವೆ. ಗಂಡು ಹೆಣ್ಣು ಸೇರಿದಾಗ ವಂಶಾಭಿವೃದ್ಧಿ ಆರಂಭ; ಹೆಣ್ಣು ಮೊಟ್ಟೆ ಇಡುತ್ತದೆ. ಮೊಟ್ಟೆಗಳನ್ನು ಹೆಣ್ಣು ಕಾಯ್ದು, ಕಾವು ಕೊಟ್ಟರೆ ಗಂಡು ದೂರ ದೂರ ಹುಡುಕಿಕೊಂಡು ಹೋಗಿ ಆಹಾರವನ್ನು ತರುತ್ತದೆ. ಅಗಸ್ಟ ತಿಂಗಳ ವೇಳೆಗೆ ಬಹುಪಾಲು ಮರಿಗಳು ಹೊರಬಂದು ತಂದೆ ತಾಯಿಗಳಿಗೆ ಸಂತಸವನ್ನು ತರುತ್ತವೆ. ತಂದೆ ತಾಯಿಗಳು ಆಹಾರ-ನೀಡಿ, ರಕ್ಷಿಸಿ, ಹಾರುವುದನ್ನು ಕಲಿಸಿ ತಮ್ಮ ಸಂಸಾರದೊಂದಿಗೆ ನವಂಬರ್-ಡಿಸೆಂಬರ್ ವೇಳೆಗೆ ತಮ್ಮ ನಾಡಿಗೆ ಮರಳುತ್ತವೆ. ಪುನಃ ಮಳೆಗಾಲದ ಆರಂಭದೊಂದಿಗೆ ಈ ಅತಿಥಿಗಳ ಪುನರಾಗಮನ. ಮತ್ತೆ ವರ್ಷಾಂತ್ಯಕ್ಕೆ ನಿರ್ಗಮನ. ಹೀಗೆ ಈ ಜೀವನ ಚಕ್ರ ಸುತ್ತುತ್ತಾ ಇದೆ. ಮುಂದೆಯೂ ಸುತ್ತುತ್ತಾ ಇರುವುದು ಮನುಷ್ಯನ ಕೈಗಳು ಪರಿಸರವನ್ನು ನಾಶ ಮಾಡದಿದ್ದರೆ ಮಾತ್ರ.

●

# ಆಯುರ್ವೇದಕ್ಕೆ

ನನ್ನ ತಂದೆ ದಿವಂಗತ ಡಾ.ಯು.ಕೃಷ್ಣ ಮುನಿಯಾಲು ಇವರು ಆಯುರ್ವೇದದ ಹೆಸರಾಂತ ವೈದ್ಯರಾಗಿದ್ದ ಪಂಡಿತ ತಾರಾನಾಥರು ಶಿಷ್ಯ. ತಾರಾನಾಥ ಆಯುರ್ವೇದವನ್ನು ಅಭ್ಯಸಿಸಲು ಪ್ರೇರಕವಾದ ಸಂಗತಿಯ ಬಗೆಗೆ ನಮ್ಮ ತಂದೆಯವರು ನಾನು ಚಿಕ್ಕವನಿದ್ದಾಗ ಹೇಳುತ್ತಿದ್ದುದು ಚೆನ್ನಾಗಿ ನೆನಪಿದೆ. ತಾರಾನಾಥರು M.B.B.S. ಮಾಡಿ ಹೈದರಾಬಾದ್ ಮೆಡಿಕಲ್ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದರು. ಆ ಸಂದರ್ಭದಲ್ಲಿ ಗಂಭೀರ ಸ್ಥಿತಿಯಲ್ಲಿದ್ದ ಒಬ್ಬ ಕ್ಷಯರೋಗಿಯನ್ನು ಅವರಲ್ಲಿಗೆ ಚಿಕಿತ್ಸೆಗಾಗಿ ಕರೆತರಲಾಯಿತು. ಆಗಿನ್ನೂ ಸ್ಟ್ರೆಪ್ಟೊಮೈಸಿನ್ ಮೊದಲಾದ ಕ್ಷಯ ನಿವಾರಕ ಔಷಧಿಗಳನ್ನು ಕಂಡು ಹಿಡಿಯಲಾಗಿರಲಿಲ್ಲ. ತಾರಾನಾಥರು ರೋಗಿಯನ್ನು ಪರೀಕ್ಷಿಸಿದ ಮೇಲೆ ಆ ಸ್ಥಿತಿಯಲ್ಲಿ ಆ ರೋಗವನ್ನು ಗುಣಪಡಿಸಲು ಸಾಧ್ಯವಿಲ್ಲವೆಂದೂ ಪುಷ್ಟಿಕರವಾದ ಆಹಾರ ಸೇವಿಸುತ್ತಾ ಆದಷ್ಟು ದಿನದೂಡುವುದೊಂದೇ ರೋಗಿಗೆ ಉಳಿದಿರುವ ದಾರಿಯೆಂದೂ ರೋಗಿಯ ಸಂಬಂಧಿಕರಿಗೆ ಸಾಂತ್ವನ ಹೇಳಿ ಕಳಿಸಿಕೊಟ್ಟರು. ಈ ಘಟನೆ ನಡೆದ ಆರೇಳು ತಿಂಗಳ ನಂತರ ತಾರಾನಾಥರ ಬಳಿಗೆ ಒಬ್ಬ ದಷ್ಟಪುಷ್ಟ ವ್ಯಕ್ತಿ ಬಂದು ನಮಸ್ಕರಿಸುತ್ತಾ ತನ್ನ ಪರಿಚಯ ಮಾಡಿಕೊಟ್ಟ. ಡಾ. ತಾರಾನಾಥರು ಕೈ ಬಿಟ್ಟ ಕ್ಷಯ ರೋಗಿಯೇ ಅವನಾಗಿದ್ದ! ತಾನು ಹರಗೋವಿಂದನೆಂಬ ಒಬ್ಬ ಸಾಧುವಿನ ಹತ್ತಿರ ಆಯುರ್ವೇದದ ಚಿಕಿತ್ಸೆ ಪಡೆದೆನೆಂದೂ ಅದರಿಂದಾಗಿ ತಾನೀಗ ಕ್ಷಯರೋಗದಿಂದ ಗುಣಮುಖನಾಗಿದ್ದೇನೆಂದೂ ಹೇಳಿದಾಗ ಡಾ. ತಾರಾನಾಥರು ಸ್ತಂಭೀಭೂತರಾದರು. ಅಂದೇ ತಮ್ಮ ಹುದ್ದೆಗೆ ರಾಜೀನಾಮೆಯಿತ್ತು ಸ್ವತ: ವೈದ್ಯರಾದರೂ ಇಂತಹ ಅತ್ಯಮೂಲ್ಯವಾದ ಚಿಕಿತ್ಸಾಕ್ರಮವನ್ನು ಕಲಿಯದೆ ಇರುವುದು ಒಂದು ರೀತಿಯಲ್ಲಿ ಅಪರಾಧವೇ ಎಂದುಕೊಳ್ಳುತ್ತಾ ಆ ಸಾಧುವನ್ನು ಅರಸುತ್ತ ಹೊರಟರು.

ಹರಗೋವಿಂದ ಊರಹೊರಗಿನ ಮರದಡಿ ಧ್ಯಾನಾಸಕ್ತನಾಗಿರುವುದನ್ನು ತಿಳಿದುಕೊಂಡ ತಾರಾನಾಥರು ಆ ಸಾಧುವಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಆಯುರ್ವೇದ ಕಲಿಯುವ ತಮ್ಮ ಮನದಿಂಗಿತವನ್ನು ತಿಳಿಸಿದರು. ಎರಡು ಮೂರು ದಿನ ಆ ಸಾಧು ಇವರತ್ತ ಕಣ್ಣೆತ್ತಿಯೂ ನೋಡಲಿಲ್ಲ. ಕೊನೆಗೆ ವಿದ್ಯೆ ಕಲಿಯಲು ಇಷ್ಟು ಹಠವಿರುವಾತ ಆಯುರ್ವೇದ ಕಲಿಯಲು ಒಬ್ಬ ಅರ್ಹ ವಿದ್ಯಾರ್ಥಿಯೆಂದು ಅಂದುಕೊಂಡು ಅವರಿಗೆ ಮೂರು ವರ್ಷ ಪರಕಾಯ ಪ್ರವೇಶ, ಸಂಗೀತದಿಂದ ಕಾಯಿಲೆ ಗುಣಪಡಿಸುವುದೇ ಮೊದಲಾದ ಅತ್ಯಂತ ವಿಸ್ಮಯಕರ ವಿಷಯಗಳನ್ನೊಳಗೊಂಡ ಆಯುರ್ವೇದವನ್ನು ಆ ಸಂನ್ಯಾಸಿ ಕಲಿಸಿದ.

ಅನಂತರ ತಾರಾನಾಥರು ತುಂಗಭದ್ರೆಯಲ್ಲಿ ಸ್ಥಾಪಿಸಿದ ಆಯುರ್ವೇದ ಕಾಲೇಜಿನಲ್ಲಿ ನನ್ನ ತಂದೆಯವರು ಕಲಿಯಲಿಕ್ಕಿದ್ದಾಗ ಪಂಡಿತ ತಾರಾನಾಥರ ಚಿಕಿತ್ಸಾ ವಿಧಾನಗಳ ಬಗೆಗೆ ಪ್ರಚಲಿತವಿದ್ದ ಹಲವಾರು ಕತೆಗಳು ಆಶ್ಚರ್ಯಕರವಾಗಿವೆ. ಒಂದು ಸಂದರ್ಭ

# ಮುಕ್ತಿ ಯೆಂದು?

ದಲ್ಲಿ ಅಪ್ರಜ್ಞಾವಸ್ಥೆಯಲ್ಲಿದ್ದ ಒಬ್ಬ ರೋಗಿಯನ್ನು ಉಳಿಸುವ ಕೊನೆಯ ಪ್ರಯತ್ನವಾಗಿ ತಾರಾನಾಥರು ತಮ್ಮ ದೇಹವನ್ನು ಒಂದು ಕೋಣೆಯಲ್ಲಿ ಬಿಟ್ಟು ಒಂದು ವಾರದ ತನಕ ಆ ರೋಗಿಯ ಶರೀರವನ್ನು ಪ್ರವೇಶಿಸಿ ರೋಗಿ ಚೇತರಿಸಿಕೊಂಡ ನಂತರವೇ ತಮ್ಮ ದೇಹಕ್ಕೆ ಮರಳಿದರಂತೆ. ಇನ್ನೊಂದು ಸಂದರ್ಭದಲ್ಲಿ ಎಷ್ಟೋ ಸಮಯದಿಂದ ಜ್ವರದಿಂದ ಬಳಲುತ್ತಿದ್ದ ರೋಗಿಯ ಜ್ವರ ತಾರಕಕ್ಕೇರಿದಾಗ (Hyperpyrexia) ತಾರಾನಾಥರು ರೋಗಿಯ ಸುತ್ತಲಿದ್ದ ವಿದ್ಯಾರ್ಥಿಗಳನ್ನು ಮತ್ತು ರೋಗಿಯ ಸಂಬಂಧಿಕರನ್ನು ಹೊರಗೆ ಕಳಿಸಿ ಕೋಣೆಯ ಬಾಗಿಲನ್ನು ಹಾಕಿಕೊಂಡು ಯಾವುದೋ ಅಪೂರ್ವರಾಗದಲ್ಲಿ ಅತ್ಯಂತ ಮಧುರವಾಗಿ ಹಾಡತೊಡಗಿದರಂತೆ. ಜ್ವರದಿಂದ ಸ್ಮೃತಿ ತಪ್ಪುವುದರಲ್ಲಿರುವ ರೋಗಿಯ ಎದುರು ಎಲ್ಲಾ ಬಿಟ್ಟು ಹಾಡಲು ಶುರು ಮಾಡಿರುವ ತಮ್ಮ ಗುರುಗಳ ವೈಖರಿಯನ್ನು ನೋಡಿ, ಇನ್ನೂ ವಿದ್ಯಾರ್ಥಿ ಜೀವನದಲ್ಲಿದ್ದ ಅಲ್ಲಿನ ಹುಡುಗರೆಲ್ಲ ಮುಸಿ ಮುಸಿ ನಗತೊಡಗಿದರಂತೆ. ಆದರೆ ಅರ್ಧ ಗಂಟೆಯ ನಂತರ ಕೋಣೆಯ ಬಾಗಿಲು ತೆರೆದಾಗ ಅಲ್ಲಿದ್ದವರಿಗೆಲ್ಲಾ ಆಶ್ಚರ್ಯ ಕಾದಿತ್ತು. ರೋಗಿಯು ಜ್ವರ ಇಳಿದು ಸಂಪೂರ್ಣ ಬೆವೆತು ಹೋಗಿದ್ದನಂತೆ. ಆಮೇಲೆ ಮುಂದೊಮ್ಮೆ ಧ್ವನಿತರಂಗ ಸಹಾಯದಿಂದ ಉದ್ರೇಕಗೊಂಡ ಹೈಪೊಥಾಲಮಸ್‌ಅನ್ನು ಶಾಂತಗೊಳಿಸಿ ಆ ಮೂಲಕ ಜ್ವರ ಇಳಿಸುವ ಸಾಧ್ಯತೆಯ ಬಗ್ಗೆ ಪಂಡಿತ ತಾರಾನಾಥರು ವಿವರಿಸಿ ಹೇಳಿದರಂತೆ.

ಡಾ. ವಿಜಯಭಾನು ಶೆಟ್ಟಿ

ಇಂತಹ ಉದಾಹರಣೆಗಳು ಅನೇಕ. ಈ ಎಲ್ಲ ಸಂಗತಿಗಳಿಂದ ಪ್ರಭಾವಿತನಾದ ನಾನು ಪಿ.ಯೂ.ಸಿ ಮುಗಿದ ನಂತರ ಬೆಂಗಳೂರಿನ ಆಯುರ್ವೇದ ಕಾಲೇಜನ್ನು ಸೇರಿದೆ. ಆದರೆ ಪಂಡಿತ ತಾರಾನಾಥರಂತಹ ಗುರುಗಳ ಬಗ್ಗೆ ಕೇಳಿದ್ದ ನನಗೆ ಅಲ್ಲಿ ಸ್ವಲ್ಪ ನಿರಾಸೆಯಾಯಿತೆಂದೇ ಹೇಳಬೇಕು. ಅಂತೂ ಐದು ವರ್ಷ ಆಯುರ್ವೇದ ಮತ್ತು ಒಂದೂವರೆ ವರ್ಷದ ಅಲೋಪಥಿಯ ಕೋರ್ಸು ಮುಗಿಸಿದ ಮೇಲೆ ಮುಂಬಯಿಯಲ್ಲಿ ಕ್ಲಿನಿಕ್ ತೆರೆಯಲಿದ್ದ ನಾನು ಕೊನೆಯ ಕ್ಷಣದಲ್ಲಿ ವೈಯಕ್ತಿಕ ಕಾರಣಗಳಿಂದಾಗಿ ನನ್ನ ನಿರ್ಧಾರ ಬದಲಿಸಿ ಉತ್ತರ ಕನ್ನಡ ಜಿಲ್ಲೆಯ ಮಂಚೀಕೇರಿಯೆಂಬ ಹಳ್ಳಿಯಲ್ಲಿ ವೈದ್ಯವೃತ್ತಿ ಶುರು ಮಾಡಿದೆ. ಈಗ ದೈನಂದಿನ ವೃತ್ತಿ ಜೀವನದಲ್ಲಿ ಆಯುರ್ವೇದೀಯ ಔಷಧಿಗಳ ಗುಣವಿಶೇಷಗಳ ನಿಜವಾದ ಪರಿಚಯ ನನಗಾಗುತ್ತಿದೆ.

ಗಂಡಮಾಲೆ (Scrofuia)ಯಿಂದ ಬಳಲುತ್ತಿ ಗೆಯ ಸುತ್ತಲಿನ ಕೆಲವು ಗ್ರಂಥಿ ಗಳನ್ನು ಸರ್ಜನ್ನರ ಹತ್ತಿರ ತೆಗೆಸಿಕೊಂಡವಳೊಬ್ಬಳು ನನ್ನಲ್ಲಿಗೆ ಬಂದಿದ್ದಳು. ಆಗ ಕಾಂಚನಾರಾ ಗುಗ್ಗುಲ ಮೊದಲಾದವುಗಳನ್ನು ಕೊಟ್ಟ ಪರಿ

---

*★ ಲೇಖಕರು ಉತ್ತರಕನ್ನಡದ ಮಂಚೀಕೇರಿಯಲ್ಲಿ ಆಯುರ್ವೇದದ ಔಷಧಿಗಳನ್ನು ತಯಾರಿಸುವ ಕಂಪನಿಯನ್ನು ನಡೆಸುತ್ತಿದ್ದಾರೆ.*

*— ಸಂ.*

## ಆಯುರ್ವೇದಕ್ಕೆ ಮುಕ್ತಿಯೆಂದು?

ಣಾಮವಾಗಿ ಅವಳು ಗಂಡಮಾಲೆಯಿಂದ ಸಂಪೂರ್ಣವಾಗಿ ಗುಣಮುಖಳಾಗಿದ್ದಾಳೆ. ಥೈರಾಯ್ಡ್ ಗ್ರಂಥಿಯ ಊತಕ್ಕೂ ಕಾಂಚನಾರಾ ಗುಗ್ಗುಲ ಅತ್ಯಂತ ಪರಿಣಾಮಕರ. ಎದೆ ಹಾಲಿಲ್ಲವೆಂದು ಹುಟ್ಟಿದ ಮಗುವಿಗೆ ಎಂದೋ ತಯಾರಿಸಿಟ್ಟ ಡಬ್ಬದ ಹುಡಿಯ ಹಾಲನ್ನು ಕೊಡುವ ಬದಲು ಮಗುವಿನ ತಾಯಿಗೆ ಸ್ತನ್ಯ ವೃದ್ಧಿಕಾರಕಗಳಾದ ಮುಸ್ತಕ, ವಿದಾರಿ, ಕಂದಾದಿ ಚೂರ್ಣ, ಸೌಭಾಗ್ಯ ಶುಂಠಿ ಮೊದಲಾದ ಆಯುರ್ವೇದ ಔಷಧಿಗಳನ್ನು ಕೊಟ್ಟ ಒಂದು ವಾರದ ಒಳಗೆ ಎದೆ ಹಾಲು ತುಂಬಿ ಬರುವುದನ್ನು ಕಂಡಿದ್ದೇನೆ. ಗರ್ಭಕೋಶದ ತೊಂದರೆಗಳಾದ ಬಿಳಿಸೆರಗು, ಮುಟ್ಟಿನ ದೋಷಗಳಲ್ಲದೆ, ಕಾಮಾಲೆ, ಚರ್ಮರೋಗಗಳು ಆಮ-ಶಂಕೆ, ಸಂಧಿವಾತ, ಆಮವಾತ, ಕಂಪವಾತ (Parkinsonism) ಹಾಗೂ ಸಿಹಿಮೂತ್ರ ರೋಗಗಳಲ್ಲಿ ಆಯುರ್ವೇದ ಔಷಧಿಗಳು ಅತ್ಯಂತ ಪರಿಣಾಮಕರ.

ಆಯುರ್ವೇದ ಚಿಕಿತ್ಸಾಕ್ರಮದ ವೈಶಿಷ್ಟ್ಯದ ಬಗ್ಗೆ ಬೆಂಗಳೂರಿನ ಆಯುರ್ವೇದ ಕಾಲೇಜಿನಲ್ಲಿ ಉನ್ನತ ವ್ಯಾಸಂಗ ಮಾಡುತ್ತಿರುವ ಮತ್ತು ಅಲ್ಲಿ ಪ್ರಾಧ್ಯಾಪಕರಾಗಿರುವ ನನ್ನ ಕೆಲವು ಸ್ನೇಹಿತರ ಅನುಭವ ಕುತೂಹಲಕರ. ಮೂತ್ರದಲ್ಲಿ ರಕ್ತಸ್ರಾವವಾಗುತ್ತಿದ್ದ ಹದಿನಾರು ವರ್ಷದ ತರುಣಿಯೊಬ್ಬಳು ಅಲೋಪಥಿಕ್ ವೈದ್ಯ ವಿಧಾನದ ಬಹುತೇಕ ಎಲ್ಲ ಔಷಧಿಗಳನ್ನು ಮುಗಿಸಿದ್ದಳು. ಕೊನೆಗೆ ಒಬ್ಬ ಹೆಸರುವಾಸಿಯಾದ ಸ್ತ್ರೀರೋಗ ಶಾಸ್ತ್ರಜ್ಞರು ರಕ್ತಸ್ರಾವ ನಿಲ್ಲಿಸಲು ಈಕೆಯ ಗರ್ಭಕೋಶವನ್ನೇ ತೆಗೆಸುವುದು ಒಳ್ಳೆಯದೆಂದು ಸಲಹೆ ಮಾಡಿದ್ದರು. ಅದೃಷ್ಟವಶಾತ್ ಯಾರದೋ ಮಾತು ಕೇಳಿ ಬೆಂಗಳೂರಿನ ಸರಕಾರೀ ಆಯುರ್ವೇದ ಆಸ್ಪತ್ರೆಗೆ ಬಂದ ಆಕೆಗೆ ಆಯುರ್ವೇದದಲ್ಲಿ ಸಾಮಾನ್ಯವಾಗಿ ರಕ್ತಸ್ರಾವಕ್ಕೆ ಉಪಯೋಗಿಸುವ ವಾಸಾಸ್ವರಸದಂತಹ ಔಷಧಿಗಳನ್ನು ಕೊಟ್ಟ ಮರುದಿನವೇ ರಕ್ತಸ್ರಾವ ನಿಂತಿತಂತೆ. ವಿನಾಕಾರಣ ಗರ್ಭಕೋಶವನ್ನೇ ಕಳೆದುಕೊಂಡು ತನ್ನ ಮುಂದಿನ ವೈವಾಹಿಕ ಜೀವನವನ್ನೇ ವ್ಯರ್ಥ ಮಾಡಿ-ಕೊಳ್ಳುವುದರಲ್ಲಿದ್ದ ಈ ಕನ್ಯೆ ಆಯುರ್ವೇದದ ಒಂದು ಸಾಮಾನ್ಯ ಔಷಧಿಯಿಂದ ಗುಣ ಹೊಂದಿದ್ದಳು.

ಮಲಮೂತ್ರ ವಿಸರ್ಜನೆಯಲ್ಲಿ ಹಿಡಿತವೇ ತಪ್ಪಿದ್ದ ಇನ್ನೊಬ್ಬ ಹೆಂಗಸಿನ ವೃತ್ತಾಂತ ಇನ್ನೂ ಕುತೂಹಲಕರ. ಈಕೆಯ ಮೂತ್ರ ದ್ವಾರ ಮತ್ತು ಮಲದ್ವಾರದ ಮಾಂಸ ಪೇಶಿಗಳೆಲ್ಲ 'ಕೃಶ'ವಾಗಿ ಆ ಭಾಗ ದೊಡ್ಡ ಕ್ಯಾವಿಟಿ (cavity)ಯ ತರಹ ಕಾಣುತ್ತಿತ್ತಂತೆ. ಈಕೆಯೂ ಎಲ್ಲೂ ಗುಣಕಾಣದೆ ಕೊನೆಯ ಪ್ರಯತ್ನವೆಂಬಂತೆ ಯಾರೋ ಸಂಬಂಧಿಕರ ಮಾತು ಕೇಳಿ ಬೆಂಗಳೂರಿನ ಆಯುರ್ವೇದ ಆಸ್ಪತ್ರೆಗೆ ಬಂದಿದ್ದಳು. ಜ್ಯಾತ್ಯಾದಿ ತೈಲದ ಪೌಲ್ಟೀಸ್, ಭಲ್ಲಾತಕ ಮೊದಲಾದವುಗಳ ಉಪಚಾರದಿಂದ ಕೆಲವೇ ಸಮಯದಲ್ಲಿ ಈಕೆ ಸಂಪೂರ್ಣ ಗುಣಹೊಂದಿದಳು. ಆಯುರ್ವೇದ ಚಿಕಿತ್ಸಾಕ್ರಮದ ವೈಶಿಷ್ಟ್ಯವನ್ನು ಸಾರುವ ಇಂತಹ ಉದಾಹರಣೆಗಳು ಅಸಂ-ಖ್ಯಾತ. ಆದರೆ ಅತ್ಯಂತ ಬೇಸರದ ಸಂಗತಿಯೆಂದರೆ, ಇಷ್ಟೆಲ್ಲ ಇದ್ದೂ ಅಲೋಪಥಿ ವೈದ್ಯರಾಗಲಿ, ವಿಶೇಷಜ್ಞರಾಗಲಿ ತಮ್ಮಿಂದ ಗುಣಪಡಿಸಲಾಗದ ರೋಗಿಗಳನ್ನು ಹಿಂದೆ ಕಳಿಸುವಾಗ, "ಆಯುರ್ವೇದವೆಂಬ ಚಿಕಿತ್ಸಾ ಕ್ರಮವೊಂದಿದೆ; ಒಮ್ಮೆ ಅದನ್ನು ಪ್ರಯತ್ನಿಸಿ ನೋಡಿ," ಎಂದು ರೋಗಿಗಳಿಗೆ ಉಚಿತ ಸಲಹೆ ಕೊಡಲು ಹಿಂಜರಿಯುವುದು. ಭಾರ

ತೀಯ ವೈದ್ಯಪದ್ಧತಿಯ ಬಗೆಗೆ ಭಾರತೀಯರೇ ಆದ ಇವರಿಗೆಲ್ಲ ಏಕಿಷ್ಟು ಅಸಡ್ಡೆ?

ಇತ್ತೀಚೆಗೆ ಬೆಂಗಳೂರಿನಿಂದ ಅಮೇರಿಕಕ್ಕೆ ಹೊರಡುತ್ತಿದ್ದ ಸುಪ್ರಸಿದ್ಧ ಸಂತರೊಬ್ಬರು ಬೆಂಗಳೂರಿನ ಪುಸ್ತಕ ಭಂಡಾರವೊಂದರಲ್ಲಿ ಆಯುರ್ವೇದದ ಎಲ್ಲಾ ಮೂಲ ಗ್ರಂಥಗಳನ್ನು ದೊಡ್ಡ ಪ್ರಮಾಣದಲ್ಲಿ ಖರೀದಿಸುತ್ತಿದ್ದುದನ್ನು ನೋಡಿದಾಗ ನಮ್ಮ ಈ ಅಮೂಲ್ಯ ವಿದ್ಯೆ ಅಮೆರಿಕಕ್ಕೆ ರವಾನೆಯಾಗುತ್ತಿದೆಯೆ? ಎನ್ನಿಸಿತು. ಪಶ್ಚಿಮ ದೇಶಗಳಲ್ಲಿ ಆಯುರ್ವೇದದ ಪುನರುತ್ಥಾನವಾಗುತ್ತಿರುವ ಈ ಸಂದರ್ಭದಲ್ಲಿ ಆಯುರ್ವೇದಕ್ಕೆ ಜನ್ಮಕೊಟ್ಟ ಈ ದೇಶದಲ್ಲಿ ಯಾವ ಆದರ, ಗೌರವಗಳೂ ಇಲ್ಲ. ಆಯುರ್ವೇದಕ್ಕೆ ಹಿಡಿದ ಈ ಗ್ರಹಣಕ್ಕೆ ಮುಕ್ತಿಯೆಂದು? ಆಯುರ್ವೇದ ಕಲಿಯಲು ಬಯಸುವ ವಿದ್ಯಾರ್ಥಿಗಳಿಗೆ ತಾರಾನಾಥರಂತಹ ಗುರುಗಳು ಲಭಿಸುವುದು ಯಾವಾಗ?

★

## ಚೆನ್ನ ನೀ ಬರುವಿಯೆಂದು

ನೀ ಬರುವಿಯೆಂದು ಚೆನ್ನ,
ನನ್ನೆದೆಯ ಒಳಹೊರಗು ಸಿಂಗರಿಸಿ ಇಟ್ಟಿದ್ದೆ
ಎವೆಯ ಚಾಮರ ಬೀಸಿ,
ನೀ ಬರುವ ಹಾದಿಯಲಿ
ಕಣ್ಣ ದೀಪವ ಬೆಳಗಿ ಬೆಳಕ ಚೆಲ್ಲಿದ್ದೆ.
ಒಲವ ಮಾವಿನ ತಳಿರು, ಪ್ರೀತಿ ಬಾಳೆಯ ಕಂಬ
ಭಾವಗಳ ಹೂಮಾಲೆ ಹೆಣೆದಿದ್ದೆ.
ತುಟಿಯ ಜೇನಿನ ಸಿಹಿಗೆ ಮುಗುಳು ನಗೆ ಬೆರೆಸಿದ್ದೆ
ಹೃದಯ ವೀಣೆಯ ತಂತಿ ಮೀಟಿ ಶ್ರುತಿಗೊಳಿಸಿ
ಮಧುರ ಬಾಳಿನ ಗೀತೆ ಹಾಡಬಯಸಿದ್ದೆ
ನಿನ್ನುಸಿರ ಗಾನಕ್ಕೆ ನವರಸಗಳಳವಡಿಸಿ
ಬಾಳರಸಗಡಲಲ್ಲಿ ಮುಳುಗಬಯಸಿದ್ದೆ.
ನಿನ್ನ ಬರವನು ಕಾದು ಬೆಳಕ ನೀಗಿತು ಕಣ್ಣು
ಬಳಲಿ ಸೊರಗಿದವೆವೆಯ ಚಾಮರಗಳು
ತಳಿರು-ತೋರಣ ಬಯಕೆ ಹೂವುಗಳು ಬಾಡಿದವು.
ಅಳಿದು ಹೋಯಿತು ಮತ್ತೆ ಎಲ್ಲ ಸಂಭ್ರಮದ ಸಿರಿ
ಉಳಿಯಿತೊಂದೇ ಕರುಣ ರಸದ ಗೀತೆ
ನಾನೀಗ ನನ್ನೊಳಗೆ ನಿತ್ಯ ಭಯ
ಭೀತೆ.

**ಸುಮಿತ್ರಾ ಹಲವಾಯಿ**

# ಇದುವೇ ಜೀವ ಇದು ಜೀವನ

ಈಗ 8-10 ವರ್ಷಗಳ ಹಿಂದಿನ ಸಂಗತಿ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಆಗ ನಾವು ಗದುಗಿನಲ್ಲಿದ್ದೆವು. ದಿನಾಲು ಬೆಳಿಗ್ಗೆ ಒಬ್ಬ ಬಡ ವೃದ್ಧೆ ಭಿಕ್ಷೆಗೆ ಬರುತ್ತಿದ್ದಳು. ಮಕ್ಕಳಿಗೆ ಮೋಜಿನ ಹಾಡು ಹೇಳಿ ನಗಿಸುತ್ತಿದ್ದ ಅವಳನ್ನು ಕಂಡರೆ ನಮಗೆಲ್ಲ ತುಂಬಾ ಪ್ರೀತಿ. ಅವಳ ಒಬ್ಬನೇ ಮಗ ತೀರಿಕೊಂಡಿದ್ದ. ಸೊಸೆ ಮತ್ತು ನಾಲ್ಕು ಜನ ಮೊಮ್ಮಕ್ಕಳ ಸಲುವಾಗಿ ಈ ವೃದ್ಧೆ ಮಳೆ ಬಿಸಿಲೆನ್ನದೇ ಭಿಕ್ಷೆ ಬೇಡಿ, ಕರಿಮಣಿ, ಸೂಜಿ ಇತ್ಯಾದಿ ಮಾರಿ ಜೀವನ ಸಾಗಿಸುತ್ತಿದ್ದಳು. ಅವಳ ಸೊಸೆ ರೋಗಿಯಾಗಿದ್ದರಿಂದ ಎಲ್ಲರನ್ನು ಸಾಕುವ ಭಾರ ಇವಳ ಮೇಲೆಯೇ ಇತ್ತು. ಅವಳು ಭಿಕ್ಷೆಗೆ ಬಂದ ಕೂಡಲೇ ಮನೆ ಮಾಲಿಕರು ಬಯ್ದು ಓಡಿಸುತ್ತಿದ್ದರು. ನಾನು ಕರೆದು ಉಳಿದ ಆಹಾರವನ್ನು ನೀಡುತ್ತಿದ್ದೆ. ಏನೂ ಉಳಿದಿರದಿದ್ದರೆ ಬಿಸಿ ಅನ್ನವನ್ನೇ ನೀಡುತ್ತಿದೆ.

ಹೀಗಿರುವಾಗ ನಮಗೆ ಬೆಂಗಳೂರಿಗೆ ವರ್ಗವಾಯಿತು. ಅದನ್ನು ಅವಳಿಗೆ ಹೇಳಿದಾಗ ಅವಳಿಗೆ ತುಂಬಾ ದುಃಖವಾಯಿತು. "ನಿಮ್ಮ ನೆನಪಿಗಾಗಿ ಒಂದು ಸೀರೆ ಕೊಡಿ." ಎಂದಳು. ನಾನು ಮರುಮಾತಿಲ್ಲದೆ ಕೊಟ್ಟೆ. ಆಕೆ ನಾವು ಊರಿಗೆ ಹೊರಡುವ ದಿನ ಬೆಳಿಗ್ಗೆ ಬಂದು, "ಅವ್ವಾ, ನಿಮ್ಮನ್ನೆಂದೂ ಮರೆಯುವುದಿಲ್ಲ. ಇನ್ನು ನನಗಾರು;ಬಿಸಿ ಅನ್ನ ನೀಡುತ್ತಾರೆ? ನಿಮಗೆ ನಿಮ್ಮ ಮಕ್ಕಳಿಗೆ ದೇವರು ಒಳ್ಳೆಯದು ಮಾಡಲಿ ನನ್ನ ನೆನಪಿಗೆ ಈ ಸೂಜಿಗಳನ್ನು ತಂದಿರುವೆ. ತೆಗೆದುಕೊಳ್ಳಿ," ಎಂದಾಗ ಇಬ್ಬರ ಕಣ್ಣಲ್ಲೂ ನೀರು!

ಈಗಲೂ ಸೂಜಿ ನೋಡಿದಾಗಲೆಲ್ಲ ಆ ಕೃತಜ್ಞತೆಯ ಕಣ್ಣೀರು ತುಂಬಿದ ಮುಖ ನೆನಪಿಗೆ ಬಂದು ಹೃದಯ ದ್ರವಿಸುತ್ತದೆ.

*ಸರೋಜಾ ಸುಂಕದ*

ಆಗ ತಾನೇ ಉಪನ್ಯಾಸಕನಾಗಿ, ಆದರ್ಶದ ಅಮಲು ನೆತ್ತಿಗೇರಿದ್ದ ದಿನಗಳು ಗಂಗೋತ್ರಿಯ ಅಂಚೆಕಚೇರಿಯಲ್ಲಿ ಪತ್ರ ಖರೀದಿಸುತ್ತಿದೆ. ಒಬ್ಬ ಕುರುಡು ವ್ಯಕ್ತಿ ಪತ್ರಗಳನ್ನು ಖರೀದಿಸಲು ತಡಕಾಡುತ್ತಿದ್ದ. ನಾನು ಸಹಾಯ ಮಾಡಿದೆ. ಆತನ ಬಗ್ಗೆ ವಿಚಾರಿಸಲಾಗಿ ತಾನು ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವುದಾಗಿಯೆಂದು ತುರ್ತಾಗಿ ಫೋಟೋ ತೆಗೆಯಿಸಬೇಕಾಗಿದೆ. ಎಂದು ಫೋಟೋ ಸ್ಟುಡಿಯೋ ಎಲ್ಲಿದೆಯೆಂದು ವಿಚಾರಿಸಿ, ಸ್ವಲ್ಪ ಕರೆದುಕೊಂಡು ಹೋಗುವಿರಾ? ಎಂದು ಕೇಳಿದ. ನನಗೆ ಇಲ್ಲವೆನ್ನಲಾಗಲಿಲ್ಲ. ಬಸ್ಸಿನಲ್ಲಿ ಒಂಟಿಕೊಪ್ಪಲಿಗೆ ಕರೆದುಕೊಂಡು ಹೋದೆ. ಇಬ್ಬರಿಗೂ ಬಸ್ಸು ಟಿಕೇಟನ್ನು ನಾನೇ ಖರೀದಿಸಿದೆ. ಕೈಹಿಡಿದು ರಸ್ತೆಯಲ್ಲಿ ನಡೆದು ಸ್ಟುಡಿಯೋದ ಹತ್ತಿರ ಕರೆದುಕೊಂಡು ಹೋದೆ. ಅದರ ಬಾಗಿಲು ಹಾಕಿತ್ತು. ಇನ್ನೇನು ಮಾಡುವುದು? ಧನ್ವಂತರಿ ರಸ್ತೆಗೆಹೋಗಬೇಕು, ಬಸ್‌ಸ್ಟಾಪು ಸ್ವಲ್ಪದೂರವಿದೆ. ಸರಿ ಆಟೋ ರಿಕ್ಷಾ ಹಿಡಿದು ಹೊರಟೆವು ಆಟೋ ಚಾರ್ಜನ್ನೂ ನಾನೇ

ಕೊಟ್ಟೆ. ಧನ್ವಂತರಿ ರಸ್ತೆಯಲ್ಲಿ ಮತ್ತೆ ಆತನ ಕೈಹಿಡಿದು ಸ್ಟುಡಿಯೋಗಳಿಗೆ ಅಲೆದದ್ದಾಯಿತು. ದುಡ್ಡು ಎಷ್ಟಾಗುತ್ತದೆ. ಯಾವಾಗ ಕೊಡುತ್ತೀರಿ? ಎಂದು ವಿಚಾರಿಸಿದನೇ ಹೊರತು ಎಲ್ಲಿಯೂ ಫೋಟೋ ತೆಗೆಯಿಸಲಿಲ್ಲ. ತಾನು ಬೆಂಗಳೂರಿಗೇ ಹೋಗಿ ತೆಗೆಸುತ್ತೇನೆ, ತನ್ನನ್ನು ಬಸ್ಸು ನಿಲ್ದಾಣಕ್ಕೆ ತಲುಪಿಸಬೇಕೆಂದು ಕೇಳಿಕೊಂಡ. ಅಷ್ಟೇ ಅಲ್ಲದೇ, ಮನೆಗೆ ಸೋಂಪು ಪುಡಿ ತೆಗೆದುಕೊಳ್ಳಬೇಕಾಗಿದೆ ಸ್ವೀಟ್ ಅಂಗಡಿ ತೋರಿಸಿ ಎಂದು ಸರಿ ಅದನ್ನೂ ಮಾಡಿದೆ. ಆಮೇಲೆ ರಿಕ್ಷಾ ಹಿಡಿದು ಬಸ್ಸು ನಿಲ್ದಾಣಕ್ಕೆ ತಲುಪಿದೆ. ಮತ್ತೆ ರಿಕ್ಷಾ ಚಾರ್ಜನ್ನು ನಾನೇ ಕೊಟ್ಟೆ. "ತುಂಬಾ ಉಪಕಾರ ಆಯ್ತು ಸಾರ್," ಎಂದು ಆತ ಹೋದ, ನನ್ನ ಜೇಬಿನಲ್ಲಿ ಕೇವಲ ನಾಲ್ಕಾಣೆ ಉಳಿದಿತ್ತು. ಮಧ್ಯಾಹ್ನ ಊಟಕ್ಕೆ ಮತ್ತು ಬಸ್ಸಿಗೆ ಎಂದು ಇಟ್ಟುಕೊಂಡಿದ್ದ ದುಡ್ಡು ನನ್ನ ಅವಿವೇಕತನಕ್ಕೆ ವ್ಯಯವಾಗಿತ್ತು. ಇನ್ನೂ ಸಂಬಳವನ್ನೇ ಸರಿಯಾಗಿ ಪಡೆಯದಿದ್ದ ಆ ದಿನದಲ್ಲಿ ಇದ್ದ ಹಣವನ್ನು ದಡ್ಡತನದಿಂದ ಕಳೆದುಕೊಂಡು ಹಸಿದ ಹೊಟ್ಟೆಯಲ್ಲಿಯೇ ನಡೆದುಕೊಂಡು ಅಣ್ಣನ ಮನೆಗೆ ಹೋದೆ.

ಈಗ, ಇಷ್ಟು ವರ್ಷಗಳ ನಂತರ ಯೋಚಿಸಿದರೆ, ಶೋಷಣೆಯ ಹಲವು ಪದರಗಳು ಗೋಚರಿಸುತ್ತವೆ. ಹಾಗೆಯೇ ಅದಕ್ಕೆ ನಮ್ಮ ಹೆಡ್ಡತನವೂ ಒಂದು ಕಾರಣವಲ್ಲವೇ? ಅನ್ನಿಸುತ್ತದೆ.

*ಭದ್ರಪ್ಪ. ಶಿ. ಹೆನ್ಲಿ*

ನನ್ನ ಬಾಲ್ಯದಲ್ಲಿ ನಡೆದ ಘಟನೆಯಿದು. ನಾನು ನನ್ನ ಅಕ್ಕನ ಮನೆಗೆ ಹೋಗಿದ್ದೆ. ಆಗ ಒಂದು ದಿನ ಸಂಜೆ ಇಬ್ಬರೇ ತೋಟ ನೋಡಲು ಹೋದೆವು. ತೋಟದ ವಾತಾವರಣ ತುಂಬ ಉಲ್ಲಾಸಮಯವಾಗಿತ್ತು. ಎತ್ತಲೋ ನೋಡುತ್ತಿದ್ದ ನನ್ನ ಗಮನ ಅಕಸ್ಮಾತ್ ಅಕ್ಕನ ಕಡೆಗೆ ಹೋಯಿತು. ಯಾವುದೋ ಹಾಡನ್ನು ಗುಣಗುಣಿಸುತ್ತ, ತಾನು ಎಲ್ಲಿ ಸಾಗುತ್ತಿದ್ದೇನೆ ಎಂಬುದರತ್ತ ಸ್ವಲ್ಪವೂ ಗಮನ ಇಲ್ಲದೆ ಅವಳು ತೋಟದ ಬಾವಿಯ ತೀರ , ತೀರ ಅಂಚಿನಲ್ಲಿ ಬಂದಿದ್ದಳು! ಒಂದು ಇಂಚು ಸರಿದರೂ ಬಾವಿಯಲ್ಲೇ! ನಾನು, "ಪ್ರಭಾ, ಮುಂದೆ ಹೋಗಬೇಡ. ಅಲ್ಲಿಯೇ ನಿಲ್ಲು," ಎಂದು ಕಿರುಚಿದೆ. ಆಗ ಅವಳಿಗೆ ತಾನು ಎಂಥ ಕುತ್ತಿನಿಂದ ಪಾರಾದೆ, ಎಂದು ಅರಿವಾಯಿತು. ಇದೆಲ್ಲಾ ಒಂದು ನಿಮಿಷದಲ್ಲಿ ನಡೆದಿತ್ತು. ಅವಳು ನನಗೆ ಧನ್ಯವಾದ ಹೇಳಿದ್ದೇ ಹೇಳಿದ್ದು.

ಮುಂದೆ ಪ್ರಭಾ ಮೆನಿಂಜೈಟಿಸ್ ಕಾಯಿಲೆಗೆ ಈಡಾದಳು. ಎಂಥ ಉತ್ತಮ ವೈದ್ಯಕೀಯ ಉಪಚಾರಕ್ಕೂ ಗುಣವಾಗದೇ ಅವಳು ನಮ್ಮನ್ನು ಅಗಲಿದಾಗ ನನಗೆ ಅನಿಸಿದ್ದು-

ಹದಿನೈದು ವರ್ಷಗಳ ಹಿಂದೆ ಯಾವ ಶಕ್ತಿ ಅವಳನ್ನು ಹಾಗೆ ಪಾರು ಮಾಡಿತು? ನಂತರ ಈಗ ಯಾವುದು, ಏಕೆ, ಅವಳನ್ನು ನಮ್ಮಿಂದ ಅಗಲಿಸಿತು? ದೈವದಾಟ ನಿಜಕ್ಕೂ ವಿಚಿತ್ರ.

*ಪರಿಮಳಾ ಗಲಗಲಿ*

ಮರಾಠಿ ಕಥೆ

# ಅನುಮತಿ

ಮೂಲ: ವಿ.ವಾ.ಶಿರವಾಡಕರ ಕನ್ನಡಕ್ಕೆ: ಶ್ಯಾಮಸುಂದರ ದೇಶಪಾಂಡೆ

ಮಾನನೀಯ
ಶ್ರೀ ಖಂಡೇರಾವ್ ಬಾರಾಟಕ್ಕೆ ಸಾಹೇಬರು,
ಆರ್. ಡಿ. ಸಿ. ಇವರಿಗೆ -
ಮಾನ್ಯರೆ,

ನಾನು, ಅರ್ಜಿದಾರ ಬಿಪಿನಚಂದ್ರ ಅಂಬಾದಾಸ ಬೋಸೇಕರ, ಈ ಅರ್ಜಿಯ ಮೂಲಕ ಕೇಳಿಕೊಳ್ಳುವುದೇನೆಂದರೆ-

ನಾನು ತಮ್ಮ ಅಧಿಕಾರ ಕಕ್ಷೆಯಲ್ಲಿ ಬರುವ ರೆವೆನ್ಯೂ ಕಚೇರಿಯಲ್ಲಿ ಟೈಪಿಸ್ಟ್ ಎಂದು ನೌಕರಿ ಮಾಡುತ್ತಿದ್ದೇನೆ. (ಒಂದೆರಡು ಬಾರಿ ಫೈಲುಗಳನ್ನು ತೆಗೆದುಕೊಂಡು ನಾನು ತಮ್ಮ ಬಳಿ ಬಂದಿದ್ದೆ. ಬಹುಶಃ ಅದು ತಮಗೆ ನೆನಪಿರಲಿಕ್ಕಿಲ್ಲ) ನಾನು ನಾಲ್ಕೈದು ದಿನಗಳ ಹಿಂದೆಯಷ್ಟೆ ಒಂದು ಕವಿತೆಯನ್ನು ಬರೆದಿದ್ದೆ. ಅದನ್ನು 'ಕಾವ್ಯಕುಂಜ' ಎಂಬ ಮಾಸಿಕವು ಪ್ರಕಟಿಸಿರುವ ಸ್ಪರ್ಧೆಗಾಗಿ ಅರ್ಥಾತ್ ಪ್ರಕಟನೆಗಾಗಿ ಕಳುಹಿಸುವ ಯೋಚನೆ ಇದೆ. ಸರಕಾರಿ ನಿಯಮಾನುಸಾರ (ಜಿ.ಸಿ.ಇ.6/2ಎ) ಖಾತೆಯ ವರಿಷ್ಠರಾದ ತಮ್ಮಿಂದ ಕವಿತೆಯ ಪ್ರಕಟನೆಗಾಗಿ ಅನುಮತಿ ಪಡೆಯುವುದು ಅವಶ್ಯವಾಗಿದೆ. ಕವಿತೆಯ ಪ್ರತಿಯನ್ನು ಲಗತ್ತಿಸಿದ್ದೇನೆ. ಸರಕಾರದ ಸ್ಥೈರ್ಯಕ್ಕೆ ಧಕ್ಕೆ ತರುವ ಅಥವಾ ದೇಶದ ಹಿತಕ್ಕೆ ಬಾಧೆ ತರುವ ಯಾವ ವಿಷಯವೂ ಕವಿತೆಯಲ್ಲಿಲ್ಲ ಎಂಬ ವಿಷಯವು, ತಮ್ಮಂತಹ ಚತುರ ಹಾಗೂ ದಕ್ಷ ಅಧಿಕಾರಿಗಳ ಗಮನಕ್ಕೆ ಸಹಜವಾಗಿ ಬಂದೀತು. ತಾವು ಕವಿತೆಯನ್ನು ಪೂರ್ತಿಯಾಗಿ ಓದಬಹುದು ಅಥವಾ ಓದಲೇಬೇಕೆಂಬ ಅಪೇಕ್ಷೆಯೂ ಇಲ್ಲ. ಇದು ಕೇವಲ ಔಪಚಾರಿಕ. ಆದರೆ ನಾನು ಅದನ್ನು ಪಾಲಿಸುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ. ಅಂತೆಯೇ ಕವಿತೆಯ ಪ್ರಕಟನೆಗಾಗಿ ಅನುಮತಿಯನ್ನು ಶೀಘ್ರವಾಗಿ ಕಳುಹಿಸಬೇಕಾಗಿ ನಮ್ರ ವಿನಂತಿ.

ಇಂತಿ ತಮ್ಮ ಸೇವಕ,
ಬಿ.ಎ. ಬೋಸೇಕರ

★

ಶ್ರೀ ಬಿ.ಎ.ಬೋಸೇಕರ,
ಟೈಪಿಸ್ಟ್, ರೆವೆನ್ಯೂ ಕಚೇರಿ,
ಇವರಿಗೆ -

ತಮ್ಮ ಅರ್ಜಿ ತಲುಪಿತು. ಜೊತೆಗೆ ಲಗತ್ತಿಸಿದ ಕವಿತೆಯೂ ತಲುಪಿದೆ. ಯಾವುದೇ ಸರಕಾರಿ ನಿಯಮವು ಕೇವಲ ಔಪಚಾರಿಕ ಎಂಬುದಾಗಿ ನಾನು ಭಾವಿಸುವುದಿಲ್ಲ (ಇತರರಂತೆ). ಅಂತೆಯೇ ಪ್ರಕಟನೆಗಾಗಿ ಅನುಮತಿ ಕೇಳು

ವುದು ನಿಮ್ಮ ಮತ್ತು ಲೇಖನವನ್ನು ಓದಿ ನಿರ್ಣಯ ತಿಳಿಸುವುದು ನನ್ನ ಕರ್ತವ್ಯವಾಗಿದೆ. ನಿನ್ನೆ 'ನಶಾಬಂದಿ' ದಿನಾಚರಣೆ ನಿಮಿತ್ತವಾಗಿ ನಿಮ್ಮ ಕವಿತೆಯನ್ನು ಓದುವುದು ಸಾಧ್ಯವಾಗಲಿಲ್ಲ. ಆದರೆ ರಾತ್ರಿ ಕವಿತೆಯ ಮೇಲೆ ಕಣ್ಣಾಡಿಸಿದೆ. ಕವಿತೆಯ ಶೀರ್ಷಿಕೆ 'ಪ್ರಥಮ ಚುಂಬನ' ಎಂದು ಇದೆ. ಅದನ್ನು ಓದಿ ನಾನು ಆಶ್ಚರ್ಯಚಕಿತನಾದೆ. ಪದ್ಯವು ಸಾಕಷ್ಟು ದೀರ್ಘವಾಗಿರುವುದರಿಂದ ಅವಕಾಶ ಮಾಡಿಕೊಂಡೇ ಓದಬೇಕಾಗಿದೆ. ನಾನು ಸಾಲುಗಳನ್ನು ಲೆಕ್ಕ ಹಾಕಿದೆ. ಒಟ್ಟು ಒಂದು ನೂರ ಎಂಟು ಸಾಲುಗಳಿವೆ. 'ಪ್ರಥಮ ಚುಂಬನ' ಯಾರದೇ ಆದರೂ ಅದು ಇಷ್ಟೊಂದು ದೀರ್ಘವಾಗಿರಬಹುದೆಂಬುದನ್ನು ಒಪ್ಪುವುದು ಕಷ್ಟ. ನಾನು ಅತಿ ಶ್ರದ್ಧೆ ಇಟ್ಟಿರುವ ಏಕಮಾತ್ರ ಕವಿಗಳೆಂದರೆ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳು. ''ಗ್ರಂಥವನ್ನು ಪೂರ್ತಿಯಾಗಿ ಓದದೇ ಟೀಕಿಸುವವರೆಂದರೆ ಮೂರ್ಖರು,'' ಎಂದು ಸ್ವಾಮೀಜಿ ಹೇಳಿದ್ದಾರೆ. ಆ ಮೂರ್ಖತನವನ್ನು ನಾನು ಮಾಡಲಿಚ್ಛಿಸುವುದಿಲ್ಲ. ಅಂತೆಯೇ ಕವಿತೆಯನ್ನು ಪೂರ್ತಿಯಾಗಿ ಇಂದು ರಾತ್ರಿ ಅಥವಾ ನಾಳೆ ಬೆಳಿಗ್ಗೆ ಓದಿ ನನ್ನ ನಿರ್ಣಯವನ್ನು ತಿಳಿಸುವೆ. ಅಲ್ಲಿಯವರೆಗೆ ಕವಿತೆಯನ್ನು ಪ್ರಕಟನೆಗಾಗಿ ಕಳುಹಿಸಬೇಡಿ.

ಖಂಡೇರಾವ್ ಬಾರಾಟಕ್ಕೆ
ಆರ್. ಡಿ. ಸಿ.



(ತಾ.ಕ: ಕವಿತೆಯ ಅಡಿಯಲ್ಲಿ ತಾವು 'ಅಸೀಮ' ಎಂದು ಬರೆದಿದ್ದೀರಾ. ಅಧರ ಅರ್ಥ ವೇನು? ಕವಿತೆಯ ವಿಷಯಕ್ಕೆ ಅದರ ಸಂಬಂಧವೇನಾದರೂ ಇದೆಯೇ? ಅಥವಾ ಅದು ಕಾವ್ಯನಾಮವೋ? ಇದರ ಬಗ್ಗೆ ಸ್ಪಷ್ಟೀಕರಣ ಅವಶ್ಯ. 'ಅಸೀಮ'ದ ನಿಶ್ಚಿತ ಅರ್ಥವೇನು? ಅದನ್ನೂ ತಿಳಿಸಿ. -ಖಂ.ಬಾ.)



ಮಾನ್ಯಶ್ರೀ ಖಂಡೇರಾವ್ ಬಾರಾಟಕ್ಕೆ ಸಾಹೇಬರಿಗೆ,

ಸಾದರ ಪ್ರಣಾಮಗಳು.

ದಯಾಳುಗಳಾದ ತಾವು ನನ್ನ ಅರ್ಜಿಗೆ ತ್ವರಿತವಾಗಿ ಉತ್ತರ ಕಳುಹಿಸಿದ್ದಕ್ಕೆ ನಾನು ಅತ್ಯಂತ ಋಣಿಯಾಗಿದ್ದೇನೆ. 'ಕಾವ್ಯಕುಂಜ'ವು 15ನೇ ತಾರೀಖಿನವರೆಗೆ ಕವಿತೆಗಳನ್ನು ಕಳುಹಿಸಲು ಕೇಳಿಕೊಂಡಿದೆ. ಅಂದರೆ ಬರುವ ನಾಲ್ಕೈದು ದಿನಗಳ ಅವಧಿಯಲ್ಲಿ ಅದನ್ನು ಕಳುಹಿಸುವುದು ಅವಶ್ಯ. ಅಷ್ಟರಲ್ಲಿ ತಮ್ಮ ಅನುಮತಿ ದೊರೆಯುವುದೆಂಬ ವಿಶ್ವಾಸವಿದೆ. ತಮ್ಮ 'ಕ್ವೆರಿ'ಗಳ ಕುರಿತು ಸ್ಪಷ್ಟೀಕರಣ:-

ಅ:- ಅಸೀಮ ಇದು ಕವಿಯ ಅಂದರೆ ನನ್ನ ಕಾವ್ಯನಾಮ. ಕವಿತೆಗೆ ಸಂಬಂಧಿಸಿದಂತೆ ಎಲ್ಲ ಸೀಮೆಗಳನ್ನು ದಾಟಿ ಕೇವಲ ಮಾನವೀಯತೆಯನ್ನು ಮಾನ್ಯ ಮಾಡುವ ಇಚ್ಛೆ ಇಲ್ಲಿ ಪ್ರಕಟವಾಗುತ್ತದೆ.

ಆ:- ಕವಿತೆ ದೀರ್ಘವಾದುದರ ಕುರಿತಾಗಿ:- ಪ್ರಖ್ಯಾತ ಸಮೀಕ್ಷಕರಾದ ಶ್ರೀ ಚಂ.ದಾ. ವಾಕಣಕರ ಇವರು ತಮ್ಮ 'ಕವಿತೆ ಎಂದರೆ' ಎಂಬ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ: "ಅನುಭೂತಿಯು ಅಲ್ಪಕಾಲೀನವಾಗಿದ್ದರೂ ಅದರ ಆವಿಷ್ಕೃತಿಯು ದೀರ್ಘವಿರಬಹುದಾಗಿದೆ. ಅನುಭೂತಿಯು ಕಾವ್ಯಾಭಿಮುಖವಾದಾಗ ಅದರ ಆಶಯ ಕಣಗಳ ಮೇಲೆ ಆಘಾತ್ಮಕ ಪ್ರಕ್ರಿಯೆ ನಡೆದು ಪ್ರತಿ ಪರಮಾಣುವಿನ ಉರ್ಜಾತ್ಮಕ ಸ್ಫೋಟವಾಗಿ, ಆ ಊರ್ಜಾತ್ಮಕ ಭಾವದ್ರವ್ಯವು ಅನಂತದಲ್ಲಿ ವಿಲೀನವಾಗುತ್ತದೆ." ವಾಕಣಕರ ಈ ವಿವೇಚನೆಯನ್ನು (ಪ್ರಕರಣ 7, ಪುಟ 62) ತಾವು ಗಮನಿಸಬೇಕಾಗಿ ನಮ್ರ ವಿನಂತಿ.

ತಮ್ಮ ಆಜ್ಞಾಧಾರಕ,
ಬಿ.ಎ.ಬೋಸೇಕರ



ಶ್ರೀ.ಬಿ.ಎ.ಬೋಸೇಕರ,
ಟೈಪಿಸ್ಟ್, ರೆವಿನ್ಯೂ ಕಚೇರಿ,
ಇವರಿಗೆ -

ತಮ್ಮ ಪತ್ರ ತಲುಪಿತು. ನಿನ್ನೆ ಏಕಾತ್ಮತಾ ದಿನಾಚರಣೆ ಇದ್ದುದರಿಂದ ಕವಿತೆಯನ್ನು ಓದಲು ಸಮಯ ಸಿಗಲಿಲ್ಲ. ಆದರೆ ತಮ್ಮ ಅತಿ ಬುದ್ಧಿವಂತ ಜಾಕಣಕರ ಅಥವಾ ವಾಕಣಕರ ಏನೆನ್ನುತ್ತಾನೆ ಎಂಬುದು ನನಗೆ ಸಂಬಂಧಿಸಿದ್ದಲ್ಲ. ನಮ್ಮ ಮಾತೃಭಾಷೆಗೆ ನೋವುಂಟು ಮಾಡುವ ಇಂಥ ವಾಕ್ಯಗಳನ್ನು ಆತ ಬರೆಯುತ್ತಿದ್ದಲ್ಲಿ ಅವರು ಹಾಗೆ ಮಾಡದಂತೆ ಕಾನೂನು ಕ್ರಮ ಕೈಕೊಳ್ಳುವುದು ಒಳ್ಳೆಯದು ಇರಲಿ. ತಮ್ಮ ಕಾವ್ಯ ದೀರ್ಘವಾಗಿರುವುದಕ್ಕೆ ನನ್ನ ಆಕ್ಷೇಪವಿಲ್ಲ. ಸ್ವಾಮಿಗಳ ದಾಸಬೋಧ ದೀರ್ಘವಾಗಿದೆ. ಮೋರೋಪಂತರ 'ಆರ್ಯ ಭಾರತ' ದೀರ್ಘವಾಗಿದೆ. 'ಜ್ಞಾನೇಶ್ವರಿ' ಕೂಡ ದೀರ್ಘವಾಗಿದೆ. ಆದರೆ ಪ್ರಶ್ನೆ ಇರುವುದು ಚುಂಬನದಂತಹ (ಯಾರದೇ ಆದರೂ, ಎಷ್ಟನೆಯದೇ ಆದರೂ) ವಿಷಯದ ಮೇಲೆ ನೂರು ನೂರಿಪ್ಪತ್ತೈದು ಸಾಲುಗಳನ್ನು ಖರ್ಚು ಮಾಡಬೇಕೆ? 'ಅಸೀಮ' ಕುರಿತು ಸ್ಪಷ್ಟೀಕರಣ ತಿಳಿಯಿತು. ನಮ್ಮ 'ಕಾಂಚಿ' (ನನ್ನ ಪುತ್ರಿ ಕಾಂಚನಮಾಲಾ) ಮೊನ್ನೆಯಷ್ಟೆ ಕನ್ನಡ-ಕನ್ನಡ ವಿಶ್ವಕೋಶವನ್ನು ತಂದಳು. (ಅವಳ ಶಿಕ್ಷಣ ಇಂಗ್ಲೀಷ್‌ದಲ್ಲಿ ಆಗಿರುವುದರಿಂದ ಅವಳ ಕನ್ನಡ ಭಾಷಾ ಜ್ಞಾನ ಕಡಿಮೆ.) ಆ ಕೋಶದಲ್ಲಿ 'ಅಸೀಮ'ದ ಅರ್ಥ ನೋಡಿದೆ. ತಾವು ಹೇಳಿರುವ ಅರ್ಥ

ಸರಿಯಾಗಿದೆ. ಆದರೆ ಮತ್ತೊಂದು ಸಂಶಯ ಉತ್ಪನ್ನವಾಗುತ್ತದೆ. ತಾವು (ಕಂಸದಲ್ಲಿ) ಜಾತಿ, ಧರ್ಮ ಇತ್ಯಾದಿಗಳ ಸೀಮೆಗಳನ್ನು ಮಾನ್ಯ ಮಾಡುತ್ತೀರೋ ಇಲ್ಲವೋ? ನನ್ನ ಹೆಡ್‌ಕ್ಲಾರ್ಕ್ ಜೊಂಧಳೆಯವರಿಗೆ ಈ ಕುರಿತು ಪ್ರಶ್ನಿಸಿದೆ. ಅದಕ್ಕೆ ಅವರು ಇದು ಭಾರತೀಯ ಸಂವಿಧಾನಕ್ಕೆ ಸಂಬಂಧಿಸಿದ ವಿಷಯ. ಮತ್ತೆ ರಾಷ್ಟ್ರದ ಸೀಮೆಗಳನ್ನು ಒಪ್ಪುವುದಿಲ್ಲ ಎಂದಿದ್ದೀರಾ. ಅಡ್ಡಿಯಿಲ್ಲ. ಆದರೆ ತಾವು ದೇಶದ ಸೀಮೆಗಳನ್ನು ಒಪ್ಪದಿರುವುದೆಂದರೆ ಗಂಭೀರ ಹಾಗೂ ಪರಿಗಣಿಸಲೇಬೇಕಾದ ಅಪರಾಧವಾಗುತ್ತದೆ. ಆದುದರಿಂದ ತಾವು ಭಾರತದ ಸೀಮೆ (ಚೀನ ಪಾಕಿಸ್ತಾನಕ್ಕೆ ಸಂಬಂಧಿಸಿದಂತೆ) ಗಳನ್ನು ಮಾನ್ಯ ಮಾಡುವಿರೊ ಇಲ್ಲವೋ ಎಂಬುದರ ಕುರಿತು ವಿವರಣೆ ನೀಡುವುದು ಅತ್ಯವಶ್ಯ.

ಖಂಡೆರಾವ ಬಾರಾಟಕ್ಕೆ
ಆರ್. ಡಿ. ಸಿ.

(ತಾ.ಕ:- ನಾನು ಕವಿತೆಯನ್ನು ಓದಿಲ್ಲ. ಆದರೆ ಈ ರೀತಿಯ ಶೀರ್ಷಿಕೆಗಳ ನೈತಿಕ ಪರಿಣಾಮ ಹೇಗಾಗುತ್ತದೆ ಎಂಬುದರ ಅನುಭವ ಬಂತು. ನಿನ್ನೆ ರಾತ್ರಿ 12 ಗಂಟೆಗೆ ನಾನು ಸಹಜವಾಗಿ ಡ್ರಾಯಿಂಗ್‌ಹಾಲ್ ಬಳಿ ಹೋದೆ. ನಮ್ಮ ಕಾಂಚಿ ಮೂರು ಕೋಶಗಳನ್ನು ಇಟ್ಟುಕೊಂಡು ತಮ್ಮ ಕವಿತೆಯನ್ನು ಓದುತ್ತಿದ್ದಳು. ಪ್ರಾತಃಕಾಲ ಐದು ಗಂಟೆಗೆ ಎದ್ದು ನೋಡಿದರೆ ನನ್ನ ಸೌಭಾಗ್ಯವತಿ ಹಾಲನ್ನು ಕಾಯಿಸುವಾಗ ಅಡಿಗೆ ಮನೆಯಲ್ಲಿ ಕವಿತೆಯನ್ನು ಓದುತ್ತಿದ್ದಳು. ತಮ್ಮ 'ಪ್ರಥಮ ಚುಂಬನ' ಸುಂದರ ಮಗುವಿನದ್ದೋ ಅಥವಾ ಸಮರ್ಥರಂತಹ ಮಹಾತ್ಮರ ಚರಣಕಮಲದ್ದೋ ಆಗಿರಬಹುದೆಂದು ಈಗಲೂ ಆಶಿಸುವೆ. ಇಂಥ ಚುಂಬನ ಕುರಿತು ತಾವು ಇನ್ನೂರು ಸಾಲು ಬರೆದರೂ ನನ್ನ ಆಕ್ಷೇಪ ಇಲ್ಲ. ನಾನು ಕಾಂಚಿ ಹಾಗೂ ನನ್ನ ಸೌಭಾಗ್ಯವತಿಯನ್ನು ಕೇಳಿದಾಗ ಅವರು, 'ನೀವೇ



"ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ದಿನಾಂಕವನ್ನು ತಪ್ಪಾಗಿ ಹೇಳಿದೆನಾ! ಇಲ್ಲ ತಪ್ಪಾಗಬಾರದೆಂದೇ ಕೈಮೇಲೆ ಬರೆದುಕೊಂಡು ಬಂದಿದೀನಿ..."

ಓದಿ. ನಮಗೆ ಏನೂ ತಿಳಿಯಲೇ ಇಲ್ಲ' ಎಂದರು. ಸರಿ, ನಾಳೆ ನಾನೇ ಓದುವೆ.

- ಖಂ. ಬಾ.)



ಮಾನನೀಯ

ಶ್ರೀ ಖಂಡೇರಾವ್ ಸಾಹೇಬರಿಗೆ,

ವಂದನೆಗಳು -

ತಮ್ಮ ಕಾಗದ ಸಿಕ್ಕಿತು. ಕಾರ್ಯರತರಾಗಿದ್ದು ಕೂಡ, ತಾವು ಸಮಯಾವಕಾಶ ಮಾಡಿಕೊಂಡು ಪತ್ರೋತ್ತರ ಕಳುಹಿಸಿದ್ದಕ್ಕೆ ಅತ್ಯಂತ ಆಭಾರಿಯಾಗಿದ್ದೇನೆ. ಹದಿನೈದನೆಯ ತಾರೀಖು ಹತ್ತಿರ ಬಂದಿದೆ. ಆದುದರಿಂದ ಬೇಗ ತಮ್ಮ ಅನುಮತಿ ಕಳುಹಿಸಬೇಕಾಗಿ ನಮ್ರ ವಿನಂತಿ.

ಕ್ಷೌರಿ ಕುರಿತಾಗಿ:- ನಾನು ಭಾರತದ ಸೀಮೆಗಳನ್ನು ಮಾನ್ಯ ಮಾಡುತ್ತೇನೋ ಇಲ್ಲವೋ? ಎಂಬುದರ ಬಗೆಗೆ ನಾನು ಹೇಳಬೇಕಾದದ್ದು ಇದು: ಕವಿಯ ಸೀಮೆಯ ಇತಿಮಿತಿ ಕಾಲ್ಪನಿಕವಾಗಿರುತ್ತದೆ, ವಾಸ್ತವವಲ್ಲ. ಪ್ರಿಯಭಾರತದ ಸೀಮೆಗಳನ್ನು ಒಪ್ಪದವ ದೇಶದ್ರೋಹಿಯೆ ಸರಿ. ನಾನು ಅಂಥವನಲ್ಲ. ಹಿಂದೆ 'ಭಾರತ-ಪಾಕ್' ಯುದ್ಧ ನಡೆದಾಗ ನಾನು ಶಾಲೆಯಲ್ಲಿದ್ದೆ. ಆಗಲೆ ನಾನು, 'ಎಚ್ಚರ! ಸೀಮೊಲ್ಲಂಘನ ಮಾಡಿ ಬಂದೀರಾ!! ರುಂಡ ಮುಂಡ ಕಳೆದುಕೊಂಡಿರಾ!' ಎಂಬುದಾಗಿ ಕವಿತೆಯನ್ನು ಬರೆದಿದ್ದೆ. ಅದಕ್ಕೆ ಬಹುಮಾನವೂ ಸಿಕ್ಕಿತ್ತು. ಅರ್ಥಾತ್ ನಾನು ದೇಶದ ಸೀಮೆಗಳನ್ನು ಮಾನ್ಯ ಮಾಡುತ್ತೇನೆ. ಭಾರತದ್ದೇ ಏಕೆ?, ನಾನು ರೆವೆನ್ಯೂ ಇಲಾಖೆಯಲ್ಲಿ ಕೆಲಸದಲ್ಲಿರುವುದರಿದ ಜಿಲ್ಲೆ ಹಾಗೂ ತಾಲ್ಲೂಕಿನ ಸೀಮೆಗಳನ್ನೂ ಮಾನ್ಯ ಮಾಡುತ್ತೇನೆ. ಇದರ ಬಗ್ಗೆ ತಮ್ಮ ಮನಸ್ಸಿನಲ್ಲಿ ಯಾವ ಸಂಶಯವೂ ಬೇಡ. ನನ್ನ ಕವಿತೆಯನ್ನು ತಮ್ಮ ಸುಕನ್ಯೆ ಹಾಗೂ ಮಾತೋಶ್ರೀ (ತಮ್ಮ ಸೌ.)ಯವರು ಓದಿದರು-ಅದೂ ರಾತ್ರಿ ಅಪರಾತ್ರಿ ಜಾಗರಣೆ ಮಾಡಿ- ಎಂದು ತಿಳಿದು ಬಹಳ ಆನಂದವಾಯಿತು. ಕವಿತೆ ಅಧ್ಯಾತ್ಮಿಕ ಅಥವಾ ವಾತ್ಸಲ್ಯ ರೂಪಿಯಲ್ಲ ಅದು ಪ್ರೇಮವನ್ನು ಕುರಿತದ್ದು. ಆದರೆ ಸ್ತ್ರೀ-ಪುರುಷರ ಪ್ರೇಮದಲ್ಲೂ ಅಧ್ಯಾತ್ಮದ ಗಂಧ ಬರುತ್ತದೆ ಎಂದು ರಜನೀಶರಂತಹ ಭಗವಾನರು ಹೇಳಿದ್ದಾರೆ. ಕವಿತೆ ಚುಂಬನದ ಬಗೆಗೆ ಇದ್ದರೂ ಅದರಲ್ಲಿ ಅಶ್ಲೀಲ ಹಾಗೂ ಭೀಭತ್ಸವಾದುದೇನೂ ಇಲ್ಲ. ಇದ್ದುದಾದಲ್ಲಿ ತಮ್ಮ ಸುಕನ್ಯೆ ಹಾಗೂ ಮಾತೋಶ್ರೀಯವರು ಓದುತ್ತಲೇ ಇರಲಿಲ್ಲ. ಕವಿತೆಯನ್ನು ಓದಿದ ನಂತರ ತಾವೂ ಇದೇ ಅಭಿಪ್ರಾಯಕ್ಕೆ ಬರುವಿರೆಂಬ ವಿಶ್ವಾಸ ನನಗಿದೆ.

ತಮ್ಮ ನಮ್ರ ಸೇವಕ,
ಬಿ.ಎ.ಬೋಸೇಕರ



ಶ್ರೀ. ಬಿ.ಎ.ಭೋಸೇಕರ,
ಟೈಪಿಸ್ಟ್,
ಕಾರ್ಯಾಲಯ - ರೆವೆನ್ಯೂ,
ಇವರಿಗೆ -

ಪತ್ರ ಕೈ ಸೇರಿದೆ. ನಿನ್ನೆ ಇಡೀ ದಿನ 'ಸಾಮಾಜಿಕ ವನನಿರ್ಮಾಣ' ಕಾರ್ಯಕ್ರಮದಲ್ಲೆ ಕಳೆದುಹೋದುದರಿಂದ ನಿನ್ನೆಯೂ ನಿಮ್ಮ ಕವಿತೆಯನ್ನು ಓದಲು ಸಾಧ್ಯವಾಗಲಿಲ್ಲ. ಆದರೆ ತಮ್ಮ ಖುಲಾಸೆಯಿಂದಾಗಿ ಕವಿತೆಯ ವಿಷಯ ಸ್ಪಷ್ಟವಾಗಿದೆ. (ರಜನೀಶರ ಹೆಸರೇ ಬೇಡ. ಆತನೇನೂ ಸಮರ್ಥನಲ್ಲ.) ಇನ್ನು ನೀವು ವಿಷಯವನ್ನು ಹೇಗೆ ಮಂಡಿಸಿದ್ದೀರಿ ಎಂಬುದನ್ನು ನೋಡುವುದಿದೆ. ನನ್ನ ದೃಷ್ಟಿಯಲ್ಲಿ ಇಂದು ದೇಶಕ್ಕೆ ಅತ್ಯವಶ್ಯವಾಗಿ ಬೇಕಾಗಿರುವ ಸಂಗತಿಯೆಂದರೆ 'ಮಾತಿಗಿಂತ ಕೃತಿ ಮೇಲು' ಎಂಬ ಸಂದೇಶ

ನೀಡಿದ 'ರಾಮದಾಸರದು'. ಆದರೆ ಕಾವ್ಯ ಕ್ಷೇತ್ರದಲ್ಲಿ ಈಗ 'ಚಲತಿ' ಇರುವುದು 'ಕಾಮ ದಾಸರದು'. ಇರಲಿ, ಮಹತ್ವದ ವಿಷಯವೆಂದರೆ, ತಮ್ಮ ಪತ್ರದ ಕುರಿತು ಜೊಂಧಳೆಯವರಿಗೆ ಹೇಳಿದೆ. ಅವರು ಬಹಳ ಸಂತೃಪ್ತರಾದರು. ಏಕೆಂದರೆ ತಾವು ಕೆಲಸ ಮಾಡುತ್ತಿರುವ ಸೆಕ್ಷನ್ನಿನಲ್ಲಿ ಆರು ಜನ ತರುಣಿಯರಿದ್ದಾರೆ. ಮೂವರು ವಿವಾಹಿತರು ಹಾಗೂ ಇತರ ಮೂವರು ಅವಿವಾಹಿತರು. ಆದುದರಿಂದ ಈ ಕವಿತೆಯ ಸಂಬಂಧ ಆ ತರುಣಿಯರ ಕುರಿತಿಲ್ಲ ಎಂಬ ಬಗೆಗೆ ತಮ್ಮಿಂದ 'ಅಫಿಡೆವಿಟ್' ಪಡೆಯಬೇಕೆಂದು ಆಗ್ರಹಪಡಿಸಿದರು. ಆದರೆ ಆ ಮಾತಿಗೆ ನಾನು ಒಪ್ಪಲಿಲ್ಲ. ಈ ಕವಿತೆಯಿಂದಾಗಿ (ಅಂದರೆ 'ಪ್ರಥಮ ಚುಂಬನ'ದಿಂದಾಗಿ) ದೇಶದ ಸಾರ್ವಭೌಮತ್ವಕ್ಕೆ ಯಾವುದೇ ರೀತಿಯಲ್ಲಿ ಧಕ್ಕೆ ಉಂಟಾಗುತ್ತದೋ ಹೇಗೆ? ಅದರಿಂದಾಗಿ ಸಮಾಜದಲ್ಲಿ ಅಂತರ್‌ಜಾತೀಯ ಅಥವಾ ಅಂತರ್ಧರ್ಮೀಯ ಕಲಹ ಉಂಟಾಗಬಹುದೋ? ಯಾವುದಾದರೂ ಅಲ್ಪ ಸಂಖ್ಯಾತ ಸಮಾಜದ ಭಾವನೆಗಳಿಗೆ (ಜೊಂಧಳೆಯವರ ರೀತ್ಯಾ ತುಟಿಗಳಿಗೂ) ನೋವುಂಟಾಗಬಹುದೋ? ಇದನ್ನು ಪರೀಕ್ಷಿಸುವುದು ಮಾತ್ರ ಈಗ ನನ್ನ ಜವಾಬ್ದಾರಿಯಾಗಿದೆ. ಹೀಗಾಗಿ ತಾವು ಯಾರ ಪ್ರಥಮ ಚುಂಬನ ತೆಗೆದುಕೊಂಡಿರೋ ಆ ವ್ಯಕ್ತಿಯ ಜಾತಿ, ಧರ್ಮ ಇತ್ಯಾದಿ ತಿಳಿಸುವುದು. ಅದೇ ರೀತಿ ಆ ವ್ಯಕ್ತಿ ವಯಸ್ಕಳು ಹೌದೋ ಅಲ್ಲವೋ, ಅಲ್ಲವಾದರೆ ಅವಳ ಪಾಲಕರ ಪೂರ್ವಾನುಮತಿಯನ್ನು ತಾವು ಪಡೆದಿದ್ದಿರೋ ಹೇಗೆ? ಇದನ್ನು ತಿಳಿಸುವುದು. ಆ ವ್ಯಕ್ತಿ ಹಿಂದುಳಿದ ಜನಾಂಗದವಳಾಗಿದ್ದಲ್ಲಿ ಅವರ ಪ್ರಥೆಯಾನುಸಾರ ಪಂಚಕಮಿಟಿಯ ಅನುಮತಿಯೂ ಇಂಥ ಕೃತ್ಯಕ್ಕೆ ಅವಶ್ಯವಾಗಿರುತ್ತದೆ. ಈ ವಿಷಯವನ್ನೂ ಗಮನದಲ್ಲಿರಿಸಿ ತಾವು ಸ್ಪಷ್ಟೀಕರಣ ನೀಡಬೇಕಾಗಿ




"ನಿನಗೆ ಅಡಿಗೆ ಸರಿಯಾಗಿ ಮಾಡಕ್ಕೆ ಬರಲ್ಲಾ ಅಂದದ್ದು ಮಹಾಪರಾಧವಾಯ್ತು ಕಣೇ.."

ವಿನಂತಿ. ನಿಮ್ಮ ಕವಿತೆಯನ್ನು ಇಂದು ರಾತ್ರಿ ಓದಲಿರುವೆ. ಆದರೆ ಪ್ರಕಾಶನಕ್ಕೆ ಅನುಮತಿ ನೀಡುವುದಕ್ಕಿಂತ ಮೊದಲು ಮೇಲ್ಕಾಣಿಸಿದ ಪ್ರಶ್ನೆಗಳಿಗೆ ಉತ್ತರ ಬರುವುದು ಅವಶ್ಯ.

ಖಂಡೆರಾವ್ ಬಾರಾಟಕ್ಕೆ
ಆರ್. ಡಿ. ಸಿ.

(ತಾ:ಕ:- ಸ್ವಲ್ಪ ವೈಯಕ್ತಿಕ. ಇಲ್ಲಿ ನನ್ನ ಅಧಿಕಾರ ಪದದ ಸಂಬಂಧವಿಲ್ಲ. ಸ್ವಾಮಿ ಸಮರ್ಥರ 'ಮನದ ಶ್ಲೋಕ'ಗಳು ಪ್ರಸಿದ್ಧವಾಗಿವೆ. ಅವನ್ನೇ ಆಧರಿಸಿ ನಾನು 'ವನದ ಶ್ಲೋಕ' ಎಂಬ ದೀರ್ಘ ಕಾವ್ಯವನ್ನು ಬರೆಯಲು ಆರಂಭಿಸಿದ್ದೇನೆ. ಇಂದೇ ಮುಂಜಾನೆ ಸ್ವಾಮಿಗಳನ್ನು ಮನದಲ್ಲಿ ವಂದಿಸಿ ಪ್ರಥಮ ಶ್ಲೋಕ ಬರೆದಿರುವೆ. ಈ ಕಾವ್ಯದಲ್ಲಿ ವಿವಿಧ ಗಿಡಗಳ ಮಾಹಿತಿ, ಅವುಗಳನ್ನು ಯಾವಾಗ ಎಲ್ಲಿ ನೆಡುವುದು, ಅವುಗಳಿಗೆ ಉಪಯೋಗಿಸಬೇಕಾದ ಗೊಬ್ಬರ, ಅವುಗಳ ಪೋಷಣೆಯ

ವಿಧಾನ ಇತ್ಯಾದಿಗಳನ್ನು ವರ್ಣಿಸಲಾಗುವುದು. 'ಕಾವ್ಯಕುಂಜ'ದ ಸ್ಪರ್ಧೆಗಾಗಿ ಈ ಕವಿತೆಯನ್ನು ಕಳುಹಿಸುವ ಯೋಚನೆ ಇದೆ. ಜೊಂಧಳೆಯವರಿಗೆ ನನ್ನ ವಿಚಾರ ಹಾಗೂ ಶ್ಲೋಕ ಬಹಳ ಹಿಡಿಸಿತು. [ಇದು ನಿಜವಾದ ಕಾವ್ಯ. ಪ್ರಥಮ ಚುಂಬನ ದ್ವಿತೀಯ ದರ್ಜೆಯದೂ ಆಗಲಿಲ್ಲ. ಇವೇನು ಕವಿತೆಯ ವಿಷಯಗಳೇ? ಇತಿ ಜೊಂಧಳೆ. ಇರಲಿ.] ಅಂತೆಯೇ ಆ ಮಾಸಿಕದ ಪೂರ್ತಿ ವಿಳಾಸ ಹಾಗೂ ಸಂಪಾದಕರ ಹೆಸರನ್ನು ತಿಳಿಸುವುದು. ಖಂ.ಬಾ.)



ಕವಿವರ್ಯ 'ಅಸೀಮ'
ಮೈ ಡಿಯರೆಸ್ಟ್ ಬಿಪಿನ್,

ನನಗೆ ಈ ಪೊಯೆಟ್‌ಗಳೇ ಅರ್ಥವಾಗುವುದಿಲ್ಲ - ಯಾವುದೇ ಒಂದು ಸುಂದರ ಹಾಗೂ ಮಧುರ (ಸ್ವೀಟ್) ಕೃತಿಯನ್ನು ರಚಿಸಿದ ನಂತರ, ಮರುಕ್ಷಣವೇ ಅದರ ಮೇಲೆ ಕವಿತೆ ಬರೆಯುವ ಅವಶ್ಯಕತೆಯಾದರೂ ಏನಿರುತ್ತದೆ? ಆ ಸುಂದರ ಸಂಗತಿ ಸೂಚಿಸುವಂತೆ ಮಾಡುವುದೇ ಕವಿತೆಗೆ ವಿಷಯ ಪಡೆಯುವುದಕ್ಕಾಗಿಯೇ ಏನು? ಎಂಬ ಸಂಶಯ ನನಗೆ ಬರುತ್ತಿದೆ. ನನ್ನ ರಾಜಾ ನಿಜ ಹೇಳು, ಆ ದಿನ ನಮ್ಮ ತುಟಿಗಳ ಪ್ರಥಮ ಮಿಲನವಾಗುತ್ತಿರುವಾಗ, ನೀನು ಮನದಲ್ಲೇ 'ರಾಯಿಮ್ಸ'ಗಳನ್ನು ಜೋಡಿಸುತ್ತಿರಲಿಲ್ಲವಷ್ಟೆ? ಓಗಾಡ್- ಒನ್ ಥಿಂಗ್ ಆಟ್ ಎ ಟೈಮ್ ಎಂಡ್ ದ್ಯಾಟ್ ಡನ್‌ವೆಲ್- ಈ ಸಂಗತಿಯನ್ನು ನೀವು ಪೊಯೆಟ್‌ಗಳು ಕಲಿಯುವುದೇ ಇಲ್ಲವೆ? ಕೃತಿ ಮೊದಲು, ಮಾತು ನಂತರ ಎನ್ನುವುದೇನೋ ಸರಿ. ಆದರೆ ಹೇಳುವುದಕ್ಕಾಗಿಯೇ ಮಾಡುವುದು ನನಗೆ ಉಚಿತ ಎನಿಸುವುದಿಲ್ಲ. ಹಾಗಾದಲ್ಲಿ ಹೇಳುವುದರ ಶ್ರೇಷ್ಠತ್ವ ಹೆಚ್ಚಾಗಿ ಕೃತಿಯಲ್ಲಿ ಕ್ಷಮತೆ ಕಡಿಮೆಯಾದೀತು. (ವಾಕ್ಯ ರಚನೆ ಸರಿಯಾಗಿದೆ) ಓ.ಕೆ. ನಾನು ವಿಷಯದಿಂದ ಡೈವರ್ಟ್ ಆದೆ. ನಿನಗೆ ತಿಳಿಸಬೇಕಾದ ಮುಖ್ಯ ವಿಷಯವೆಂದರೆ ಅಂತೂ ನಿನ್ನೆ ರಾತ್ರಿ 'ಪಪ್ಪಾ' ನಿನ್ನ ಕವಿತೆಯನ್ನು ಓದಿದರು. ನಾನು ಬಾಗಿಲಿನ ಸಂದಿಯಿಂದ ನೋಡುತ್ತಿದ್ದೆ. ಒಂದೊಂದೇ ಪಂಕ್ತಿಯ ವಾಚನದೊಂದಿಗೆ ಅವರ ವಯಸ್ಸು ಮುಖದ ಮೇಲಿಂದ ಜಾರಿ ಹೋಗುತ್ತಿತ್ತು. ಮಧ್ಯದಲ್ಲೆ ಅವರು ನಗುತ್ತಿದ್ದರು. ಚಿಟಿಕೆ ಹೊಡೆಯುತ್ತಿದ್ದರು, ಕೆಲವೊಮ್ಮೆ ಗಂಭೀರವಾಗುತ್ತಿದ್ದರು. ಮಧ್ಯದಲ್ಲೇ ಬೆಡ್‌ರೂಂಗೆ ಹೋದರು. ಹತ್ತು ನಿಮಿಷದ ನಂತರ ಹೊರಬಂದರು. ನಂತರ ಅವರು ಕವಿತೆಯನ್ನು ಪೂರ್ತಿಯಾಗಿ ಓದಿದರು. ನಂತರ ಕಾಗದವನ್ನು ಟೇಬಲ್ ಮೇಲಿಟ್ಟು, ಎದ್ದು ಬಂದು ನನ್ನ ಕೋಣೆಯ ಬಾಗಿಲನ್ನು ತಟ್ಟಿ ನನಗೆ ಹೊರಬರಲು ಹೇಳಿದರು. ನನಗೆ ಬಹಳ ಅಂಜಿಕೆಯಾಗಿತ್ತು. ಅವರು ಪ್ರಶ್ನಿಸಿದರು: "ಕಾಂಚಿ, ಈ ಕವಿತೆಯ ಒಂದು ನೂರ ಎಂಟು ಸಾಲುಗಳಲ್ಲಿ ಐವತ್ತೆರಡು ಸಲ 'ಕಾಂಚನ' ಶಬ್ದ ಬಂದಿದೆ ಹಾಗೂ ಮೂವತ್ತೇಳು ಸಲ 'ಮಾಲಾ' ಇದೆ. ಮತ್ತು ಹದಿನಾಲ್ಕು ಸಲ ಸ್ಪಷ್ಟವಾಗಿ 'ಕಾಂಚನಮಾಲಾ' ಈ ಹೆಸರಿದೆ. ಏನಿದರ ಅರ್ಥ?" ಡಿಯರ್ ರಾಜಾ, ಅದು ಪರೀಕ್ಷೆಯ ಕ್ಷಣವಾಗಿತ್ತು. (ಕ್ರಿಟಿಕಲ್-ಸೂಹನಿಯವರ ವಿಶ್ವಕೋಶ ಬಳಿ ಇದೆ) ನಾನು ನನ್ನಷ್ಟಕ್ಕೆ ಹೇಳಿದೆ. ಎಲೆ ಮನವೇ-ಬೀಫರ್ಮ-ಅನ್-ವೆವರಿಂಗ್! ಮತ್ತೆ ರಾಜಾ, ಆ ಸಂಕಟದ ಸಮಯದಲ್ಲಿ ನಿನ್ನ ಕವಿತೆಯಲ್ಲಿನ ಪಂಕ್ತಿಗಳು ನನ್ನ ಮನದಲ್ಲಿ ಧುಮುಕುತ್ತಿದ್ದವು-

"ಭಯವಿಲ್ಲ ಈ ಪ್ರೀತಿಗೆ, ವಜ್ರಕ್ಕೂ ಕಠೋರ. ಅದನ್ನು ಬಗ್ಗಿಸುವ ಶಕ್ತಿ ಯಾವುದಿದೆ!" ಈ ಸಾಲುಗಳು ನನಗೆ ಧೈರ್ಯ ನೀಡಿದವು; ಬಲ ನೀಡಿದವು. (ಕವಿತೆ ಹೀಗೆ

ಒಮ್ಮೊಮ್ಮೆ ಪ್ರಯೋಜನಕ್ಕೂ ಬರುತ್ತದೆ.)

ನಾನು ಪಪ್ಪಾಗೆ ಹೇಳಿದೆ: ''ಈ ಕವಿತೆಯ ಕೇಂದ್ರ ಬಿಂದು ನಾನೇ ಇರುವೆ. ಬಂದರೆ ಜೊತೆಗೆ; ಇಲ್ಲದಿದ್ದರೆ ನಿಮ್ಮನ್ನು ಬಿಟ್ಟು-ನಾವು ಬರುವ 20ನೇ ತಾರೀಖಿಗೆ 'ಚೇತನಾ'ದಲ್ಲಿ ವಿವಾಹವಾಗಲಿದ್ದೇವೆ. ಬೆಳಿಗ್ಗೆ ಸರಿಯಾಗಿ ಒಂಭತ್ತು ಗಂಟೆಗೆ. ಪುರೋಹಿತರಿಗೂ ಹೇಳಿಟ್ಟಿದ್ದೇವೆ.'' ಪಪ್ಪಾ ಒಂದು ಕ್ಷಣ ಸ್ತಬ್ಧರಾದರು. ನಂತರ ಒಮ್ಮೆಲೆ ''ಡೌರಿ?'' ಎಂದರು. ನಾನು ತಟ್ಟನೆ ನುಡಿದೆ: ''ರಬ್ಬಿಶ್, ನೋ ಡೌರಿ. ನಥಿಂಗ್. ನಮ್ಮ ವಿವಾಹವೆಂದರೆ ಹೃದಯುಗಳ ಸಮ್ಮಿಲನ. ಡೌರಿ ಎಂದರೆ ದನಗಳ ವ್ಯಾಪಾರ. ನನ್ನ ರಾಜಾ ಎತ್ತು ಅಲ್ಲ ನಾನು ಆಕಳೂ ಅಲ್ಲ. ನನ್ನ ರಾಜಾನಿಗೆ ಡೌರಿ ಬೇಕಾಗಿರುವುದು ಕೇವಲ ನಿಮ್ಮ ಆಶೀರ್ವಾದಗಳಿದ್ದು.'' ಈ ಲಾಸ್ಟ್ ವಾಕ್ಯದ ಪರಿಣಾಮ ಪಪ್ಪಾಜಿ ಮೇಲೆ ಬಹಳವಾಯಿತು. ಅವರು ನನ್ನನ್ನು ಹತ್ತಿರ ಎಳೆದುಕೊಂಡು, ''ಸುಖಿಯಾಗು ಪುತ್ರಿ,'' ಎಂದು ಕಣ್ಣು ಒರೆಸುತ್ತ, ಬೆಡ್‌ರೂಮಿಗೆ ಹೊರಟರು. ಮಧ್ಯದಲ್ಲೇ ನಿಂತು ತಿರುಗಿ ಅವರು ಪ್ರಶ್ನಿಸಿದರು: ''ಕಾಂಚಿ, ಒಂದು ಡಿಫಿಕಲ್ಟಿ ಇದೆಯಲ್ಲ. ಈ ಬೋಸೆಕರ್ ಅನ್ನುತ್ತಾನೆ - ಪ್ರಿಯೆಯ ತುಟಿ ಮೇಲೆ ಅಮೃತಸಾಗರ ಹಾಗೂ ಕಾಡ್ಗಿಚ್ಚು ಇರುವವು. ಒಂದೇ ಸ್ಥಳದಲ್ಲಿ ಅಮೃತ ಹಾಗೂ ಕಾಡ್ಗಿಚ್ಚು ಇರುವುದು ಹೇಗೆ ಸಾಧ್ಯ?'' ನಾನು ಹೇಳಿದೆ: ''ಪಪ್ಪಾ, ನೀವು ಬೆಡ್‌ರೂಮಿನ ಬಾಗಿಲಿನೊಂದಿಗೆ ಭೂತಕಾಲದ ಬಾಗಿಲನ್ನೂ ತೆರೆಯಿರಿ. ಆಗ ನಿಮಗೆ ತಿಳಿದೀತು.'' ನನ್ನ ತಲೆಯ ಮೇಲೆ ಪ್ರೀತಿಯಿಂದ ಗುದ್ದಿ, ಬೆಡ್‌ರೂಂನಲ್ಲಿ ಅಂದರೆ ಭೂತಕಾಲದಲ್ಲಿ ಸೇರಿದರು. ಮಮ್ಮಿಯ ಸಮ್ಮತಿ ಪಡೆದು ಬೆಳಿಗ್ಗೆ ಈರ್ವರೂ ನನಗೆ ಆಶೀರ್ವದಿಸಿದರು. ಅದು

ದರಿಂದ ನನ್ನ ಪೊಯೆಟ್ ರಾಜಾ-

ಸರ್ವಸ್ವೀ ನಿನ್ನವಳೇ,
'ಕಾಂಚನ'



ಶ್ರೀ ಬಿಪಿನಚಂದ್ರ ಬೋಸೇಕರ್,
ಟೈಪಿಸ್ಟ್, ರೆವೆನ್ಯೂ ಕಾರ್ಯಾಲಯ
ಇವರಿಗೆ,

ತಮ್ಮ ಕವಿತೆ ಓದಿದೆ. ದೇಶದ ಹಿತಕ್ಕೆ ಅಥವಾ ಕಾನೂನು ಮತ್ತು ಶಿಸ್ತಿಗೆ ಧಕ್ಕೆ ತರುವಂತಹ ಆಕ್ಷೇಪಾರ್ಹ ಸಂಗತಿ ಅದರಲ್ಲಿ ಏನೂ ಇಲ್ಲ. ಆದುದರಿಂದ ಈ ಪತ್ರದ ಮೂಲಕ ಅದರ ಪ್ರಕಟನೆಗೆ ಅನುಮತಿ ನೀಡುತ್ತಿರುವೆ.

ಖಂಡೇರಾವ್ ಬಾರಾಟಕ್ಕೆ
ಆರ್. ಡಿ. ಸಿ.

(ತಾ. ಕ: ಹಿಂದಿನ ಪತ್ರದಲ್ಲಿ ಕೇಳಿದ ಕ್ಲೈರಿ-ಗಳಿಗೆ ಈಗ ಉತ್ತರಿಸುವ ಅಗತ್ಯವಿಲ್ಲ. ಹಾಗೆಯೇ 'ಕಾವ್ಯಕುಂಜ'ದ ವಿಳಾಸವನ್ನು ಸದ್ಯಕ್ಕೆ ಕಳುಹಿಸುವುದೂ ಬೇಡ. ಕಲೆಕ್ಟರ್ ಸಾಹೇಬರು ರಜೆಯ ಮೇಲೆ ಹೋಗಿರುವುದರಿಂದ ಒಂದೆರಡು ವಾರಗಳವರೆಗೆ ಕವಿತೆ ರಚಿಸಲು ಸಮಯ ಸಿಕ್ಕಲಾರದು. ಆದರೆ ನಾಳೆ ಬೆಳಿಗ್ಗೆ ಸರಿಯಾಗಿ 9 ಗಂಟೆಗೆ ತಪ್ಪದೇ ನಮ್ಮ ಮನೆಗೆ ದಯವಿಟ್ಟು ಬರುವುದು. ಬಹಳಷ್ಟು ಮಾತನಾಡುವುದಿದೆ. ಖಂ. ಬಾ.)



ಶ್ರೀ ಬಿಪಿನಚಂದ್ರ, ಬೋಸೇಕರ,
ಕವಿ 'ಅಸೀಮ' ಇವರಿಗೆ,
ಸ.ನ.ವಿ.ವಿ.

ತಮ್ಮ ಕವಿತೆ ತಲುಪಿತು. ಆಭಾರಿಯಾಗಿದ್ದೇವೆ. ತಮ್ಮ ಕವಿತೆಯನ್ನು ಸ್ಪರ್ಧೆಗಾಗಿ ಪರಿಗಣಿಸಲು ಸಾಧ್ಯವಿಲ್ಲ ಎಂದು ತಿಳಿಸಲು ವಿಷಾದಿಸುತ್ತೇವೆ. ಏಕೆಂದರೆ ರಾಮು ಗಣೇಶರ 'ಪ್ರಥಮ ಚುಂಬನ' ಕವಿತೆ ಪ್ರಸಿದ್ಧವಾಗಿಯೆ ಇದೆ. ಆ ಕವಿತೆಯ (ವಿಷಯವೂ ಸೇರಿದಂತೆ) ಕಾಪಿ ಮಾಡಿ (ಅಥವಾ ಕೃತಿಚೌರ್ಯ) ಜೊತೆಗೆ ಗಲ್ಲದಿಂದ ತುಟಿವರೆಗೆ ತಲುಪಿದ್ದು ಇತರೆ ನಾಲ್ಕಾರು ಕಲ್ಪನೆಗಳನ್ನು (ಅವೂ ರಾಮು ಗಣೇಶ ಇತರ ಕಾವ್ಯಗಳಿಂದ) ಆಯ್ದು ನಿಮ್ಮ ತಥಾಕಥಿತ ಕಾವ್ಯದಲ್ಲಿ ಸೇರಿಸಿದ್ದೀರಿ ಅಷ್ಟೆ. ಈ ಕಾಗದದ ಜೊತೆಗೆ ತಮ್ಮ ಹಸ್ತ ಪ್ರತಿಯನ್ನು ಹಿಂತಿರುಗಿಸುತ್ತಿದ್ದೇವೆ. ದಯವಿಟ್ಟು ಬೇಸರ ಬೇಡ. ಇನ್ನು ಮುಂದೆ ತಮ್ಮ ಸ್ವತಂತ್ರ ಕವಿತೆಗಳನ್ನು 'ಕುಂಜ'ಕ್ಕೆ ಅವಶ್ಯವಾಗಿ ಕಳುಹಿಸುವುದು. 'ಕಾವ್ಯಕುಂಜ'ದ ವಾರ್ಷಿಕ ಚಂದಾ 60ರೂ ಇದೆ. ಅದನ್ನು ತಾವು ಕಳುಹಿಸಬೇಕಾಗಿ ವಿನಂತಿ. ಚಂದಾದಾರರ ಕಾವ್ಯಗಳ ಕುರಿತಾಗಿ ನಮ್ಮ ಧೋರಣೆ ಹೆಚ್ಚು ಸವಲತ್ತಿನದು ಹಾಗೂ ಸ್ನೇಹಭಾವದ್ದೂ ಆಗಿರುತ್ತದೆ. ಇಂತಿ ತಮ್ಮ,

ಸುರೇಶ ಸಾಕೋರಿಕರ
ಸಂಪಾದಕ 'ಕಾವ್ಯ ಕುಂಜ'



*ಬಿಸಿಲಿನ ತಾಪದಿಂದ ವ್ಯಾಕುಲಗೊಂಡ ಮನುಷ್ಯನಿಗೆ ವೃಕ್ಷದ ನೆಳಲು ವಿಶೇಷ ಸುಖವೀಯುವಂತೆ, ದುಃಖದ ಅನಂತರ ಯಾವ ಸುಖವುಂಟಾಗುತ್ತದೆಯೋ ಅದೇ ವಿಶೇಷ ಆನಂದವನ್ನೀಯುತ್ತದೆ.*
**- ಕಾಳಿದಾಸ**

*ದೈವ ಮೂರ್ಖ ಜನರ ಕಲ್ಪನೆಯಾಗಿದೆ. ಇದರ ಭರವಸೆಯ ಮೇಲೆ ಅವರು ನಾಶವನ್ನು ಪ್ರಾಪ್ತ ಮಾಡಿಕೊಳ್ಳುತ್ತಾರೆ. ಬುದ್ಧಿವಂತರಾದ ಜನರು ಪುರುಷಾರ್ಥ ಮಾಡಿ ತಮ್ಮ ಉನ್ನತಿಯನ್ನು ಮಾಡಿಕೊಳ್ಳುತ್ತಾರೆ.*
**- ಯೋಗವಾಶಿಷ್ಠ**

## ಜೀವನದರ್ಶನ

ಕೆ.ಟಿ. ಪಾಂಡುರಂಗಿ

# ಮನೆ-ಮನಸ್ಸು

ನಮ್ಮ ಮನೆ ಎಂದು ನಾವು ಹೇಳುವಾಗ ಕೇವಲ ಇಟ್ಟಿಗೆ ಸಿಮೆಂಟುಗಳಿಂದ ಕಟ್ಟಿದ ನಾವು ವಾಸವಾಗಿರುವ ಸ್ಥಳವನ್ನು ನಾವು ಹೇಳುವುದಿಲ್ಲ. ಆದರೆ ಅದರಲ್ಲಿರುವ ನಾವು ನಮ್ಮ ತಂದೆ-ತಾಯಿಗಳು, ಅಣ್ಣ-ತಮ್ಮಂದಿರು, ಹೆಂಡತಿ, ಮಕ್ಕಳು ಈ ಎಲ್ಲರ ಪರಸ್ಪರ ಅಂತಃಕರಣದಿಂದ ಹೆಣೆದ ವ್ಯಕ್ತಿಗಳ ಗುಂಪಿಗೆ ಹೇಳುವೆವು. ಇಲ್ಲಿ ಮುಖ್ಯವಾದುದು ಇವರೆಲ್ಲರ ಪರಸ್ಪರ ಮನಸ್ಸಿನ ಹೆಣಿಕೆ. ಅದಿಲ್ಲದೆ ಕೇವಲ ಒಟ್ಟಿಗಿದ್ದ ಕೆಲವು ವ್ಯಕ್ತಿಗಳು ಮನೆಯೆನಿಸಲಾರದು.

ಒಂದು ಮನೆ ಉತ್ತಮ ಮನೆಯಾಗಬೇಕಾದರೆ ಅಲ್ಲಿರುವ ಎಲ್ಲರೂ ಪರಸ್ಪರ ಪ್ರೀತಿಯುಳ್ಳವರಾಗಿರಬೇಕು, ಪರಸ್ಪರ ಪ್ರಾಮಾಣಿಕ ವರ್ತನೆಯುಳ್ಳವರಾಗಿರಬೇಕು, ಪರಸ್ಪರರ ಸ್ವಭಾವಗಳ ವ್ಯತ್ಯಾಸಗಳ ವಿಷಯದಲ್ಲಿ ತಾಳ್ಮೆಯುಳ್ಳವರಾಗಿರಬೇಕು, ಮನೆತನದ ಕಾರ್ಯಗಳಲ್ಲಿ ಯಾವದನ್ನೂ ಲಘುವಾಗಿ ಎಣಿಸದೆ ಎಲ್ಲದರಲ್ಲಿಯೂ ಭಾಗಿಯಾಗಲು ಸಿದ್ಧರಾಗಿರಬೇಕು, ಸೋಮಾರಿತನ ಮಾಡದೆ ಒಬ್ಬರ ಮೇಲೆ ಒಬ್ಬರು ಹಾಕದೆ ಯಾವ ಕೆಲಸವಿದ್ದರೂ ಮುಂದಾಗುವ ಮನೋಧರ್ಮದವರಾಗಿರಬೇಕು. ಇವಿಲ್ಲದೆ ಕೇವಲ ಕೆಲವು ವ್ಯಕ್ತಿಗಳು ಒಂದೆಡೆಗಿದ್ದರೆ ಅದು ಮನೆ ಎನಿಸಲಾರದು.

ಸಾಮಾನ್ಯವಾಗಿ ಪರಸ್ಪರ ತಂದೆ-ಮಕ್ಕಳು, ತಾಯಿ-ಮಕ್ಕಳು, ಗಂಡ-ಹೆಂಡತಿ, ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರು ಆದವರಲ್ಲಿ ಇಂಥ ಹೊಂದಾಣಿಕೆ ಇದ್ದೇ ಇರುತ್ತದೆ. ತಂದೆ-ತಾಯಿಗಳ ಕುಟುಂಬದ ಇತರರಿಗೆಲ್ಲ ಇಂಥ ಅಂತಃಕರಣದ ಸೂತ್ರವನ್ನು ಹೆಣೆದಿರುತ್ತಾರೆ. ಈ ಮಾನಸಿಕ ಬಂಧನವು ಇವರೆಲ್ಲ ಒಂದೇ ಆರ್ಥಿಕ ವ್ಯವಸ್ಥೆಗೆ ಒಳಪಟ್ಟಾಗ ಹೆಚ್ಚು ದೃಢವಾಗಿರುತ್ತದೆ. ಗಳಿಸುವ ಕೈಗಳು ಭಿನ್ನವಾದಾಗ ಆರ್ಥಿಕ ವ್ಯವಸ್ಥೆಗೆ ಒಳಪಟ್ಟಾಗ ಹೆಚ್ಚು ದೃಢವಾಗಿರುತ್ತದೆ. ಗಳಿಸುವ ಕೈಗಳು ಭಿನ್ನವಾದಾಗ ಆರ್ಥಿಕವಾಗಿ ಸ್ವತಂತ್ರ ಜೀವನ ಸಾಧ್ಯವಾದಾಗ ಸ್ವಭಾವಭೇದಗಳು ತೀಕ್ಷ್ಣವಿದ್ದಾಗ ಈ ವ್ಯಕ್ತಿಗಳ ಗುಂಪು ಒಂದೇ ಮನೆಯಾಗಿ ಉಳಿಯುವುದು ಕಷ್ಟವಾಗುತ್ತದೆ. ಇಂಥ ಸಂದರ್ಭಗಳಲ್ಲಿ ಒಂದೇ ಸ್ಥಳದಲ್ಲಿ ವಾಸವಾಗಿದ್ದು ತೋರಿಕೆಗೆ ಇಟ್ಟಿಗೆ ಸಿಮೆಂಟುಗಳ ಒಂದು ಮನೆಯಲ್ಲಿದ್ದು ಮನಸ್ಸಿನ ಬಂಧನದ ಮನೆಯನ್ನು ಮುರಿದುಕೊಂಡು ಇರುವುದು ಕ್ಷೇಮವಲ್ಲ. ಪರಸ್ಪರ ಪ್ರೀತಿ-ವಿಶ್ವಾಸಗಳಿಗೆ ಧಕ್ಕೆ ಬರದಂತೆಯೇ, ಮುಂದಿನ ಜೀವನದಲ್ಲಿ ಪರಸ್ಪರರ ಸಹಕಾರಕ್ಕೆ ಧಕ್ಕೆ ಬರದಂತೆಯೇ, ಮನೆಯನ್ನು ಮನೆಗಳನ್ನಾಗಿ ಪರಿವರ್ತಿಸುವ ನೇರ ಮಾರ್ಗವನ್ನು ಅನುಸರಿಸುವದು ಉತ್ತಮ. ಹೀಗೆ ಮನೆ ಮನೆಗಳಾಗುವದು ವೇದನೆಯನ್ನುಂಟು ಮಾಡುವದೇನೋ ನಿಜ, ಆದರೆ ಇದೊಂದು ಅನಿವಾರ್ಯವಾದ ಪ್ರಸವ ವೇದನೆ.

ಹೀಗೆ ಮನೆ ಮನೆಗಳಾಗುವದು ಅಣ್ಣತಮ್ಮಂದಿರಿಗೆ ಮಾತ್ರ ಸೀಮಿತವಾಗುವದು ಉತ್ತಮ. ಅನಿವಾರ್ಯ ಪ್ರಸಂಗಗಳಲ್ಲಿ ತಂದೆ-ಮಕ್ಕಳಿಗೂ ಆಗಬಹುದು. ಆದರೆ ತಾಯಿ-ಮಕ್ಕಳಾಗಲೀ ಗಂಡ-ಹೆಂಡಂದಿರಾಗಲೀ ಮನೆಯನ್ನು ಮನೆಗಳನ್ನಾಗಿ ಮಾಡಿಕೊಂಡರೆ ಅವರು ಮನೆಯೇ ಇಲ್ಲದ ಪರದೇಶಿಗಳಾದಂತೆಯೇ ಸರಿ.

# ಗಂಡಸರೂ ಗರ್ಭಧರಿಸಬಲ್ಲರೇ?

ಎಂ. ಶಿವರಾಮ ಆಚಾರ್

ಇದೇನು ಹುಚ್ಚು ಮಾತು? ಗಂಡಸರು ಎಂದಾದರೂ ಗರ್ಭಧರಿಸುವುದುಂಟೇ? ಎಂದು ನೀವು ಪ್ರಶ್ನಿಸಬಹುದು. ಆದರೆ ಇದು ವಿಜ್ಞಾನಯುಗ. ಅಸಾಧ್ಯವೆನಿಸದುದೂ ಸಾಧ್ಯವೆಂದು ಸಾಧಿಸುವ ಯುಗ. ಜೀವ-ಶಾಸ್ತ್ರದ ಪ್ರಕಾರ ಗರ್ಭಧಾರಣೆಯು ಸ್ತ್ರೀಯ ದೈಹಿಕ ಕಾರ್ಯವಾದರೂ ಗಂಡಸರೂ ಗರ್ಭಧರಿಸುವುದು ಸಾಧ್ಯವಿದೆಯೆಂದು ವಿಜ್ಞಾನಿಗಳಲ್ಲಿ ಕೆಲವರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಆಧಾರವಾಗಿ ಹೆಂಗಸರಲ್ಲಿ ಕೆಲವರು ಗರ್ಭಕೋಶದಲ್ಲಿ ಗರ್ಭಧರಿಸದೆ ಗರ್ಭಕೋಶದ ಹೊರಗೆ ಗರ್ಭಪಿಂಡವು ಬೆಳೆದು ಗರ್ಭಿಣಿಯರಾದುದನ್ನು ಉದಾಹರಿಸುತ್ತಾರೆ. ಕೆಲವು ಬ್ರಿಟಿಶ್ ಸಂಶೋಧಕರ ಪ್ರಕಾರ 1978ರ ಬಳಿಕ, ಗರ್ಭಕೋಶದ ಭಾಗವನ್ನು ಶಸ್ತ್ರಚಿಕಿತ್ಸೆಯ ಮೂಲಕ ಕತ್ತರಿಸಿ ತೆಗೆದ ಬಳಿಕವೂ ಹೆಂಗಸರು ಗರ್ಭಧರಿಸಿದ ಉದಾಹರಣೆಗಳಿವೆ. ನೂರಾರು ವರ್ಷಗಳಿಂದಲೂ ಈ ರೀತಿ ಹೊಟ್ಟೆಯಲ್ಲಿ ಗರ್ಭಕೋಶದ ಹೊರಗೆ ಗರ್ಭ ಬೆಳೆದು ಶಿಶುವಿನ ಪ್ರಸವವಾದ ಅನೇಕ ಸಂದರ್ಭಗಳಿವೆಯೆಂಬುದನ್ನೂ ವಿಜ್ಞಾನಿಗಳು ಸ್ಪಷ್ಟಪಡಿಸಿರುತ್ತಾರೆ. ಇದಕ್ಕೆ ಕಾರಣ ಗರ್ಭಧಾರಣೆಯ ಕಾಲದಲ್ಲಿ ಒಳಪ್ರವೇಶಿಸಿದ ವೀರ್ಯಾಣುಗಳು ಗರ್ಭಕೋಶವನ್ನು ಪ್ರವೇಶಿಸದೆ ತಪ್ಪಿಸಿಕೊಂಡು ಹೊಟ್ಟೆಯ ಇತರ ಭಾಗದಲ್ಲಿ ಗರ್ಭಕಟ್ಟಿ ಬೆಳೆಯಲಾರಂಭಿಸುವುದಾಗಿದೆ. ಸಾಮಾನ್ಯವಾಗಿ ಈ ಭ್ರೂಣವು ತಾಯಿಯ ಆಹಾರನಾಳದ ಜಠರಭಾಗದಲ್ಲಿ ಅಂಟಿಕೊಳ್ಳುತ್ತದೆ. ತನಗೆ ಬೇಕಾದ ಆಹಾರದ ಪೋಷಕಾಂಶವನ್ನು ಅದು ಆಹಾರನಾಳದಲ್ಲಿರುವ ರಕ್ತನಾಳದ ಮೂಲಕ ಹೀರಿಕೊಳ್ಳುತ್ತದೆಯಂತೆ. ಆದರೆ ನೈಸರ್ಗಿಕ ಪ್ರಸವದಂತೆ ಶಿಶುವನ್ನು ಹೆರಲು ಮಾತ್ರ ಸಾಧ್ಯವಿಲ್ಲ. ಇಂಥ ಪ್ರಸಂಗದಲ್ಲಿ ಶಸ್ತ್ರಕ್ರಿಯೆಯಿಂದ ಶಿಶುವನ್ನು ಹೊರತೆಗೆಯಲು ಸಾಧ್ಯ. ಇಂತಹ ಒಂದು ಹೆರಿಗೆಯು ದಕ್ಷಿಣ ಕನ್ನಡ ಜಿಲ್ಲೆಯ ಕಸ್ತೂರಬಾ ಮೆಡಿಕಲ್ ಕಾಲೇಜಿನ ಆಸ್ಪತ್ರೆಯಲ್ಲಿ ನಡೆದಿತ್ತು. ಒಬ್ಬ ಹೆಂಗಸು ಗರ್ಭಕೋಶದಲ್ಲಿ ಗರ್ಭಧರಿಸದೆ ಆಹಾರನಾಳಕ್ಕೆ ಅಂಟಿಕೊಂಡ ಭ್ರೂಣವು ಬೆಳೆದು ಶಿಶುವು ಜನ್ಮತಾಳಿತ್ತು. ಉದರದ ಚಿತ್ರ ಸಹಿತವಾಗಿ ಈ ವಾರ್ತೆಯು 'ಉದಯವಾಣಿ'ಯಲ್ಲಿ ಪ್ರಕಟವಾಗಿತ್ತು.

ಮೇಲಿನ ತತ್ವವನ್ನು ಆಧರಿಸಿ ಗಂಡಸರಲ್ಲಿ ಗರ್ಭಧಾರಣೆ ಸಾಧ್ಯವೆಂದು ವಿಜ್ಞಾನಿಗಳ ಮತ. ಡಾ.ಜೇಶಿಸ್ ಟೆಸ್ಟಾರ್ಟ್ ಎಂಬ ಫ್ರೆಂಚ್ ತಜ್ಞರು ಈ ರೀತಿಯ ಪುನರುತ್ಪಾದ-ನೆಯ ಕುರಿತಾಗಿ ವಿಶೇಷ ಗಮನಹರಿಸಿದ್ದಾರೆ.

ಪುರುಷರಲ್ಲಿ ಗರ್ಭಧಾರಣೆ ಸ್ವಾಭಾವಿಕ ರೀತಿಯಲ್ಲಿ ಜರುಗಲು ಸಾಧ್ಯವಿಲ್ಲ. ಸ್ತ್ರೀಯ ಗರ್ಭದಿಂದ ಫಲಿತವಾದ ಅಂಡವೊಂದನ್ನು ಶಸ್ತ್ರ ಕ್ರಿಯೆಯ ಮೂಲಕ ಬೇರ್ಪಡಿಸಿ, ಗರ್ಭಧಾರಿಯಾಗಲಿಚ್ಛಿಸುವ ಪುರುಷನ ಆಹಾರ ನಾಳಕ್ಕೆ ಜೋಡಿಸಬಹುದೆಂದು ಅವರು ಹೇಳುತ್ತಾರೆ. ಆಗ ಆ ಭ್ರೂಣವು ಅಲ್ಲಿ ಬೆಳೆಯಲಾರಂಭಿಸುತ್ತದೆ. ಸರಿಯಾಗಿ ಬೆಳೆಯಲು ಅದಕ್ಕೆ ಸ್ತ್ರೀಯ ಹಾರ್ಮೋನಿನ ಅಗತ್ಯವಿದೆ. ಅದನ್ನು ಚುಚ್ಚುಮದ್ದಿನ ಮೂಲಕ ಕೊಡಲಾಗುತ್ತದೆ. ಆಗ ಭ್ರೂಣವು ಪ್ರಸವಯೋಗ್ಯ ಶಿಶುವಿನಂತೆ ಬೆಳೆಯಲು ಸಾಧ್ಯವಾಗುವುದು. ಆದರೆ ಆ ಸ್ಥಿತಿಯಲ್ಲಿ ಅದು ಬೆಳೆದು ಶಿಶುವಾಗಿ ಹೊರಬರುವವರೆಗೆ ಸದಾ ಅಪಾಯದಲ್ಲೇ ಇರಬೇಕಾಗುತ್ತದೆ. ಗರ್ಭ

**ಅಂತೂ ಗಂಡಸರೂ ಗರ್ಭ ಧರಿಸಬಲ್ಲರೆಂಬುದು ವಿಜ್ಞಾನವು ಕಂಡುಕೊಂಡ ಒಂದು ವಿಚಿತ್ರ ಸತ್ಯ.**

ಪಿಂಡವು ತನ್ನ ಹೊಕ್ಕಳಬಳ್ಳಿಯ ಮೂಲಕ ಆಹಾರನಾಳದ ರಕ್ತನಾಳದೊಂದಿಗೆ ಬೆಸೆಯಲ್ಪಟ್ಟಿರಬೇಕಾದ್ದು ಅಗತ್ಯ. ತಾಯಿಯ ಗರ್ಭಕೋಶದಲ್ಲಾದರೆ ಇದು ಗರ್ಭಕೋಶದ ಒಳಪದರದಲ್ಲಿ ನೈಜವಾಗಿ ಅಂಟಿಕೊಂಡು ಬೆಳೆಯುತ್ತದೆ. ಅಲ್ಲದೆ ಅದು ಗರ್ಭಸ್ಥ ಶಿಶುವಿನ ಬೆಳವಣಿಗೆಯನ್ನು ಮಿತಿಯಲ್ಲಿರುವಂತೆ ನೋಡಿಕೊಳ್ಳುತ್ತದೆ. ಪುರುಷರ ಉದರದೊಳಗೆ ಸೇರಿಸಲ್ಪಟ್ಟ ಈ ಗರ್ಭಪಿಂಡಕ್ಕೆ ಗರ್ಭಕೋಶದ ಮಿತಿಯಿಲ್ಲದಿರುವುದರಿಂದ ಶಿಶುವು ಭೀಮಾಕಾರವಾಗಿ ಬೆಳೆಯುವ ಸಾಧ್ಯತೆಯಿದೆಯೆಂದೂ ಎನ್ನಲಾಗಿದೆ. ಹೀಗಾದಲ್ಲಿ ಉದರದ ಕರುಳಿನ ಜಾಗವು ಇಕ್ಕಟ್ಟಾಗಿ ಭ್ರೂಣದ ಬೆಳವಣಿಗೆಗೆ ತೊಂದರೆಯಾದಲ್ಲಿ ರಕ್ತಸ್ರಾವವಾಗುವ ಸಾಧ್ಯತೆಯನ್ನೂ ತಳ್ಳಿಹಾಕುವಂತಿಲ್ಲ. ಗರ್ಭಧರಿಸಿದ ತಂದೆಯ ಶರೀರಕ್ಕೆ ತಾಯಿಯ ಹಾರ್ಮೋನನ್ನು ಚುಚ್ಚುಮದ್ದಿನ ಮೂಲಕ ಸೇರಿಸುವುದು ವೈದ್ಯಕೀಯ ದೃಷ್ಟಿಯಿಂದ ಅವಾಂಛಿತವಾಗಿದೆಯೆಂದು ಡಾ. ಟೆಸ್ಪಾರ್ಟ್ ಅಭಿಪ್ರಾಯಪಡುತ್ತಾರೆ. ಹೆಚ್ಚಿನ ಜನರ ಅಭಿಪ್ರಾಯ ಈ ಕೆಲಸ ಬರೇ ಹುಚ್ಚುತನದ್ದಂದಾಗಿದೆ.

ಕೆಲವು ವಿಶೇಷ ಪರಿಸ್ಥಿತಿಗಳಲ್ಲಿ ಪುರುಷ ಗರ್ಭಧಾರಣೆಯು ಪ್ರಯೋಜನಕರವಾಗಬಹುದೆಂದು ಇನ್ನು ಕೆಲವರ ಅಭಿಪ್ರಾಯ.

ದಂಪತಿಗಳಲ್ಲಿ ಪತ್ನಿಯ ಅನಾರೋಗ್ಯದಿಂದಾಗಲಿ ಇತರ ಕಾರಣದಿಂದಾಗಲಿ ಗರ್ಭಧರಿಸಲು ಸಾಧ್ಯವಾಗದಿದ್ದಲ್ಲಿ, ಆ ಸ್ತ್ರೀಯ ರಕ್ಷಣೆಗಾಗಿ, ಸಂತಾನಾಭಿವೃದ್ಧಿಗಾಗಿ ಪತಿಯು ಗರ್ಭಧಾರಣೆ ಮಾಡಿ ಸಹಕರಿಸಿದಲ್ಲಿ ಸಮಸ್ಯೆ ತಂತಾನೆ ಪರಿಹಾರಗೊಳ್ಳುತ್ತದೆ.

ಆದರೆ ಪುರುಷರು ಸ್ತ್ರೀಯರಿಗೆ ಗರ್ಭಧಾರಣೆಯ ಕಾಲದಲ್ಲಿ ಬರುವ ಕೆಲವು ಅಹಿತಕರ ಅಸ್ವಾಸ್ಥ್ಯಗಳನ್ನೂ ಸಹಿಸಬೇಕಾಗಿಬರಬಹುದು. ಉದಾಹರಣೆಗೆ ಗರ್ಭಿಣಿಯಾದಾಗ ಹೆಂಗಸರಿಗೆ ಗರ್ಭಧರಿಸಿದ ಕೆಲವು ತಿಂಗಳಲ್ಲಿ ವಾಂತಿಯಾಗತೊಡಗುವುದು ಸರ್ವೇಸಾಮಾನ್ಯ. ಇದನ್ನು ಗಂಡಸರೂ ಸಹಿಸಬೇಕಾಗಿದೆಯಲ್ಲವೆ? ಇನ್ನು ಗಂಡಸರು ಗರ್ಭ ಧರಿಸಿದಾಗಲೂ ಸ್ತ್ರೀಹಾರ್ಮೋನುಗಳನ್ನು ಶರೀರಕ್ಕೆ ಚುಚ್ಚುಮದ್ದಿನ ಮೂಲಕ ಕೊಡುವುದರಿಂದ ಗಂಡಸಿನಲ್ಲಿ ಸ್ತನಗಳು ಉಬ್ಬುತ್ತವೆ. ಇದನ್ನು ಅಂತಹ ಪುರುಷರು ಸಹಿಸಿಕೊಳ್ಳಬೇಕಾಗಿದೆಯಲ್ಲದೆ ಪ್ರಸವದ ಬಳಿಕ ಶಿಶುವಿಗೆ ಮೊಲೆಯೂಡಿಸಲೂ ಸಿದ್ಧರಿರಬೇಕಾಗಬಹುದು. ಕೆಲವು ವೇಳೆ ಗಂಡಸಿನಲ್ಲಿರುವ ಪುರುಷ ಲಕ್ಷಣಗಳು ಮಾಯವಾಗಿ ಸ್ತ್ರೀಯಾಗಿ ಪರಿವರ್ತನೆ ಹೊಂದಿದರೆ ಪರಿಸ್ಥಿತಿ ವಿಷಮಿಸಲೂಬಹುದು. ●

# ಸಂತಾನ (ಅ)ನಿಯಂತ್ರಣ

*ಎಸ್.ಸಿ.ಶಿವನಂಜಪ್ಪ*

ಸಿದ್ಧಪ್ಪ-ಸಿದ್ಧಮ್ಮ ಅನ್ಯೋನ್ಯ ಪ್ರೀತಿ ಅನುರಾಗಗಳುಳ್ಳ ಯುವದಂಪತಿಗಳು. ಅವರ ಪ್ರೀತಿಯ ದ್ಯೋತಕವಾಗಿಯೋ ಎಂಬಂತೆ ಮದುವೆಯಾದ 5-6 ವರ್ಷಗಳಲ್ಲಿ ನಾಲ್ಕು ಮಕ್ಕಳಾದವು. ಹೀಗಾದರೆ ಹೇಗೆ ಸಂಸಾರ ಮಾಡುವುದು ಎಂಬ ಭಯ ಬಂತು ಸಿದ್ಧಪ್ಪನಿಗೆ. ಆಪರೇಷನ್ ಮಾಡಿಸಿಕೊಳ್ಳಲು ಇಷ್ಟವಿರಲಿಲ್ಲ. (ತನಗಾದರೆ ನಪುಂಸಕತ್ವ ಬರಬಹುದೆಂಬ ಶಂಕೆ, ಪತ್ನಿಗಾದರೆ

ಕೆಲಸ ಮಾಡಲು ತೊಂದರೆಯಾಗಬಹುದೆಂಬ ಅನುಮಾನ.) ಸ್ವಲ್ಪ ದೂರವೇ ಆದರೂ ದೊಡ್ಡದಾದ ಊರಿಗೆ ಹೋಗಿ ಹೆಸರಾಂತ ಫ್ಯಾಮಿಲಿ ಪ್ಲಾನಿಂಗ್‌ನಲ್ಲಿ ನಿಷ್ಣಾತರಾದ ಡಾಕ್ಟರನ್ನು ಕಂಡು ತನ್ನ ಕಷ್ಟ ಹೇಳಿಕೊಂಡ. ಯಥಾಪ್ರಕಾರ ರಿದಂ, ಮೆಥಡ್, ಸೇಫ್ ಪೀರಿಯಡ್..... ಇತ್ಯಾದಿ ವಿಧ ವಿಧ ಉಪಾಯ ತಿಳಿಸಿ, ಐದು ವರ್ಷಗಳ ನಂತರ ಪುನ: ಬಂದು ತಾನು ಸುಖವಾಗಿರುವ ವಿಷಯ ತಿಳಿಸಬೇಕೆಂದು (ತಮ್ಮ ಫೀ ತೆಗೆದುಕೊಂಡು) ಡಾಕ್ಟರರು ಹೇಳಿ ಕಳುಹಿಸಿದರು.

5 ವರ್ಷಗಳ ನಂತರ ಸಿದ್ಧಪ್ಪ ಗೋಳಾಡಿಕೊಂಡು ಬಂದು, ''ಡಾಕ್ಟರೇ ನಾನು ನಿರ್ನಾಮವಾದೆ,'' ಎಂದು ಅತ್ತುಬಿಟ್ಟ. ''ನಾನು ಹೇಳಿದ ರೀತಿ ನಡೆದುಕೊಳ್ಳಲಿಲ್ಲವೇ ?'' ಎಂದು ಪ್ರಶ್ನಿಸಿದರು. ''ಸ್ವಾಮಿ, ತಾವು ಹೇಳಿ ಕೊಟ್ಟಿದ್ದ ಮೊದಲನೆಯ ಉಪಾಯದಂತೆ ನಡೆದುಕೊಂಡೆ; ಒಂದು ವರ್ಷದಲ್ಲಿ ಐದನೆಯ ಮಗು ಆಯಿತು. ಎರಡನೆಯ ಉಪಾಯವೂ ಫಲಕಾರಿಯಾಗಲಿಲ್ಲ; ಮತ್ತೊಂದು ವರ್ಷದಲ್ಲಿ ಆರನೆಯ ಮಗು ಆಯಿತು. ಮೂರನೆಯ ಉಪಾಯದಂತೆ ನಡೆದುಕೊಂಡಾಗಲೂ ಒಂದೂವರೆ ವರ್ಷದಲ್ಲಿ ಏಳನೆಯ ಮಗು. ''ಏನು ಮಾಡಲಿ ದೇವ್ರೇ? '' ಎಂದು ಹಲುಬಿದ. ಡಾಕ್ಟರಿಗೆ ಅರ್ಥವೇ ಆಗಲಿಲ್ಲ. ಆದರೂ ಕೊನೆಯ ಪ್ರಯತ್ನವಾಗಿ, ''ನೋಡಪ್ಪಾ, ನಿಮ್ಮಿಬ್ಬರಲ್ಲಿ ಯಾವುದೋ ಕಾಣದ ಶಕ್ತಿ ಕೆಲಸ ಮಾಡುತ್ತಿರುವ ಹಾಗೆ ಕಾಣುತ್ತೆ. ಆದ್ದರಿಂದ ಸ್ವಲ್ಪ ಕಷ್ಟವಾದರೂ ನೀವಿಬ್ಬರು ಬೇರೆ ಬೇರೆ ಕೋಣೆಯಲ್ಲಿ ಮಲಗಿ,'' ಎಂದು ಬುದ್ಧಿವಾದ ಹೇಳಿದರು.

ಎರಡು ವರ್ಷಗಳ ನಂತರ ಜೋಲು ಮುಖ ಹಾಕಿಕೊಂಡು ಪುನ:-ಸಿದ್ಧಪ್ಪ ಹಾಜರಾದ. ಡಾಕ್ಟರಿಗೆ ಕಸಿವಿಸಿಯಾಯಿತು. ''ನಾನು ಹೇಳಿದಹಾಗೆ ನಡೆದುಕೊಳ್ಳುತ್ತಿದ್ದೀರಾ ?'' ಎಂದು ಪ್ರಶ್ನಿಸಿದರು, ''ಡಾಕ್ಟ್ರೇ, ಆ ರೀತಿಯೂ ಮಾಡಿಯಾಯಿತು. ನಿನ್ನೆ ಎಂಟನೆಯ ಮಗು.......'' ಎಂದು ಗೋಳಿಟ್ಟ.

-ಬಿ.ಜನಾರ್ದನ ಭಟ್ಟ

# ಹತ್ತು ಗೂಳಿಗಳು

ತತ್ತ್ವವನ್ನು ಹೇಳಲು ಕಾವ್ಯವನ್ನು ಉಪಯೋಗಿಸಿಕೊಂಡಾಗ ಅದು ಕಾವ್ಯವಾಗಿಯೂ ಗೆಲ್ಲುವುದು ಕಡಿಮೆ. ಆದರೆ ಶ್ರೇಷ್ಠ ಸಾಹಿತ್ಯದಲ್ಲಿ ತಾತ್ವಿಕ ಇರುತ್ತದೆ. ಅದು ತತ್ವ ಹೇಳುವುದೇ ಉದ್ದೇಶವಾಗಿ ಬರುವಂಥದ್ದಲ್ಲ, ಒಂದು ಸಂದರ್ಭದಲ್ಲಿ ಸಹಜವಾಗಿ ಹೂ ಅರಳಿದಂತೆ ಮೂಡಿ ಬರುವಂಥದ್ದು. ಅಪರೂಪಕ್ಕೆ ಕೆಲವು ತಾತ್ವಿಕತೆ ಚಿಂತನೆಗಳು ಶ್ರೇಷ್ಠ ಸಾಹಿತ್ಯವಾಗಿಯೂ ಮಾನ್ಯವಾಗುತ್ತವೆ. ಕಕುಆನ್ ಎಂಬ ಚೀನಿ ಝೆನ್ ದಾರ್ಶನಿಕನ 'ಹತ್ತು ಗೂಳಿಗಳು' ಎಂಬ ಕೃತಿ ಈ ಸಾಲಿಗೆ ಸೇರಿದ್ದು. ಈ ಹಂತದಲ್ಲಿ ಅದರ ಬಗ್ಗೆ ಯಾವುದೇ ಪರಿಚಯ ಮಾಡಿಕೊಳ್ಳದೆ ನೇರವಾಗಿ ಅದರ ಪದ್ಯ ಗದ್ಯಗಳನ್ನು ಓದೋಣ:

## 1 ಗೂಳಿಗಾಗಿ ಹುಡುಕಾಟ

ಗೂಳಿಯನ್ನು ಹುಡುಕುವೆ ಈ ಜಗದ ಗೋಮಾಳದಲ್ಲಿ ಎತ್ತರದ ಹುಲ್ಲನ್ನಾಚೀಚೆ ಸರಿಸುತ್ತ

ದೂರ ಬೆಟ್ಟಗಳ ಅಡ್ಡಾದಿಡ್ಡಿ ದಾರಿಗಳಲ್ಲಿ ಕಳೆದುಹೋಗುತ್ತ ಹೆಸರಿಲ್ಲದ ನದಿಗಳ ಹಿಂಬಾಲಿಸುತ್ತ

ಶಕ್ತಿಗುಂದಿ ಹೋಗಿ ಚೈತನ್ಯ ಉಡುಗಿ ಹೋದರೂ ಗೂಳಿ ಸಿಕ್ಕುವುದಿಲ್ಲ

ನೀರವ ರಾತ್ರಿಗಳಲ್ಲಿ ಮಿಡತೆಗಳು ಜೀರಿಡುವುದು ಮಾತ್ರ ಕೇಳಿಸುವದೆನಗೆ.

ಟಿಪ್ಪಣಿ:- ಗೂಳಿ ಕಳೆದುಹೋಗಿದೆ. ಹುಡುಕುವ ಅಗತ್ಯವಾದರೂ ಏನು? ನನ್ನ ನಿಜವಾದ ಗುಣಧರ್ಮದಿಂದ ದೂರವಾದ್ದರಿಂದಲೇ ಅದನ್ನು ಹುಡುಕಲು ವಿಫಲನಾಗಿರುತ್ತೇನೆ. ಇಂದ್ರಿಯಗಳ ಗೊಂದಲದಲ್ಲಿ ಅದರ ಜಾಡು ಕೂಡ ತಿಳಿಯದಾಗಿದೆ. ಮನೆಯಿಂದ ದೂರವಾಗಿ ಅನೇಕ ಪರಸ್ಪರ ವ್ಯಾಪ್ತ ಅಡ್ಡಾದಿಡ್ಡಿ ದಾರಿಗಳನ್ನು ನೋಡುವೆನು. ಆದರೆ ಯಾವುದು ಸರಿದಾರಿಯೆಂದು ತಿಳಿಯದಾಗಿದೆ. ಆಸೆ, ಭಯ, ಒಳ್ಳೆಯದು, ಕೆಟ್ಟದ್ದು ನನ್ನನ್ನು ಸುತ್ತುವರಿದಿವೆ.

**ಒಂದು ಝೆನ್ ಕೃತಿಯ ಪರಿಚಯ**

2 ಹೆಜ್ಜೆ ಗುರುತುಗಳನ್ನು ಕಾಣುವುದು

ಮರಗಳ ಕೆಳಗೆ ನದಿ ದಂಡೆಯುದ್ದಕ್ಕೆ ಹೆಜ್ಜೆ ಗುರುತುಗಳನ್ನು ಕಂಡುಹಿಡಿವೆ.

ಪರಿಮಳದ ಹುಲ್ಲ ಕೆಳಗೂ ಗೂಳಿಯ ಗುರುತು ಕಾಣುವೆ

ಆಳದಲ್ಲಿ ದೂರ ಬೆಟ್ಟಗಳಲ್ಲೂ ಅವು ಕಂಡುಬರುತ್ತವೆ. ಮೂಗಿನಂತೆ ಸ್ವರ್ಗದತ್ತ ನೋಡುವ ಈ ಗುರುತುಗಳನ್ನು ಅಡಗಿಸಲಾಗದು.

ಟಿಪ್ಪಣಿ:- ಬೋಧನೆಯನ್ನು ಅರ್ಥಮಾಡಿಕೊಂಡು ನಾನು ಗೂಳಿಯ ಹೆಜ್ಜೆ ಗುರುತುಗಳನ್ನು ಕಾಣುವೆನು. ಆಗ, ಒಂದು ಲೋಹದಿಂದ ಅನೇಕ ಪಾತ್ರೆಗಳನ್ನು ಮಾಡುವಂತೆಯೇ ಆತ್ಮದ ರಚನಾ ವಿನ್ಯಾಸದಿಂದ ಅಸಂಖ್ಯಾತ ರೂಪಗಳನ್ನು ಮಾಡಬಹುದೆಂದು ತಿಳಿಯುವೆನು. ಭೇದ ವಿವೇಚಿಸದೆ ನಾನು ಅಸತ್ಯದಿಂದ ಸತ್ಯವನ್ನು ಹೇಗೆ ಗ್ರಹಿಸುವೆನು? ದ್ವಾರವನ್ನು ಪ್ರವೇಶಿಸದಿದ್ದರೂ ದಾರಿಯನ್ನು ಅರಿಸಿರುವೆನು.

3 ಗೂಳಿಯನ್ನು ಕಾಣುವುದು

ಕೋಗಿಲೆಯ ಗಾನವನ್ನು ಕೇಳುವೆನು

ಸೂರ್ಯ ಬೆಚ್ಚಗೆ, ಗಾಳಿ ಮೆತ್ತಗೆ, ದಡದುದ್ದಕ್ಕೆ ಬಳ್ಳಿಗಳು ಹಸಿರಾಗಿ

ಇವೆ, ಇಲ್ಲಿ ಯಾವ ಗೂಳಿಯೂ ಅಡಗಿಕೊಳ್ಳಲಾರದು,

ಯಾವ ಕಲಾವಿದ ತಾನೆ ಆ ಭಾರೀ ತಲೆ ಆ ಠೀವಿಯ ಕೊಂಬುಗಳ ಚಿತ್ರಿಸಬಲ್ಲನು?

ಟಿಪ್ಪಣಿ:- ನಮಗೆ ಧ್ವನಿಯೇನಾದರೂ ಕೇಳಿದರೆ ಅದರ ಮೂಲವನ್ನು ಗ್ರಹಿಸಬಹುದು. ಐದು ಇಂದ್ರಿಯಗಳೂ ಏಕಿಭವಿಸಿದಾಗ ದ್ವಾರದೊಳಗೆ ಪ್ರವೇಶಿಸಿ ಆಗಿರುತ್ತದೆ. ಎಲ್ಲಿ ಹೊಕ್ಕರೂ ಗೂಳಿಯ ತಲೆ ಕಾಣಿಸುವುದು. ಈ ಐಕ್ಯ ನೀರಿನಲ್ಲಿ ಉಪ್ಪಿನಂತೆ ವರ್ಣದ್ರವ್ಯದೊಳಗೆ ಬಣ್ಣದಂತೆ ಇರುವುದು. ಸೂಕ್ಷ್ಮಾತಿಸೂಕ್ಷ್ಮ ವಸ್ತುವೂ ಆತ್ಮದಿಂದ ಬೇರೆಯಲ್ಲ.

4 ಗೂಳಿಯನ್ನು ಹಿಡಿಯುವುದು

ಭಯಂಕರ ಹೋರಾಟದಲ್ಲವನ ಹಿಡಿಯುವೆನು

ಅವನ ಆತ್ಮಬಲ ದೇಹಬಲಗಳಗಾಧ ಅಕ್ಷಯ ಮೋಡಪನಿಗಳಿಗಿಂತೆತ್ತರದ ಪೀಠಭೂಮಿಗಳಿಗೂ ನುಗ್ಗುವನು

ಅಭೇದ್ಯ ಕಣಿವೆಯೊಳಹೊಕ್ಕು ನಿಲ್ಲುವನು

ಟಿಪ್ಪಣಿ:- ತುಂಬ ಸಮಯ ಅವನು ಕಾಡಿನಲ್ಲಿದ್ದನು. ಈವತ್ತು ಅವನನ್ನು ಹಿಡಿದೆನು. ದೃಶ್ಯಾವಳಿಗೆ ಸೋಲುವ ಮನ ಅವನ ದಿಕ್ಕು ತಪ್ಪಿಸುತ್ತದೆ. ಹೆಚ್ಚು ಸಿಹಿಯ ಹುಲ್ಲಿಗೆ ಹಾರೈಸಿ ಅಲೆದಾಡುವನು. ಅವನ ಮನ ಇನ್ನೂ ಲಂಗುಲಗಾಮಿಲ್ಲದ್ದು, ತಿದ್ದಲಾಗದ್ದು. ಅವನು ನನಗೆ ಮಣಿಯಬೇಕೆಂದರೆ ನಾನು ಚಾಟಿ ಎತ್ತಲೇಬೇಕು.

5 ಗೂಳಿಯನ್ನು ಪಳಗಿಸುವುದು

ಚಾಟಿ ಮತ್ತು ಹಗ್ಗ ಅಗತ್ಯ ಬೇಕವನಿಗೆ ಇಲ್ಲದಿದ್ದರೆ ಯಾವುದೋ ಧೂಳದಾರಿಯುದ್ದ ಅಂಡಲೆಯಬಹುದು

ಚೆನ್ನಾಗಿ ಪಳಗಿಸಿದಾಗ ಸಹಜವಾಗಿ ಮೃದುವಾಗುವನು

ನಂತರ ಹಗ್ಗ ಬಿಚ್ಚಿದರೂ ಒಡೆಯನನ್ನು ಸರಿಸುವನು.

6 ಗೂಳಿಯನ್ನು ಮನೆಗೆ ತರುವುದು

ಗೂಳಿಯನ್ನು ಹತ್ತಿ ನಿಧಾನವಾಗಿ ಮನೆಯತ್ತ ಮರಳುವೆ ನನ್ನ ಕೊಳಲಿನುಲಿ ಸಂಜೆಯೆಲ್ಲ ಆಲಾಪಿಸುತ್ತದೆ

ರಾಗಕ್ಕೆ ತಕ್ಕ ತಾಳ ಹಾಕಿ ಲಯಬದ್ಧವಾಗಿ ನುಡಿಸುವೆ

ಈ ಸಂಗೀತನಾದ ಕೇಳಿದವರೆಲ್ಲ ಸೇರಿಕೊಳ್ಳುವರು.

ಟಿಪ್ಪಣಿ:- ಈ ಹೋರಾಟ ಮುಗಿದಿದೆ. ಲಾಭ ನಷ್ಟವೆಲ್ಲ ಸಮವಾಗಿದೆ. ನಾನು ಹಳ್ಳಿಯ ಸೌದೆ ಕಡಿಯುವವರ ಹಾಡು ಹಾಡುವೆನು. ಮಕ್ಕಳರಾಗ ನುಡಿಸುವೆನು. ಗೂಳಿಯ ಮೇಲೆ ಕುಳಿತು ಮೇಲೆ ಮೋಡಗಳನ್ನು ಗಮನಿಸುವೆನು. ಯಾರು ನನ್ನನ್ನು ಹಿಂದೆ ಕರೆಯಲು ಬಯಸಿದರೂ ಮುಂದೆ ಮುಂದೆ ಹೋಗುತ್ತಲೇ ಇರುವೆನು.

7 ಗೂಳಿ ಅತೀತವಾಗಿದೆ

ಗೂಳಿಯ ಮೇಲೆ ಸವಾರಿ ಮಾಡುತ್ತಾ ಮನೆ ತಲುಪುವೆ

ನಾನು ಶಾಂತವಾಗಿರುವೆ. ಗೂಳಿ ಸಹ ವಿರಮಿಸಿದೆ.

ಮುಂಜಾವು ಮೂಡಿದೆ ಪರಮ ಸುಖದ ವಿಶ್ರಾಂತಿಯಲ್ಲಿ

ನನ್ನ ಮುಳಿಮಾಡಿನ ಮನೆಯಲ್ಲಿ ಹಗ್ಗ ಚಾಟಗಳ ತೊರೆದಿರುವೆ.

ಟಿಪ್ಪಣಿ:- ಎಲ್ಲವೂ ಒಂದು ನಿಯಮ; ಎರಡಲ್ಲ. ನಾವು ಗೂಳಿಯನ್ನೊಂದು ತಾತ್ಕಾಲಿಕ ವಿಷಯವನ್ನಾಗಿ ಮಾಡುತ್ತೇವೆ ಅಷ್ಟೆ. ಅದು ಮೊಲ ಮತ್ತು ಬೋನುಗಳ, ಮೀನು ಮತ್ತು ಬಲೆಗಳ ಸಂಬಂಧದಂತೆ. ಅದು ಬಂಗಾರ ಮತ್ತು ಮಂಡೂರದಂತೆ, ಅಥವಾ ಮೋಡಗಳೆಡೆಯಿಂದ ತೂರಿಬರುವ ಚಂದಿರನಂತೆ. ಸ್ಪಷ್ಟ ಬೆಳಕಿನ ದಾರಿಯೊಂದು ಅನಂತ ಕಾಲದುದ್ದಕ್ಕೆ ಪಯಣಿಸುತ್ತದೆ.

8 ಗೂಳಿ ಮತ್ತು ತಾನು ಎರಡೂ ಅತೀತವಾಗಿವೆ

ಚಾಟ, ಹಗ್ಗ, ವ್ಯಕ್ತಿ ಮತ್ತು ಗೂಳಿ ಎಲ್ಲ ಒಂದಾಗುವುದು ಶೂನ್ಯದಲ್ಲಿ

ಈ ಸ್ವರ್ಗ ವಿಶಾಲ ಯಾವ ಸಂದೇಶವೂ ಕಲೆ ಮಾಡದಷ್ಟು

ಭರ್ರನೆ ಉರಿಯುವ ಬೆಂಕಿಯಲ್ಲಿ ಹೇಗೆ ಉಳಿದೀತು ಮಂಜಿನ ಹಲ್ಲೆ?



"ನಾನು ಕಲಾರಾಧಕ ಕಣ್ರೀ."

ಇಲ್ಲಿ ಧರ್ಮ ಕುಲಪತಿಗಳ ಹೆಜ್ಜೆ ಗುರುತಿದೆ.

ಟಿಪ್ಪಣಿ:- ಸಾಮಾನ್ಯತೆ ಈಗಿಲ್ಲ. ಮನಸ್ಸು ಮಿತಿಗೊಳಪಟ್ಟಿಲ್ಲ. ನಾನು ಜ್ಞಾನೋದಯದ ಸ್ಥಿತಿಯನ್ನು ಹುಡುಕುತ್ತಿಲ್ಲ. ಜ್ಞಾನೋದಯ ಇಲ್ಲದಲ್ಲಿಯೂ ನಾನುಳಿದಿಲ್ಲ. ನಾನು ಯಾವ ಸ್ಥಿತಿಯಲ್ಲೂ ಕಾಲ ಹಾಕುತ್ತಿಲ್ಲ. ನನ್ನ ದಾರಿಯಲ್ಲಿ ನೂರಾರು ಹಕ್ಕಿಗಳೂ ಹೂ ಚೆಲ್ಲಿ ಸಿಂಗರಿಸಿದರೂ ಅಂತ ಹೊಗಳಿಕೆ ಅರ್ಥವಿಲ್ಲದ್ದಾಗುತ್ತದೆ.

9 ಮೂಲವನ್ನು ತಲುಪುವುದು

ಬೇರಿಗೂ ಮೂಲಕ್ಕೂ ಹಿಂದಿರುಗುತ್ತ ಅನೇಕ ಹೆಜ್ಜೆಗಳನ್ನಿಟ್ಟಾಗಿದೆ

ಮೊದಲಿನಿಂದಲೂ ಕುರುಡಾಗಿ ಕಿವುಡಾಗಿರುವುದೊಳಿತು,

ಹೊರಗಿರುವುದು ಗಮನಿಸದೆ ತನ್ನ ನಿಜ ನೆಲೆಯಲ್ಲಿರುತ್ತ

ನದಿ ಪ್ರಶಾಂತವಾಗಿ ಹರಿಯುತ್ತಿದೆ, ಹೂಗಳು ಕೆಂಪಾಗಿವೆ.

**ಟಿಪ್ಪಣಿ:-** ಮೊದಲಿನಿಂಗಲೂ ಸತ್ಯ ಸ್ಪಷ್ಟವಾಗಿದೆ. ಮೌನದಲ್ಲಿ ಸಮಸ್ಥಾಯಿಯಾಗಿ ನಿಂತು ಸಮಗ್ರತೆ ಅಸಮಗ್ರತೆಯ ರೂಪಗಳನ್ನು ಗಮನಿಸುತ್ತೇನೆ. 'ರಚನೆ'ಗೆ ಅಂಟಿಕೊಳ್ಳದವನಿಗೆ 'ಪುನಾರಾಚನೆ'ಯ ಅಗತ್ಯವಿಲ್ಲ. ನೀರು ಪಚ್ಚೆಯಾಗಿದೆ, ಬೆಟ್ಟ ನೀಲಯಾಗಿದೆ. ಮತ್ತು ನಾನು, ಯಾವುದು ಸೃಷ್ಟಿಸುವುದೋ, ಅದನ್ನು ಯಾವುದು ಲಯಮಾಡುವುದೋ ಅದನ್ನು ನೋಡುತ್ತೇನೆ.

**10 ಜಗತ್ತಿನಲ್ಲಿ**

ಬರಿಗಾಲಲ್ಲಿ ಬರಿ ಎದೆಯಲ್ಲಿ ಈ ಜಗದ ಜನರೊಡನೆ ಬೆರೆಯುವೆ

ನನ್ನ ಬಟ್ಟೆಗಳು ಹರಿದಿವೆ ಧೂಳಾಗಿವೆ ಮತ್ತು ನಾನು ಖುಷಿಯಾಗಿರುವೆ

ನನ್ನ ಜೀವನವನ್ನು ವಿಸ್ತರಿಸಲು ಯಾವ ಮಂತ್ರವನ್ನೂ ಮಾಡುತ್ತಿಲ್ಲ

ಈಗ ನನ್ನೆದುರಿಗೆ ಮರಗಳು ಜೀವಂತವಾಗುತ್ತವೆ.

**ಟಿಪ್ಪಣಿ:-** ನನ್ನ ದ್ವಾರದೊಳಗೆ ಸಾವಿರ ಸಂನ್ಯಾಸಿಗಳೂ ನನ್ನನ್ನು ತಿಳಿಯುವುದಿಲ್ಲ. ನನ್ನ ತೋಟದ ಸೌಂದರ್ಯ ಅದೃಶ್ಯವಾಗಿದೆ. ಧರ್ಮಕುಲಪತಿಗಳ ಹೆಜ್ಜೆಗುರುತಿಗಾಗಿ ನಾವು ಯಾಕೆ ಹುಡುಕಬೇಕು? ನಾನು ವೈನ್ ಬಾಟಲಿ ಹಿಡಿದುಕೊಂಡು ಮಾರುಕಟ್ಟೆಗೆ ಹೋಗುವೆನು ಮತ್ತು ನನ್ನ ದೊಣ್ಣೆಯೊಂದಿಗೆ ಮನೆಗೆ ಮರಳುವೆನು. ನಾನು ವೈನ್ ಶಾಪ್ ಮತ್ತು ಮಾರುಕಟ್ಟೆಗಳಿಗೆ ಭೇಟಿಕೊಡುವೆನು. ಮತ್ತು ನಾನು ಯಾರನ್ನು ನೋಡಿದರೂ ಅವರಿಗೆ ಜ್ಞಾನೋದಯವಾಗುತ್ತದೆ.

-- 2 --

ಮೇಲಿನ ಟಿಪ್ಪಣಿಗಳು ಪದ್ಯದ ಬಗ್ಗೆ ಇರುವುದಕ್ಕಿಂತ ಪದ್ಯಕ್ಕೆ ಪೂರಕವಾಗಿ ಇವೆ. ಪದ್ಯಕ್ಕೂ ಟಿಪ್ಪಣಿಗೂ ಯಾವುದೇ ನೇರ ಸಂಬಂಧವಿಲ್ಲದೆ ಟಿಪ್ಪಣಿಗಳು ಪದ್ಯಗಳ ಮುಂದರಿಕೆಯಂತಿವೆ. ಗಮನಿಸಬೇಕಾದ ಇನ್ನೊಂದು ವಿಷಯವೆಂದರೆ ಟಿಪ್ಪಣಿಗಳು ಪದ್ಯದ ಸಾಲುಗಳಷ್ಟೆ ಕಾವ್ಯಮಯವಾಗಿವೆ ಅಥವಾ (ನನ್ನ ಅನುವಾದದ ಮಿತಿಯಲ್ಲಿ) ಪದ್ಯಗಳು ಟಿಪ್ಪಣಿಗಳಂತೆಯೇ ಗದ್ಯಲಯದಲ್ಲಿವೆ. ಆದ್ದರಿಂದ ಇವೆಲ್ಲವನ್ನೂ ಒಟ್ಟಿಗೆ (ಒಂದು ಸಮಗ್ರ ಕೃತಿಯಂತೆ) ಓದುವುದು ಸೂಕ್ತ.

ಹತ್ತು ಗೂಳಿಗಳ ಬಗ್ಗೆ ಹೆಚ್ಚು ಯೋಚಿಸುವ ಮೊದಲೇ ಇಷ್ಟು ತಿಳಿಯುವುದು: ನಿರೂಪಕನ ಒಂದು ಗೂಳಿ ಕಳೆದುಹೋಗಿದೆ. ಅವನು ಅದನ್ನು ಹುಡುಕಲು ಹೋಗುತ್ತಾನೆ. ಗೂಳಿ ಸಿಕ್ಕುತ್ತದೆ. ಅವನು ಅದನ್ನು ಮನೆಗೆ ತರುತ್ತಾನೆ. ಇದರ ಅರ್ಥ ಇಷ್ಟೇ ಅಲ್ಲ ಅಂತ ಕೂಡ ತಿಳಿಯುತ್ತದೆ. ಈ ಮೇಲ್ನೋಟದ ವಿಷಯಕ್ಕಿಂತಲೂ ಗೂಳಿ ಒಂದು ಸಂಕೇತವಾಗಿ ಬಂದಿರಬಹುದೆಂದು ನಮಗೆ ಅನಿಸುತ್ತಾ ಹೋಗುವುದು. ಒಟ್ಟಾರೆ ಇದರಲ್ಲಿ ನಿರೂಪಕ ಯಾವುದನ್ನೋ ಹುಡುಕುತ್ತ ಅದನ್ನು ಪಡೆದು ಒಂದು ಬಗೆಯ ತೃಪ್ತ, ಶಾಂತ ಸ್ಥಿತಿಯನ್ನು ತಲುಪುತ್ತಾನೆ ಅನ್ನುವುದು ಮೊದಲ ಓದಿನಿಂದ ತಿಳಿದುಕೊಳ್ಳಬಹುದಾದ ಸಂಗತಿ.

ಏಳನೇ ಭಾಗದ ಟಿಪ್ಪಣಿಯಲ್ಲಿ ಒಂದು ವಾಕ್ಯ ಇದೆ.: "ನಾವು ಗೂಳಿಯನ್ನೊಂದು ತಾತ್ಕಾಲಿಕ ವಿಷಯವನ್ನಾಗಿ ಮಾಡುತ್ತೇವೆ ಅಷ್ಟೆ" ಅಂತ. ಇದರಿಂದ ನಿರೂಪಕನ ಉದ್ದೇಶ ಗೂಳಿಯ ಬಗ್ಗೆ ಬರೆಯುವುದಲ್ಲ ಎಂದು ಊಹಿಸಬಹುದು. ಯಾವುದೋ ಒಂದು ವಿಷಯವನ್ನು ಗ್ರಹಿಸಲು ಅಥವಾ ತಿಳಿಸಲು ಅದನ್ನೊಂದು ಬಲೆಯಂತೆ ಅಥವಾ ಬೋನಿನಂತೆ ಉಪಯೋಗಿಸಿಕೊಳ್ಳಲಾಗಿದೆ. ಎಂಟನೇ ಭಾಗದಲ್ಲಿ ನಿರೂಪಕ, "ನಾನು ಜ್ಞಾನೋದಯದ ಸ್ಥಿತಿಯನ್ನು ಹುಡುಕು

ತ್ತಿಲ್ಲ. ಜ್ಞಾನೋದಯ ಇಲ್ಲದಲ್ಲಿಯೂ ನಾನುಳಿದಿಲ್ಲ,'' ಎಂದು ಹೇಳುತ್ತಾನೆ. ಅವನು ಹುಡುಕುತ್ತಿದ್ದ 'ಗೂಳಿ' ಜ್ಞಾನೋದಯ ಆಗಿರಬಹುದೆ? ಎಂಬ ಸೂಚನೆ ಇಲ್ಲಿ ಸಿಕ್ಕುತ್ತದೆ. ಗೂಳಿ ಅದಮ್ಯ ಶಕ್ತಿ ಮತ್ತು ವೀರ್ಯವಂತಿಕೆಗೆ ಪ್ರತೀಕವಾಗಿದೆ. ಅದನ್ನು ಪಳಗಿಸಿದಾಗ ಮನುಷ್ಯನ ಅಹಂಕಾರಕ್ಕೆ ತೃಪ್ತಿ ಸಿಗುವುದು. ಹಾಗಾಗಿ ಇಲ್ಲಿ ಗೂಳಿಯನ್ನು ಸಂಕೇತವಾಗಿ ಬಳಸಿಕೊಂಡಿರಬಹುದು.

ಜಾಗರೂಕತೆಯಿಂದ ಓದಿದರೆ ನಮಗೆ ಹತ್ತು ಗೂಳಿಗಳು, ಅರಿವಿನ ವಿವಿಧ ಮಜಲುಗಳ ಸಾಂಕೇತಿಕ ಅಭಿವ್ಯಕ್ತಿ ಅನಿಸುತ್ತದೆ. ಏನೋ (ಇಲ್ಲಿ ವಾಚ್ಯಾರ್ಥದಲ್ಲಿ ಗೂಳಿ) ಕಳೆದುಹೋಗಿದೆ ಎಂಬ ಮೊದಲನೆ ಭಾಗದಲ್ಲಿರುವಂಥ ಅರಿವು ಯಾವುದೇ ಅರಸುವಿಕೆಗೆ ಮೂಲವಾಗುತ್ತದೆ. ಜ್ಞಾನಬೇಕು ಎಂಬ ಹಂಬಲವಿಲ್ಲದಿದ್ದರೆ ಜ್ಞಾನೋದಯದ ಕಡೆಗೆ ಸಾಗುವುದೂ ಸಾಧ್ಯವಿಲ್ಲ. ಈಗ ನಿರೂಪಕನಿಗೆ ಇಂದ್ರಿಯಗಳ ಗೊಂದಲವಿದೆ. ಹುಡುಕುವ ಅಗತ್ಯವಾದರೂ ಏನು? ಎಂಬ ಜಿಜ್ಞಾಸೆಯನ್ನು ಗೆದ್ದು ಇಂದ್ರಿಯಗಳನ್ನು ಸೂಕ್ಷ್ಮ ಮಾಡಿಕೊಂಡು ಗೂಳಿಯನ್ನು ಪತ್ತೆ ಹಚ್ಚುತ್ತಾನೆ. (ಭಾಗ ಎರಡು ಮತ್ತು ಮೂರು)

ಬೋಧನೆಗಳು ಅರ್ಥವಾದರೆ ಜ್ಞಾನದ ಕಡೆಗೆ ಸಾಗಲು ಹೆಜ್ಜೆಗುರುತುಗಳು ಸಿಕ್ಕಂತೆ (ಭಾಗ ಎರಡು ಟಿಪ್ಪಣಿ) ಅರ್ಥ ಮಾಡಿಕೊಳ್ಳುವುದರಿಂದ ಸಂತೋಷ ಇರುವಂತೆ ಸ್ವಲ್ಪ ಅಜಾಗ್ರತೆಯಿಂದ ದಿಕ್ಕು ತಪ್ಪುವ (ಉದಾಹರಣೆಗೆ ಅಹಂಕಾರ ಬರುವ) ಅಪಾಯವಿದೆ. (ದೃಶ್ಯಾವಳಿಗೆ ಸೋಲುವ ಮನ ಅವನ ದಿಕ್ಕು ತಪ್ಪಿಸುತ್ತದೆ

ಟಿಪ್ಪಣಿ:- (4) ನಿಜವಾಗಿ ಅರ್ಥವಾಗಲಾರಂಭಿಸಿದರೆ ಮನಸ್ಸಿಗೆ ಕಡಿವಾಣದ ಅಗತ್ಯವಿರುವುದಿಲ್ಲ. ಆಗ ಭ್ರಮೆ ಉಂಟಾಗುವುದಿಲ್ಲ.

ಆರನೆ ಮತ್ತು ಏಳನೆ ಭಾಗಗಳಲ್ಲಿ ನಿರೂಪಕನಿಗೆ ಜ್ಞಾನೋದಯ ಆಗಿದೆಯೆಂಬ ಅಹಂಕಾರ ಇದೆ ಅನಿಸುತ್ತದೆ. ತಾನು ಬಹಳ ಸರಳವಾಗಿರುವೆನೆಂಬ ಕಲ್ಪನೆಯ ಜತೆ ( ಆ ಕಲ್ಪನೆಯೂ ಅಹಂಕಾರವೇ) ಜನರನ್ನು ಗಮನಿಸದೆ ಆಕಾಶದ ಮೋಡಗಳನ್ನು ಗಮನಿಸುವ, ಯಾರು ಅವನನ್ನು ಕರೆಯಲು ಬಯಸಿದರೂ ಮುಂದೆ ಮುಂದೆ ಹೋಗುತ್ತಲೇ ಇರುವ ತಲೆಎತ್ತರಿಕೆ ಇದೆ. ತನ್ನ ಗುರಿಸಾಧನೆ ಆಯಿತು ಎನ್ನುವ ಹೆಮ್ಮೆಯಿಂದ ವಿಶ್ರಾಂತಿ ಪಡೆಯುತ್ತಾನೆ. ಜ್ಞಾನವನ್ನು ಹುಡುಕಿ ಅದನ್ನು ಪಳಗಿಸಿದೆ, ಹೊಂದಿದೆ ಎಂಬ ಅಹಂಕಾರ ಇರುವಷ್ಟು ಸಮಯ ಮನಸ್ಸು ಮಿತಿಗೊಳಪಡುತ್ತದೆ. ಎಂಟನೆ ಭಾಗದಲ್ಲಿ ನಿರೂಪಕ ಆ ಮಿತಿಯನ್ನು ಮೀರಿ ನಿಜವಾದ ಜ್ಞಾನೋದಿತ ಸ್ಥಿತಿಯಲ್ಲಿರುತ್ತಾನೆ. ಗೂಳಿ ಅತೀತವಾಗಿದೆ ಎಂದು ಹೇಳುವಾಗ ಅವನ ಅಹಂ ಬೇರೆಯಾಗಿಯೇ ಉಳಿದುಕೊಂಡಿದ್ದರೆ ಈಗ ಅದೂ ಅತೀತವಾಗಿ ಒಂದು ಪೂರ್ಣವೂ ಆದ ಶೂನ್ಯದ ಸ್ಥಿತಿಯಿದೆ.

ಕೊನೆಯ ಎರಡು ಭಾಗಗಳನ್ನು ಹೀಗೆ ಅರ್ಥಮಾಡಿಕೊಳ್ಳಬಹುದು: ಸತ್ಯ, ಜ್ಞಾನೋ



"ಅವನ್ನ ಮೃಗಾಲಯಕ್ಕೆ ಕರ್ಕೊಂಡು ಹೋಗು. ಆದರೆ ಗೋರಿಲ್ಲಾ ಮಾತ್ರ ತೋರಿಸಲೇಬೇಡ''

ದಯ ಇಂಥವೆಲ್ಲ ಮಹಾವಿಶೇಷ ಸಂಗತಿಗಳಲ್ಲ. ಅದು ದೃಷ್ಟಿಕೋನದ ಪ್ರಶ್ನೆ. ಅಂದರೆ ನಿರೂಪಕ ಹಿಂದೆ ಕಾಣುತ್ತಿದ್ದ ಸಂಗತಿಗಳನ್ನೇ ಈಗಲೂ ಕಂಡರೂ ಅವುಗಳನ್ನು ಬೇರೆ ರೀತಿಯ ಅರಿವಿನಿಂದ ಕಾಣಬಲ್ಲ. ಮೊದಲು ರೂಪಭೇದ ಮಾಡದೆ ಸತ್ಯ ಅಸತ್ಯಗಳನ್ನು ತಿಳಿಯಲು ಅವನಿಗೆ ಸಾಧ್ಯವಾಗಿರಲಿಲ್ಲ. ಈಗ ಜ್ಞಾನವೂ ಜ್ಞಾನಿಯೂ (ಎತ್ತು ಮತ್ತು ಹುಡುಕುವವನು) ಒಂದೇ ಎಂಬ ಅನುಭವ ಅವನಿಗಾಗಿದೆ. ಈಗ ಸೃಷ್ಟಿಯನ್ನೂ ಲಯವನ್ನೂ ಒಂದೇ ರೀತಿ ತಿಳಿಯಬಲ್ಲ. ವೈಯಕ್ತಿಕ ಪೂರ್ವ ನಿರ್ಧಾರಗಳಿಲ್ಲದೆ ಎಲ್ಲವನ್ನೂ ಗಮನಿಸುತ್ತಾನೆ, ಆದರೆ ಯಾವುದಕ್ಕೂ ಅಂಟಿಕೊಳ್ಳುವುದಿಲ್ಲ. ಧರ್ಮ-ಕುಲಪತಿಗಳ ಬಗ್ಗೆ, ಮಂತ್ರ-ತಂತ್ರ ಮಾಡಿ ಹೆಚ್ಚು ಕಾಲ ಬದುಕುವ ಬಗ್ಗೆ ಅವನಿಗೆ ಆಸಕ್ತಿ ಇಲ್ಲ. ಜ್ಞಾನ ಅವನನ್ನು ಜನರಿಂದ ದೂರ ಏಕಾಂತಕ್ಕೊಯ್ಯದೆ ಜನರೊಡನೆ ಬೆರೆಯುವಂತೆ ಮಾಡಿರುವುದು ಅವನ ಜ್ಞಾನೋದಯಕ್ಕೆ ರುಜುವಾತು. ಈಗ ಬರಿಗಾಲಿನಲ್ಲಿ ಹರಿದ ಬಟ್ಟೆಯಲ್ಲಿ ಸಾಮಾನ್ಯರೊಡನೆ ಸಾಮಾನ್ಯವಾಗಿ ಬೆರೆಯುತ್ತಾನೆ. ಯಾರು ಕರೆದರೂ ಮುಂದೆ ಮುಂದೆ ಹೋಗುತ್ತಲೇ ಇರುವ ಅಹಂಕಾರ ಈಗಿಲ್ಲ. ಈಗ ಅವನು ಮೌನವಾಗಿ ಗಮನಿಸುತ್ತಾನೆ. ಆರನೇ ಭಾಗದಲ್ಲಿರುವಂತೆ ಕೊಳಲು ಬಾರಿಸಿ (ಜ್ಞಾನ ಪ್ರದರ್ಶಿಸಿ) ಜನರ ಗಮನ ಸೆಳೆಯುವ ಕಸರತ್ತು ಮಾಡುವುದಿಲ್ಲ. ನೇರವಾಗಿ ಏನೂ ಹೇಳದಿದ್ದರೂ ನಾವು ಹೀಗೆ ಯೋಚಿಸುವಂತೆ ಮಾಡುವ ಸಜೆಸ್ಟಿವ್ ಶಕ್ತಿ ಈ ಬರಹಕ್ಕಿದೆ.

ಕೊನೆಯ ವಾಕ್ಯ "ನಾನು ಯಾರನ್ನು ನೋಡಿದರೂ ಅವರಿಗೆ ಜ್ಞಾನೋದಯವಾಗುತ್ತದೆ," ಎಂಬಲ್ಲಿ ಅವನಿಂದ ಉಳಿದವರಿಗೆ ಜ್ಞಾನೋದಯ ಆಗುತ್ತದೆ ಅನ್ನುವ ಅರ್ಥವಲ್ಲ. ಮೇಲೆ ಹೇಳಿದಂತೆ ಜ್ಞಾನೋದಯ ಆದವನ ದೃಷ್ಟಿಕೋನ ಅದು. ಯಾರನ್ನೂ ಕೀಳಾಗಿ ಕಾಣದ, ಅಹಂಕಾರವಿಲ್ಲದ ವಿಶ್ವ ವಿಶಾಲ ದೃಷ್ಟಿ ಇಲ್ಲಿದೆ. ನಿರೂಪಕನಿಗೆ ಎಲ್ಲದರ ಬಗ್ಗೆ ಪ್ರೀತಿ, ಯಾರನ್ನು ನೋಡಿದರೂ ಗೌರವ ಉಂಟಾಗುತ್ತದೆ. ಹತ್ತನೆಯ ಪದ್ಯದ ಕೊನೆಯ ಸಾಲು ಮತ್ತು ಟಿಪ್ಪಣಿಯ ಕೊನೆಯ ವಾಕ್ಯಗಳಿಗಿಂತ ಚೆನ್ನಾಗಿ ಜ್ಞಾನೋ



ದಯವಾದವನ ದೃಷ್ಟಿಯನ್ನು ಹೇಳಲು ಕಷ್ಟ ಸಾಧ್ಯ.

'ಹತ್ತು ಗೂಳಿಗಳು' ಸಾಹಿತ್ಯವಾಗಿ ಗೆಲ್ಲುವುದು ಅದು ಸರಳ ಶಬ್ದಗಳಲ್ಲಿ ಸ್ಪಷ್ಟ ಚಿತ್ರಗಳನ್ನು ಬಿಡಿಸಿ ನಮ್ಮ ಮುಂದೆ ಇಡುವುದರಿಂದ. ಈ ಚಿತ್ರಗಳು ಅದರಷ್ಟಕ್ಕೆ ಖುಷಿ ಕೊಡುತ್ತಾ ಇನ್ನೂ ಏನೋ ಗಹನ ಅರ್ಥಗಳಿರಬಹುದೆಂದು ಸೂಚಿಸುತ್ತಾ ನಮ್ಮನ್ನು ಹೆಚ್ಚು ಹೆಚ್ಚು ಯೋಚಿಸುವಂತೆ ಮಾಡುತ್ತವೆ. ಇಲ್ಲಿ ಯಾವುದೇ ನೇರ ಹೇಳಿಕೆಗಳಿಲ್ಲ. ಆದ್ದರಿಂದ, "ನೋಡಿ, ಇದೇ ಅದರ ಅರ್ಥ," ಎಂದು ಘೋಷಿಸಲು ಸಾಧ್ಯವಿಲ್ಲ. ನಾನು ನೀಡಿದ ವಿವರಣೆ ಅದನ್ನು ಅರ್ಥಮಾಡಿಕೊಳ್ಳುವ ಒಂದು ಪ್ರಯತ್ನ ಮಾತ್ರ.

'ಹತ್ತು ಗೂಳಿಗಳು' ಝೆನ್ ಚಿಂತನೆಯ ಒಂದು ಕೃತಿ. ಇದರ ಹತ್ತು ಭಾಗಗಳಿಗೆ ಹತ್ತು ಚಿತ್ರಗಳನ್ನು ಬರೆದು ಪದ್ಯ ಮತ್ತು ಗದ್ಯದ ರೂಪದ ಟಿಪ್ಪಣಿಗಳನ್ನು ಬರೆದವನು ಕಕುಆನ್ (ಕ್ರಿ.ಶ.1100-1200) ಎಂಬ ಚೀನೀ ಝೆನ್ ದಾರ್ಶನಿಕ. ಕಕುಆನ್ ಟಾವೋ ಪಂಥದಲ್ಲಿ ಪ್ರಚಲಿತವಿದ್ದ ಎಂಟು ಎತ್ತುಗಳ ಕಲ್ಪನೆಯನ್ನು ಮುಂದುವರೆಸಿ ಅದಕ್ಕೆ ಝೆನ್ ಚಿಂತನೆಯ ಸ್ವರೂಪವನ್ನು ಕೊಟ್ಟ. ಈ 'ಹತ್ತು ಗೂಳಿಗಳು' ಝೆನ್ ವಿದ್ಯಾರ್ಥಿಗಳಿಗೆ ಸ್ಫೂರ್ತಿ ಕೊಡುವ ಕೃತಿಗಳಲ್ಲಿ ಒಂದಾಗಿದೆ. ಕಲಾವಿದರು ತಮ್ಮ ಕಲ್ಪನೆಯ ಚಿತ್ರಗಳನ್ನು ಈ ಬರಹಗಳಿಗೆ ಬರೆಯುವ ಒಂದು ಪರಂಪರೆಯೂ ಚೀನ-ಜಪಾನಗಳಲ್ಲಿದೆ.

ನಾವು ಇಲ್ಲಿ ಯಾವನೇ ಕಲಾವಿದ ಹತ್ತು ಗೂಳಿಗಳಿಗೆ ಬರೆದ ಚಿತ್ರಗಳನ್ನು ನೋಡದೆ (ಅದು ಅಗತ್ಯವೂ ಇಲ್ಲ) ಬರಹವನ್ನು ಓದಿದ್ದೇವೆ. ಹಾಗೂ ಝೆನ್ ಚಿಂತನೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ಈ ಕೃತಿಯನ್ನು ಪರಿಶೀಲಿಸಿಲ್ಲ. ಇದರಿಂದ ಈ ಕೃತಿಗೆ ಸಾಹಿತ್ಯಕವಾದ ಪ್ರವೇಶ ಲಭಿಸುತ್ತದೆ. ಯಾವ ಪೂರ್ವನಿರ್ಧಾರ, ತೀರ್ಮಾನಗಳಿಲ್ಲದೆ ಸಾಹಿತ್ಯವಾಗಿ ಓದಿಕೊಂಡು ತಾತ್ವಿಕತೆಗೆ ಪ್ರವೇಶಿಸುವುದು ಸಾಧ್ಯವಾಗುತ್ತದೆ ಅಂದುಕೊಂಡಿದ್ದೇನೆ. ●

---

ಕಲಬುರ್ಗಿ ವೈದ್ಯಕೀಯ ಮಹಾ ವಿದ್ಯಾಲಯದ ಆಸ್ಪತ್ರೆಯಲ್ಲಿ ನಡೆದ ಸಂಗತಿ.

ಒಮ್ಮೆ ಕರ್ನಾಟಕ ರಾಜ್ಯ ಆರೋಗ್ಯ ಇಲಾಖೆ ಪ್ರಕಟಿಸುವ 'ಕುಟುಂಬ' ಭಿತ್ತಿ ಪತ್ರದ ಸಂಪಾದಕರೂ, ಕನ್ನಡದ ಹೆಸರಾಂತ ಸಾಹಿತಿಗಳೂ ಆದ ಗೋ.ರು.ಚನ್ನಬಸಪ್ಪನವರು ಆಸ್ಪತ್ರೆಗೆ ಭೇಟಿಯನ್ನಿತ್ತಿದ್ದರು. ಸಂತಾನ ಶಕ್ತಿಹರಣ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡ ತಾಯಂದಿರ ಸಂದರ್ಶನ ಮಾಡಿಕೊಳ್ಳುವ ವಿಚಾರದಿಂದ ವಾರ್ಡಿನೊಳಕ್ಕೆ ಹೊರಟರು. ಜೊತೆಗೆ ಪ್ರಾಚಾರ್ಯ ಡಾ: ಪಿ.ಎಸ್.ಶಂಕರ್ ಅವರೂ ಇದ್ದರು.

ಒಬ್ಬ ಯುವ ತಾಯಿಯ ಸಂದರ್ಶನವನ್ನು ಗೊ.ರು.ಚನ್ನಬಸಪ್ಪನವರು ನಡೆಸಿದ್ದರು. ಶಸ್ತ್ರಕ್ರಿಯೆ ಮಾಡಿದ ಸ್ಥಳದಲ್ಲಿ ಸ್ವಲ್ಪ ನೋವಿದೆ ಎಂದು ಆ ಯುವತಿ ತಿಳಿಸಿದಳು.

"ಅದಕ್ಕೆಲ್ಲ ಯೋಚಿಸುವ ಕಾರಣವಿಲ್ಲ ತಾಯಿ. ಒಂದೆರಡು ದಿನಗಳಲ್ಲಿ ನೀನು ಸರಿ ಹೋಗುತ್ತಿ," ಎಂದರು ಗೊ.ರು.ಚನ್ನಬಸಪ್ಪನವರು.

ಅವರ ಮಾತು ಕೇಳಿ ಆ ಯುವತಿ ತನ್ನ ಕಂದಮ್ಮನತ್ತ ದು:ಖದಿಂದ ನೋಡಿ ಸುತ್ತಲೂ ನಿಂತವರನ್ನೆಲ್ಲ ತುಂಬಿದ ಕಣ್ಣುಗಳಿಂದ ನೋಡತೊಡಗಿದಳು.

ಕೂಡಲೇ, ಪ್ರಾಚಾರ್ಯ ಡಾ: ಶಂಕರ್ ಅವರು ಮಧ್ಯ ಪ್ರವೇಶಿಸಿ,"ಇಲ್ನೋಡು ತಾಯಿ, ಸಾಹೇಬರು ನೀನು ಒಂದೆರಡು ದಿನಗಳಲ್ಲಿಯೇ ಆರಾಮಾಗಿ ನಗುನಗುತ್ತಾ ಮನೆಗೆ ಹೋಗುವಿ, ನಿನ್ನ ಹೊಟ್ಟೆ ನೋವೆಲ್ಲ ಹೋಗುತ್ತದೆಯೆಂದು ಅನ್ನುತ್ತಿದ್ದಾರೆ." ಎಂದು ಅವಳಿಗೆ ಹೇಳಿ, ಗೊ.ರು.ಚನ್ನಬಸಪ್ಪನವರತ್ತ ಹೊರಳಿ,"ಗುಲಬರ್ಗಾ ಸೀಮೆಯಲ್ಲಿ ಸರಿ ಹೋಗುವುದೆಂದರೆ ಕೊನೆಯುಸಿರನ್ನೆಳೆಯುವುದು ಎಂದರ್ಥ," ಎಂದು ವಿವರಿಸಿದರು.

ಆಗಲೇ ಆ ತಾಯಿ ತನ್ನ ಮಗುವನ್ನು ನಗುನಗುತ್ತಾ ಎದೆಗವಚಿ ಲಟ ಲಟ ಮುದ್ದಿಡುತ್ತಿದ್ದಳು. ಡಾ: ಶಂಕರ್‌ರ ಮಾತು ಅವಳಿಗೆ. ಜೀವನದ ಭರವಸೆಯನ್ನು ಮರಳಿ ತಂದಿತ್ತು.

*ಎಂ.ಪಿ.ಅಂಟಿನ*



# ಬಂದಿದೆ: ಕಂಪ್ಯೂಟರಿಗೂ ರೋಗ

*ಸಂಜೀವ ಮಜಲೀಕರ*

ಒಂದು ರೀತಿಯಲ್ಲಿ ವ್ಯಂಗ್ಯಾರ್ಥದಲ್ಲಾದರೂ ಸರಿ, ರೋಗಗಳೆಂದರೆ ಮಾನವನ ಪ್ರಗತಿಯ ಸೂಚ್ಯಂಕಗಳೆನಿಸಿವೆ. ಮಾನವ ಹಾಗೂ ಕಂಪ್ಯೂಟರುಗಳಲ್ಲಿ ಅನೇಕ ರೀತಿಯ ಸಾಮ್ಯವಿರುವಂತೆಯೇ ಈಗ ಹೊಸ ಹೋಲಿಕೆಯೊಂದು ಸೇರಿಕೊಂಡಿದೆ. ವೈರಸ್ಸು ಮಾನವನನ್ನಷ್ಟೇ ಅಲ್ಲ, ಕಂಪ್ಯೂಟರನ್ನೂ ಗಾಸಿಗೊಳಿಸುತ್ತದೆ ಎಂಬುದೇ ಅದು. ಮಾನವನ ತಾಂತ್ರಿಕ ಪ್ರಗತಿಯಲ್ಲಿ ಮೈಲುಗಲ್ಲಾಗಿ ಹೊಸ ಹೊಸ ಸಾಧನೆಯನ್ನು ಮಾಡಲು ನೆರವಾಗುತ್ತಿರುವ ಕಂಪ್ಯೂಟರ್ ಸ್ವತಃ ವೈರಸ್ ರೋಗಕ್ಕೀಡಾಗಿ ನರಳುತ್ತಿದೆ. ಅನೇಕರ ಕಲ್ಪನೆಯಲ್ಲಿ, ಕಂಪ್ಯೂಟರ್‌ಗೆ ಈ ರೋಗ ಬಡಿದಾಗ ಅದರ ಭಾಗಗಳು ನಾಶಹೊಂದುತ್ತವೆಂದು ಭಾವನೆ. ಆದರೆ ವಾಸ್ತವವಾಗಿ ಕಂಪ್ಯೂಟರ್ ವೈರಸ್ ಜೈವಿಕ ವೈರಸ್ ಅಲ್ಲ. ಜೈವಿಕ ವೈರಸ್ ಹಾಗೂ ಕಂಪ್ಯೂಟರ್ ವೈರಸ್ಸುಗಳಿಗೆ ಕಾರ್ಯ ವಿಧಾನದಲ್ಲಿ ಹೋಲಿಕೆಗಳಿದ್ದರೂ ಎರಡಕ್ಕೂ ಏನೂ ಸಂಬಂಧವಿಲ್ಲ. ಮೇಲಾಗಿ ಕಂಪ್ಯೂಟರ್ ವೈರಸ್ ಜೀವಿಯಲ್ಲ. ಯಂತ್ರಕ್ಕೆ ಯಾಂತ್ರಿಕ ವೈರಸ್ಸೇ ಮಾರಕವಾಗಿ ಪರಿಣಮಿಸಿದೆ. ಕಂಪ್ಯೂಟರ್ ವೈರಸ್ ಒಂದು ಚಿಕ್ಕ ಕಂಪ್ಯೂಟರ್ ಪ್ರೋಗ್ರಾಂ (Programme) ಅಂದರೆ ಒಂದು ನಿರ್ದಿಷ್ಟ ಕೆಲಸ ಮಾಡಲು ಕಂಪ್ಯೂಟರಿಗೆ ನೀಡುವ ಆದೇಶ ಸರಣಿ. ಈ ವೈರಸ್ಸು ಜೈವಿಕ ವೈರಸ್ಸಿನಂತೆ ಸುಲಭವಾಗಿ ಗೋಚರಿಸುವುದಿಲ್ಲ. ಹಾಗೂ ಸಾಂಕ್ರಾಮಿಕ ರೋಗದಂತೆ ಒಂದು ಕಂಪ್ಯೂಟರಿನಿಂದ ಇನ್ನೊಂದಕ್ಕೆ ಹಬ್ಬುತ್ತ ಹೋಗುವುದು.

## ಅಪಾಯ

ಕಂಪ್ಯೂಟರಿನಲ್ಲಿ ಒಮ್ಮೆ ವೈರಸ್ ಸೇರಿತೆಂದರೆ ಅದು ಯಾವಾಗ ತನ್ನ ಕೆಲಸ ಪ್ರಾರಂಭಿಸುವುದೆಂದು ಹೇಳಲು ಬರುವುದಿಲ್ಲ. ಸಾಮಾನ್ಯವಾಗಿ ವೈರಸ್ಸು ಕಂಪ್ಯೂಟರನ್ನು ಸೇರಿದ್ದು ಒಮ್ಮೆಲೆ ಕಂಡು ಬರುವುದಿಲ್ಲ. ಸ್ವಲ್ಪ ಸಮಯದ ನಂತರ ಅದರ ಚಟುವಟಿಕೆಗಳು ಪ್ರಾರಂಭವಾಗುವವು. ಈ ಕಾಲಾವಧಿಯಲ್ಲಿ ವೈರಸ್ ತನ್ನ ಸಂತತಿಯನ್ನು ಹೆಚ್ಚಿಸಿಕೊಳ್ಳುವುದು. ಅರ್ಥಾತ್ ಸಾಧ್ಯವಿದ್ದ ಕಂಪ್ಯೂಟರ್ ಭಾಗಗಳಿಗೆ ವೈರಸ್ ಪ್ರೋಗ್ರಾಂ ಬರೆಯಲ್ಪಡುವುದು. ನಂತರ ಅದು ಕಂಪ್ಯೂಟರ್ ಕಾರ್ಯವನ್ನು ಪೂರ್ಣವಾಗಿ ನಿಲ್ಲಿಸುವುದಿಲ್ಲವಾದರೂ ಇತರ ಉಪಯುಕ್ತ ಪ್ರೋಗ್ರಾಮುಗಳನ್ನು ನಿಷ್ಕ್ರಿಯಗೊಳಿಸುತ್ತ ಹೋಗುವುದು. ಇದು ಸಾಕಷ್ಟು ಮಾಹಿತಿಯು ನಾಶವಾದ ನಂತರವೇ ಗಮನಕ್ಕೆ ಬರುವುದು.

ಇಂಥ ವೈರಸ್ಸುಗಳಿಂದಾಗಿ ಈಗಾಗಲೇ ಪೆಂಟಗಾನ್, ನಾಸಾದಂಥ ಸಂಸ್ಥೆಗಳು ತತ್ತರಿಸಿವೆ.

ಕಂಪ್ಯೂಟರ್ ವೈರಸ್ಸನ್ನು ನಿರ್ಮಿಸುವುದು ಅಷ್ಟು ಸುಲಭವಲ್ಲ. ಇವುಗಳನ್ನು ಕಂಪ್ಯೂಟರಿನ ಯಂತ್ರಭಾಷೆಯಲ್ಲಿ ಬರೆಯಲಾಗುವುದು. ಇವುಗಳಲ್ಲಿ ಕಂಪ್ಯೂಟರನ್ನು ಪರೀಕ್ಷಿಸಲು ಇರುವ ಆದೇಶಸರಣಿಗಳನ್ನೇ ಹೋಲುವ ವಂಚಿಸುವ ಆದೇಶಗಳಿರುವವು. ಆದ್ದರಿಂದ ಇವು ಸುಲಭವಾಗಿ ಕಂಪ್ಯೂಟರ್ ಪರೀಕ್ಷಾ ವಿಧಾನ ಗಳಿಂದ ತಪ್ಪಿಸಿಕೊಳ್ಳುವವು. ಒಂದು ಸರಳವೈರಸ್ಸನ್ನು ಬರೆಯಲು ಒಂದರಿಂದ ಮೂರು ತಿಂಗಳ ಬೇಕಾಗಬಹುದು. ಕ್ಲಿಷ್ಟ ವೈರಸ್ಸಿನ ರಚನೆಗೆ ಆರು ತಿಂಗಳಾದರೂ ಅವಶ್ಯ.

**ವೈರಸ್ಸಿನ ವಿಧಗಳು**

ಕಂಪ್ಯೂಟರ್ ವೈರಸ್ಸಿನಲ್ಲಿ ಅನೇಕ ವಿಧಗಳುಂಟು. 'ಸಿಬ್ರೇನ್' ಎಂಬುದು ಅತ್ಯಂತ ಕುಪ್ರಸಿದ್ಧ ಹಾಗೂ ವ್ಯಾಪಕವಾದ ವೈರಸ್. ಈ ವೈರಸ್ ಫ್ಲಾಪಿ ಡಿಸ್ಕಿನ (ಫ್ಲಾಪಿ ಡಿಸ್ಕ್ ಎಂದರೆ ಅಂಕಿ ಅಂಶಗಳನ್ನು ಸಂಗ್ರಹಿಸಿಡಲು ಉಪಯೋಗಿಸುವ ಮಾಧ್ಯಮ) ಹೆಸರನ್ನು ಮಾರ್ಪಡಿಸುವುದು. 'ಟ್ರೋಜನ್' ವೈರಸ್ಸುಗಳು ಮೇಲ್ನೋಟಕ್ಕೆ ಉಪಯುಕ್ತ ಪ್ರೋಗ್ರಾಮಿನಂತಿದ್ದು ಗೋಮುಖವ್ಯಾಘ್ರನಂತೆ ಇತರ ಪ್ರೋಗ್ರಾಮುಗಳನ್ನು ನಾಶಗೊಳಿಸುವವು. 'ಇಟಾಲಿಯನ್ ಬೌನ್ಸಿಂಗ್' ವೈರಸ್ ಅತ್ಯಂತ ಶೀಘ್ರವಾಗಿ ಅಭಿವೃದ್ಧಿಯಾಗುವುದು. ಸಾಮಾನ್ಯವಾಗಿ ಡಿಸ್ಕುಗಳನ್ನು ಅಂಕಿ-ಅಂಶ ರಹಿತಗೊಳಿಸಿದಾಗ (Format) ಈ ವೈರಸ್ಸುಗಳು ನಾಶಹೊಂದುವವು. ಕೆಲ ವೈರಸ್ಸುಗಳು ಈ ವಿಧಾನಕ್ಕೂ ಮಣಿಯುವುದಿಲ್ಲ.

**ವೈರಸ್ ಹುಟ್ಟಿದ್ದು ಹೇಗೆ?**

ಕಳೆದ ದಶಕದಲ್ಲಿಯೇ AT & T Bell ಪ್ರಯೋಗಾಲಯದಲ್ಲಿ ವೈರಸ್ಸನ್ನು ಹೋಲುವ ಆಟದ ಪ್ರೋಗ್ರಾಮುಗಳು ಬರೆಯಲ್ಪಟ್ಟವು. ಇವುಗಳ ಅಪಾಯವನ್ನು ಮನಗಂಡು ಇವುಗಳನ್ನು ಗುಪ್ತವಾಗಿಡಲು ನಿರ್ಧರಿಸಲಾಯಿತು. ಎಲ್ಲ ಗೌಪ್ಯಗಳ ಹಣೆಬರಹದಂತೆಯೇ ಈ ಗೌಪ್ಯವೂ ಬಹಿರಂಗವಾಯಿತು. ಒಂದು ರೀತಿಯಲ್ಲಿ, ಕಂಪ್ಯೂಟರ್ ವೈರಸ್ ಮಾನವ ತನ್ನ ದುರಾಸೆ ಹಾಗೂ ದ್ವೇಷದಿಂದ ಬೆಳೆಸಿದ ಭೂತವಾಗಿದೆ. 'ಸಿಬ್ರೇನ್' ವೈರಸ್ಸನ್ನು ಪಾಕ್ ಸೋದರರಿಬ್ಬರು ನಿರ್ಮಿಸಿದರೆಂದು ಹೇಳಲಾಗುತ್ತಿದೆ. ಅನೇಕ ಜನ ಹಣದಾಸೆಯಿಂದ ಇಂತಹ ವೈರಸ್ಸನ್ನು ನಿರ್ಮಿಸಿದ್ದಾರೆ. ಈ ವೈರಸ್ಸುಗಳು ಕಂಪ್ಯೂಟರಿನಲ್ಲಿ ಸೇರಿದಾಗ 'ವೈರಸ್ಸಿನ ನಾಶಕ್ಕಾಗಿ ಹಾಗೂ ಕಂಪ್ಯೂಟರಿನ ರಕ್ಷಣೆಗಾಗಿ ......ಇವರನ್ನು ಸಂಪರ್ಕಿಸಿ' ಎಂಬ ಬರಹ ಕಾಣುವುದುಂಟು. ವೈರಸ್ಸು ಬರೆಯುವವರು ಯಾರ ಹೆಸರನ್ನು ಬೇಕಾದರೂ ಬರೆಯಬಹುದಾದ್ದರಿಂದ ಈ ಬರಹ ಪರದೆಯ ಮೇಲೆ ಮೂಡಿದರೂ ಯಾವುದೇ ಕ್ರಮ ಕೈಗೊಂಡ ಉದಾಹರಣೆಗಳಿಲ್ಲ.

**ವೈರಸ್ ವಾಹಕಗಳು**

ವೈರಸ್ಸಿನ ಮುಖ್ಯ ವಾಹಕಗಳೆಂದರೆ ಮಾಹಿತಿ ಶೇಖರಣೆಯ ಮಾಧ್ಯಮಗಳು. ಇವುಗಳಲ್ಲಿ ಫ್ಲಾಪಿ ಡಿಸ್ಕುಗಳಿಗೆ ಅಗ್ರಸ್ಥಾನ. ಈ ಡಿಸ್ಕುಗಳ ಮೇಲೆ ಇತರ ಉಪಯುಕ್ತ ಪ್ರೋಗ್ರಾಮುಗಳ ಜೊತೆಗೆ ವೈರಸ್ ಪ್ರೋಗ್ರಾಂ ಸೇರಿಕೊಂಡಿರುವುದು. ಈ ಡಿಸ್ಕುಗಳನ್ನು ಬೇರೆ ಕಂಪ್ಯೂಟರ್‌ನಲ್ಲಿ ಹಾಕಿದಾಗ ವೈರಸ್ ತನ್ನಷ್ಟಕ್ಕೇ ಸೇರಿಕೊಳ್ಳುವುದಲ್ಲದೆ ಕಂಪ್ಯೂಟರಿನಲ್ಲಿ ನಂತರ ಹಾಕಿದ ಇತರ ಡಿಸ್ಕುಗಳಿಗೂ ಈ ದೋಷಯುಕ್ತ ಪ್ರೋಗ್ರಾಂ ಬರೆಯಲ್ಪಡುವುದು. ಕೆಲವೆಡೆ ಅನೇಕ ಕಂಪ್ಯೂಟರುಗಳನ್ನು ಸೇರಿಸಿ ಜಾಲವನ್ನು (Net Work)ನಿರ್ಮಿಸಿರುವರು. ಇಂಥ ಜಾಲದ ಕಂಪ್ಯೂಟರ್ ಒಂದರಲ್ಲಿ ಸೇರಿದ ವೈರಸ್ ಬಹುಬೇಗ ಇತರ ಕಂಪ್ಯೂಟರುಗಳಿಗೂ ಹರಡಿ

ಇಡೀ ಜಾಲವನ್ನು ನಿಷ್ಕ್ರಿಯಗೊಳಿಸಬಹುದು.

**ಭಾರತದಲ್ಲಿ**

ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ವೈರಸುಗಳ ಸಂಖ್ಯೆ ಕಡಿಮೆ ಎನ್ನಬಹುದು. ಭಾರತದಲ್ಲಿ ಮಡಿ ಹೆಚ್ಚು. ಅಂದರೆ ಇಲ್ಲಿ ಕಂಪ್ಯೂಟರುಗಳ ನಡುವೆ ಪರಸ್ಪರ ಸಂಪರ್ಕ ಬರುವ ವ್ಯವಸ್ಥೆಯಿರುವುದು ಕಡಿಮೆ. ಪರಿಸ್ಥಿತಿ ಹೀಗಿರುವುದರಿಂದ ವೈರಸ್ ಹಬ್ಬುವ ಅಪಾಯವೂ ಕಡಿಮೆ. ಆದರೆ ಅನಧಿಕೃತ ಡಿಸ್ಕುಗಳ ಅಪಾಯ ಭಾರತದಲ್ಲಿ ಹೆಚ್ಚಾಗಿದೆ. ದೊಡ್ಡ ಸಂಸ್ಥೆಗಳಿಂದ ಹಿಡಿದು ಸಣ್ಣ ಕಾಲೇಜುಗಳವರೆಗೆ ಇವು ಹಬ್ಬಿದ್ದು ಕಂಡು ಬಂದಿದೆ. ಕಂಪ್ಯೂಟರ್ ಜಾಲಗಳು ಹೆಚ್ಚಿದಂತೆ ವೈರಸ್ಸಿನ ಹಾವಳಿಯೂ ಹೆಚ್ಚಾಗಬಹುದು.

**ಮುಂಜಾಗ್ರತೆಯ ಕ್ರಮಗಳು**

ಫ್ಲಾಪಿ ಡಿಸ್ಕುಗಳನ್ನು 'ಓದಲು ಮಾತ್ರ' (ಬರೆಯಲು ನಿಷೇಧ) ಮಾಡುವುದು ಒಂದು ಮಹತ್ವದ ಕ್ರಮ. ಇದರಿಂದ ವೈರಸ್ ಪ್ರೋಗ್ರಾಂ ಆ ಡಿಸ್ಕ್ ಮೇಲೆ ಬರೆಯಲ್ಪಡುವುದಿಲ್ಲ. ಆದರೆ ಈ ಕ್ರಮ ಎಲ್ಲ ಫ್ಲಾಪಿ ಡಿಸ್ಕುಗಳಿಗೆ ಎಲ್ಲ ಕಾಲಕ್ಕೆ ಸಾಧ್ಯವಾಗದಿರಬಹುದು. ಅಧಿಕೃತವಾದ ಡಿಸ್ಕುಗಳನ್ನು ವಿಶ್ವಸನೀಯ ಮೂಲಗಳಿಂದ ಪಡೆದು ಉಪಯೋ

# ಇರುವೆಗಳ

ಇರುವೆ ಎಂದಾಕ್ಷಣ ನಮ್ಮ ಕಣ್ಣ ಮುಂದೆ ತಟ್ಟನೆ ಬರುವುದು-ನಾವು ಶೇಖರಿಸಿದ ಆಹಾರವನ್ನು ಸಾಲಾಗಿ, ಶಿಸ್ತಿನ ಸಿಪಾಯಿಗಳಂತೆ ತಮ್ಮ ಗೂಡಿಗೆ ಕೊಂಡೊಯ್ಯುವ ಈ ಸಣ್ಣ ಪ್ರಾಣಿಗಳು. ಆದರೆ ಎಲ್ಲಾ ಜಾತಿಯ ಇರುವೆಗಳೂ ನಾವು ಬೆಳೆದ ಆಹಾರವನ್ನೇ ತಿಂದು ಜೀವಿಸುತ್ತವೆಯೆಂದರೆ ತಪ್ಪಾದೀತು. ತಮ್ಮ ಆಹಾರವನ್ನು ತಾವೇ ಬೆಳೆದು ತಿನ್ನುವ ಇರುವೆಗಳೂ ಇವೆ.

ದಕ್ಷಿಣ ಅಮೆರಿಕದ 'ಅಟ್ಟ' ಎಂಬ ಒಂದು ಜಾತಿಯ ಇರುವೆ ತನಗೆ ಬೇಕಾದ ಆಹಾರವನ್ನು ತಾನೇ ಬೆಳೆದುಕೊಳ್ಳುತ್ತದೆ. ಈ ಇರುವೆಗಳು ಭೂಮಿಯಲ್ಲಿ ದೊಡ್ಡ ಗೂಡುಗಳನ್ನು ನಿರ್ಮಿಸಿಕೊಂಡು ಗಿಡಗಳಿಂದ ಎಲೆಗಳನ್ನು ಯಥೇಚ್ಛವಾಗಿ ಕತ್ತರಿಸಿ ಗೂಡಿನೊಳಕ್ಕೆ ಸಾಗಿಸುತ್ತವೆ. ಈ ರೀತಿ ಕತ್ತರಿಸಿದ ಎಲೆಗಳನ್ನು ಕಚ್ಚಿ ಹಿಡಿದು ಹೊರಟ ಇರುವೆಗಳು ಬಿಸಿಲಿಗಾಗಿ ಕೊಡೆ ಹಿಡಿದು ಹೊರಟಂತೆ ಕಾಣುವುದರಿಂದ ಇವನ್ನು "ಕೊಡೆ ಹಿಡುಕ"(ಪಾರಾಸೂಲ್) ಇರುವೆಗಳೆಂದು ಕರೆಯುತ್ತಾರೆ. ಆದರೆ ಈ ಎಲೆಗಳನ್ನು ಇವು ಎಂದಿಗೂ ಆಹಾರವಾಗಿ ತಿಂದು ಜೀರ್ಣಿಸಿಕೊಳ್ಳಲಾರವು. ಬದಲು ಈ ಎಲೆಗಳನ್ನು ಕೊಳೆಸಿ ತಯಾರು ಮಾಡಿದ ಕಂಪೋಸ್ಟಿನ ಒಂದು ಬಗೆಯ ಅಣಬೆಯನ್ನು ಬೆಳೆಸುತ್ತವೆ. ಈ ಇರುವೆಗಳ ಗೂಡಿನಲ್ಲಿ ಇಂತಹ ನೂರಾರು ಕೋಣೆಗಳಿದ್ದು ಇವುಗಳಲ್ಲಿ ಕೆಲವು ಅಣಬೆ ಸಸ್ಯವನ್ನು ಬೆಳೆಯುವುದಕ್ಕಾಗಿಯೇ ಮೀಸಲಾಗಿರುತ್ತವೆ. ಇವುಗಳನ್ನೇ ಅಣಬೆ ತೋಟಗಳು, ಅಣಬೆ ಕುಟೀರಗಳು ಅಥವಾ ಶಿಲೀಂಧ್ರ ತೋಟಗಳು ಎಂದೂ ಕರೆಯಲಾಗುತ್ತದೆ.

ಅಣಬೆಯ ಬೇಸಾಯಕ್ಕೆ ಬೇಕಾದ ಅಗತ್ಯ ವಸ್ತುಗಳನ್ನು ಈ ಇರುವೆಗಳು ಸಿದ್ಧಪಡಿಸುವ ರೀತಿ ಬಹಳ ಕುತೂಹಲಕರವಾಗಿದೆ.

ಇವು ಬೆಳೆಯುವ ಶಿಲೀಂಧ್ರವು ಬೆಸಿಡಿಯೊ ಮೈಸೀಟ್ಸ ಎಂಬ ವರ್ಗಕ್ಕೆ ಸೇರಿದ ಅಣಬೆ ಜಾತಿಯ ಸಸ್ಯ. ಈ ಶಿಲೀಂಧ್ರವು ಕೊಳೆಯುತ್ತಿರುವ ಎಲೆಗಳ ಮೇಲೆ ಹತ್ತಿಯಂತೆ ಬೆಳೆಯುತ್ತದೆ. ಇದನ್ನು ಮೈಸೀಲಿಯಂ ಎಂದು ಕರೆಯುತ್ತಾರೆ. ಈ ಮೈಸೀಲಿಯಂನಿಂದ ಗುಂಡು ಸೂಜಿಯಾಕಾರದ

ಗಿಸಬೇಕು. ಅಪರಿಚಿತ ಡಿಸ್ಕುಗಳನ್ನು ಮೊದಲು ಪರೀಕ್ಷಿಸಬೇಕು. ಅಪರಿಚಿತರು ಕಂಪ್ಯೂಟರ್ ಉಪಯೋಗಿಸದಂತೆ ನಿರ್ಬಂಧಿಸಬೇಕು.

**ವೈರಸ್ 'ಲಸಿಕೆ'ಗಳು**

ವೈರಸ್ ಸೋಂಕಿದಾಗ ಅದನ್ನು ನಾಶಗೊಳಿಸಲು ಹಾಗೂ ಮುಂದೆ ಅದು ಬಾರದಂತೆ ತಡೆಯಲು 'ಲಸಿಕೆ' ಪ್ರೋಗ್ರಾಮುಗಳೂ ಸಾಕಷ್ಟಿವೆ. ಈ ಲಸಿಕೆ ಪ್ರೋಗ್ರಾಮುಗಳನ್ನೂ ಯಂತ್ರ ಭಾಷೆಯಲ್ಲಿ ಬರೆಯಲಾಗಿರುವುದು. ಇವು ಪ್ರತಿವೈರಸ್ಸಿನಂತೆ ವರ್ತಿಸುವವು. ಕಂಪ್ಯೂಟರಿನಲ್ಲಿರುವ ಮಾಹಿತಿಯನ್ನು ಇವು ಸಂಪೂರ್ಣವಾಗಿ ತನಿಖೆಗೆ ಒಳಪಡಿಸುವವು. ಅರ್ಥವಾಗದ ಮಾಹಿತಿ ಕಂಡುಬಂದರೆ ಎಚ್ಚರಿಸುವವು. ಅದನ್ನು ನಾಶಮಾಡಲೂ ಪ್ರಯತ್ನಿಸುವವು. ಅಲ್ಲದೆ ಮುಂದೆ ಅದೇ ರೀತಿಯ ಮಾಹಿತಿ ಬಾರದಂತೆ ನೋಡಿಕೊಳ್ಳುವವು. ಈ 'ಲಸಿಕೆ'ಗಳಲ್ಲಿ ಕೆಲವೊಂದು ಸಾಕಷ್ಟು ಪ್ರಭಾವಶಾಲಿಯಾಗಿವೆ. ಆದರೆ ಯಾವ ವೈರಸ್ಸುಗಳ ಕಾರ್ಯವಿಧಾನವನ್ನೂ ನಿಖರವಾಗಿ ಹೇಳಲು ಬರುವುದಿಲ್ಲ. ಡಾ.ಆಲನ್ ಸೋಲೊಮನ್ ಎಂಬ ಪ್ರಸಿದ್ಧ ತಜ್ಞ ಬರೆದಿದ್ದ 'ಲಸಿಕೆ' ಪ್ರೋಗ್ರಾಮನ್ನೇ ವೈರಸ್ಸೊಂದು ತಿಂದುಹಾಕಿದೆ.

# ವ್ಯವಸಾಯ

'ಬ್ರೊಮೇಷಿಯಾ' ಎಂಬ ಆಹಾರ ತುಂಬಿದ ಅಂಗಗಳು ಬೆಳೆಯುತ್ತವೆ. ಇದೇ ಇರುವೆಗಳ ಆಹಾರ.

ಅಟ್ಟ ಇರುವೆಗಳು ಮತ್ತು ಅವು ಬೆಳೆಯುವ ಶಿಲೀಂಧ್ರವು ಒಂದು ಬಗೆಯ ಸಹಜೀವನವನ್ನು ನಡೆಸುತ್ತವೆ. ಇವು ಒಂದನ್ನೊಂದು ಅಗಲಿ ಜೀವಿಸಲಾರವು. ಈ ತೋಟಗಳಲ್ಲಿ ಅಣಬೆಯ ಹೊರತು ಬೇರಾವ ಸಸ್ಯವೂ ಬೆಳೆಯುವದಿಲ್ಲ. ಇರುವೆಗಳು ತಮ್ಮ ದೇಹದಿಂದ ಸ್ರವಿಸುವ ಅಂಟು ದ್ರವದಲ್ಲಿ ಮತ್ತು ಜೊಲ್ಲಿನಲ್ಲಿ ಕ್ರಿಮಿಗಳನ್ನು ಕೊಲ್ಲುವ ವಸ್ತುವಿರುತ್ತದೆ ಎಂಬುದು ಇದಕ್ಕೆ ಕಾರಣ ಎಂದು ಭಾವಿಸಲಾಗಿದೆ.

ಅಟ್ಟ ಇರುವೆಗಳು ಯಥೇಚ್ಛವಾಗಿ ಎಲೆಗಳನ್ನು ಕತ್ತರಿಸಿ ಗೂಡಿಗೆ ಸಾಗಿಸುವುದರಿಂದ ಗಿಡಮರಗಳು ಬೋಳಾಗುತ್ತವೆ. ಯುರೋಪಿಯನ್ನರು ಮಧ್ಯ ಮತ್ತು ದಕ್ಷಿಣ ಅಮೇರಿಕಕ್ಕೆ ಬಂದು ನೆಲೆಸಿ ತೋಟಗಾರಿಕೆಯನ್ನು ಪ್ರಾರಂಭಿಸಿದಾಗ ಈ ಅಟ್ಟ ಇರುವೆಗಳಿಂದ ತಮ್ಮ ಗಿಡಗಳನ್ನು ರಕ್ಷಿಸುವುದು ಹೇಗೆ? ಎಂಬುದೇ ಎದುರಿಸಬೇಕಾಗಿ ಬಂದ ಮೊದಲ ತೊಂದರೆ.

ಒಂದು ಪೂರ್ಣ ಬೆಳೆದ ಗೂಡಿನಲ್ಲಿ ಸುಮಾರು ಒಂದು ಸಾವಿರ 'ಕೋಣೆ'ಗಳಿರುತ್ತವೆಯೆಂದು ಅಂದಾಜು ಮಾಡಲಾಗಿದೆ. ಕೋಣೆಯ ನೆಲಭಾಗ ಸಮತಟ್ಟಾಗಿದ್ದು ಮೇಲ್ಭಾಗ ಕಮಾನಿನಾಕಾರದಲ್ಲಿರುತ್ತದೆ. ಈ ಇರುವೆಗಳು ಗೂಡನ್ನು ಕಟ್ಟುವಾಗ ಸುಮಾರು 40,000 ಕಿಲೋಗ್ರಾಂ ಮಣ್ಣನ್ನು ಗೂಡಿನಿಂದ ಹೊರಕ್ಕೆ ಸಾಗಿಸುತ್ತವೆ. ಗೂಡಿನಲ್ಲಿಯ ಸುಮಾರು ಮೂರನೆ ಒಂದು ಭಾಗಕ್ಕಿಂತಲೂ ಹೆಚ್ಚು ಕೋಣೆಗಳು ಜೀವನಾಧಾರವಾದ ಶಿಲೀಂಧ್ರದ ಕೃಷಿಗಾಗಿಯೇ ಮೀಸಲಾಗಿರುತ್ತವೆ. ಈ ಕುಟೀರಗಳನ್ನು ನಿರ್ಮಿಸಲು ಹೊರತೆಗೆದ ಮಣ್ಣಿಗೆ ಬದಲಾಗಿ ಅದಕ್ಕಿಂತ ಹೆಚ್ಚು ತೂಕದ ಎಲೆಗಳನ್ನು ಗೂಡಿನೊಳಕ್ಕೆ ಸಾಗಿಸಲಾಗಿರುತ್ತದೆ. ಸುಮಾರು 6ರಿಂದ 7 ವರ್ಷಗಳಲ್ಲಿ 6,000 ಕಿಲೋಗ್ರಾಮುಗಳಷ್ಟು ಸಸಾರಜನಕವುಳ್ಳ ವಸ್ತು ಮಣ್ಣಿಗೆ ಸೇರಿ ಭೂಮಿಯನ್ನು ಫಲವತ್ತಾಗಿಸುತ್ತದೆ. ಇರುವೆಗಳು ಈ ಬಗೆಯ ವ್ಯವಸಾಯವನ್ನು ಹೇಗೆ ರೂಢಿಸಿಕೊಂಡಿವೆಯೆಂಬುದು ಇನ್ನೂ ರಹಸ್ಯವಾಗಿದೆ.

*ಗಣೇಶ ಪಿ. ನಾಡೋರ*

## 128

## ಬಯ್ಗಳ ಆಮದು-ವಿದ್ಯೆಯೆಂದರೆ ಕೇಳುವುದು

ಬಯ್ಗಳ ಮಾತುಗಳು ಸ್ವಭಾಷೆಯಲ್ಲಿ ಎಷ್ಟಿದ್ದರೂ ಪರಭಾಷೆಗಳಿಂದ ಸ್ವೀಕರಿಸುವುದು ಒಂದು ಭಾಷಾಪ್ರವೃತ್ತಿ. ಈ ಮನೋವೃತ್ತಿಗೂ ಅಶ್ಲೀಲವೆನಿಸುವ ವಿಷಯಗಳನ್ನು ಉಲ್ಲೇಖಿಸಬೇಕಾದಾಗ ಶಿಷ್ಟರು ಸಂಸ್ಕೃತ ಅಥವಾ ಲ್ಯಾಟಿನ್ ಮೊದಲಾದ ಅಭಿಜಾತ ಭಾಷೆಗಳನ್ನು ಆಶ್ರಯಿಸುವ ಒಲವಿಗೂ ಏನಾದರೂ ಸಂಬಂಧ ಇದೆಯೇ ಎಂಬುದು ಚಿಂತನೀಯ.

ಬೈಗಳ ಅನೇಕ ಮಾತುಗಳನ್ನು ನಾವು ಉರ್ದು ಮತ್ತು ಅದಕ್ಕೆ ಪದಸಂಪತ್ತಿಯನ್ನು ಒದಗಿಸುವ ಅರಬ್ಬಿ, ಪಾರಸಿಕ, ತುಳು, ಭಾಷೆಗಳಿಂದಲೂ ಸ್ವೀಕರಿಸಿದ್ದೇವೆ. ದುಷ್ಟನನ್ನು (ವಿಶೇಷತಃ ಪೋಲೀಸ್ ಭಾಷೆಯಲ್ಲಿ) "ಬದ್ಮಾಷ್", "ಲಫಂಗಾ", "ಲುಚ್ಚಾ" ಮೊದಲಾದ ಉಪಾಧಿಗಳಿಂದ ಅರ್ಚಿಸುವುದು ಕಂಡುಬರುತ್ತದೆ. ಬದ್ಮಾಶ್ (ಬದ್+ಮಆಶ್) ಎಂದರೆ ದೇಶೀ ಭಾಷೆಯಲ್ಲಿ ದುರಾಚಾರಿ. ಪಾರಸೀಕ ಭಾಷೆಯಿಂದ ತೆಗೆದುಕೊಂಡ ಈ ಪದಕ್ಕೆ ಅಲ್ಲಿ ಬದ್=ಕೆಟ್ಟ (ಪಾರಸೀಕ)+ಮಆಶ್=ಜೀವನೋಪಾಯ (ಅರಬ್ಬಿ) ಎಂದು ಶಾಬ್ದಿಕ ಅರ್ಥ. "ಲಫಂಗಾ" ಅಥವಾ "ಲಫಂಗ" ಇದೂ ಪಾರಸೀಕ ಭಾಷೆಯಿಂದಲೇ ಉರ್ದುವಿಗೆ ಬಂದ ಮಾತು. ದುರ್ಮಾರ್ಗಿ, ವ್ಯಭಿಚಾರಿ, ಲಂಪಟ, ಬದ್‌ಮಾಶ್, ಪುಂಡ ಎಂದು ಉರ್ದುವಿನಲ್ಲಿ ಅದರ ಬಳಕೆ ಇದ್ದರೂ ಮೂಲ ಪಾರಸೀಕದಲ್ಲಿ ಅದಕ್ಕೆ ಬಡಾಯಿ ಕೊಚ್ಚುವವ, ಬರೇ ವಾಚಾಳಿ ಎಂಬ ಅರ್ಥವಿದೆಯೆಂಬುದಾಗಿ ಡಾ.ಶಂಕರ ಕೆದ್ಲಾಯರ ಗ್ರಂಥದಿಂದ ವೇದ್ಯವಾಗುತ್ತದೆ. ಮರಾಠಿಯಲ್ಲಿ ಕೂಡ 'ಲಫಂಗ'ಕ್ಕೆ ಚಾಣಾಕ್ಷ್ಯ ಮತ್ತು ಬಾಯ್ಬಡಕ ಎಂರ್ಥವೇ ಪ್ರಚಲಿತವಾಗಿದೆ. ಉರ್ದು-ಹಿಂದಿಗಳಲ್ಲಿ ಅದಕ್ಕಿಂತ ನೀಚಾರ್ಥ ಯಾಕೆ ಪ್ರಚಲಿತವಾಯಿತೋ ಹೇಳುವುದು ಕಷ್ಟವಾದರೂ ಪದಗಳು ಭಾಷೆಯಿಂದ ಭಾಷೆಗೆ ಹಾರುವಾಗ ಅರ್ಥಾಂತರ ಹೊಂದುವುದು ಅಪರೂಪವಲ್ಲ. "ಲುಚ್ಚಾ" ಎಂಬುದು ಮಾತ್ರ ದೇಶ್ಯವೇ. ಹಿಂದೀ ಮರಾಠಿಗಳಲ್ಲಿ ಅದು ದುರಾಚಾರಿ, ವಂಚಕ, ನೀಚ, ಅಪಹಾರಕ ಇತ್ಯಾದಿ ಅರ್ಥಗಳಲ್ಲಿ ಪ್ರಯೋಗಿಸಲ್ಪಡುತ್ತದೆ. ಬಹುಶಃ ಅದು ಸಂಸ್ಕೃತ "ಲುಂಚ್" (ಕಸಿದುಕೋ) ಎಂಬ ಧಾತುವಿನಿಂದ ಸಿದ್ಧಿಸಿದ್ದು.

ಗಾಂಭೀರ್ಯವಿಲ್ಲದೆ ಬರೇ ಬೇಜವಾಬ್ದಾರಿಯಿಂದ ಮಾತಾಡುವುದಕ್ಕೆ ಗಳಹುವುದೆಂಬ ಶಬ್ದ ಕನ್ನಡದಲ್ಲಿದೆ ತಾನೇ? ಅದಕ್ಕೆ "ಗಪ್ಪ" ಹೊಡೆಯುವುದೆಂದು ಕೂಡ ಉರ್ದುವಿನಿಂದ ಅನುದಾದ ಪದವಿದೆ. "ಗಪ್" ಎಂಬ ಪದ ಪಾರಸಿ ಪದವೆಂದು ಉರ್ದು ಕೋಶವೊಂದು ಹೇಳುತ್ತದೆ. ಆದರೆ ಕರಾವಳಿಯಲ್ಲಿ "ಗಪ್ಲಾಸ್" ಅಥವಾ "ಗಪ್ಪಾಸ್" ಎಂಬ ಶಬ್ದ ಹೆಚ್ಚು ಪ್ರಚಲಿತವಾಗಿದೆ. ಇದು ಅರಬ್ಬಿ ಪದವಾದ "ಗಫಲತ್" ಎಂಬುದರ ರೂಪಾಂತರ. ಬೇಜವಾಬ್ದಾರಿ ಟೊಳ್ಳು ಹರಟೆಯೆಂದೇ ಅದರರ್ಥ. ಒಂದು ಸ್ವಾರಸ್ಯವೆಂದರೆ ಇಂಗ್ಲೀಷಿನಲ್ಲಿ ಕೂಡ 19ನೇ ಶತಮಾನದಿಂದ ಇದೇ ಅರ್ಥದ "ಗಫ್" (guff) ಎಂಬ ಶಬ್ದ ಚಲಾವಣೆಗೆ ಬಂದಿದೆ. ಇದು ಗಾಳಿ ಊದುವುದು ಎಂಬರ್ಥದ "ಪಫ್" (puff) ಎಂಬುದರ ಅನುಕರಣವೆಂದು ಆಕ್ಸಫರ್ಡ್ ನಿಘಂಟಿನ ಹೇಳಿಕೆ. ಆದರೆ ಟೊಳ್ಳು ಮಾತುಗಳಿಗಿರುವ ಪದಗಳು ಮೂರು ಭಾಷೆಗಳಲ್ಲಿ ಒಂದೇ ಧ್ವನಿಯುಳ್ಳವುಗಳಾಗಿರುವುದು ವಿಶೇಷ.

★

ಡಾ. ಭೈರಪ್ಪನವರ "ವಂಶವೃಕ್ಷ" ಕಾದಂಬರಿಯಿಂದಾಗಿ "ಶ್ರೋತ್ರಿಯ" ಎಂಬ ಬ್ರಾಹ್ಮಣ ಅಡ್ಡ ಹೆಸರು ಜನಜನಿತವಾಯಿತು. "ಶ್ರೋತ್ರಿಯ" ಎಂದರೆ ವಿಧಿವತ್ತಾಗಿ ವೇದಾಭ್ಯಾಸ ಮಾಡಿದ ವೈದಿಕ ಬ್ರಾಹ್ಮಣನೆಂದು ಪರಿಷತ್ತಿನ ಸಂಕ್ಷಿಪ್ತ ನಿಘಂಟು ತಿಳಿಸುತ್ತದೆ. "ಶ್ರುತಿ" ಎಂದರೆ ವೇದಗಳಿಗೆ ಒಂದು ಹೆಸರು (ಇತರ ಅರ್ಥಗಳೊಡನೆ). ಹಾಗೆಯೇ "ಶ್ರೌತ" ಎಂದರೆ ವೇದಗಳಿಗೆ ಸಂಬಂಧಿಸಿದ್ದು, ವೇದಗಳಿಂದ ಅನುಮೋದಿಸಲ್ಪಟ್ಟ ಕರ್ಮ. "ಶ್ರುತ" ಎಂದರೆ ವಿದ್ಯೆ, ಪಾಂಡಿತ್ಯ; ಹೀಗೆ "ಬಹುಶ್ರುತ" ಎಂದರೆ ತುಂಬಾ ವಿದ್ಯಾವಂತ. ಹಾಗೇನು ಶುಶ್ರೂಷೆಯೆಂದರೆ ಸೇವೆ, ಪರಿಚರ್ಯೆ.

ಇವೆಲ್ಲ ಮತ್ತು ಇನ್ನೂ ("ಶ್ರು"-ಎಂಬುದನ್ನೊಳಗೊಂಡ) ಅನೇಕ ಪದಗಳು ಪ್ರಾಚೀನ ಭಾರತೀಯರ ವಿದ್ಯೆ, ಜ್ಞಾನ ಮೊದಲಾದವುಗಳ ಕಲ್ಪನೆಯ ಬಗ್ಗೆ ಒಂದು ವಿಶೇಷವನ್ನು ತಿಳಿಯಪಡಿಸುತ್ತದೆ. "ಶ್ರು" ಧಾತುವಿಗೆ ಸಂಸ್ಕೃತದಲ್ಲಿ "ಕೇಳು"ವುದೆಂದು ಅರ್ಥ. "ಶ್ರುತ" ಎಂದರೆ ಕೇಳಿದ್ದು. "ಶ್ರುತಿ" ಎಂದರೆ ಕೇಳಿಬಂದದ್ದು. ವೇದಗಳು ಆದ್ಯ ಋಷಿಗಳಿಗೆ ಒಂದು ತರದ ಭಾವಾವೇಶದ ಸ್ಥಿತಿಯಲ್ಲಿ ಕೇಳಿಸಿಕೊಂಡವು; ಭಾವಾವೇಶದ ಸ್ಥಿತಿಯಲ್ಲಿ ಅವರು ರಚಿಸಿದ ಕೃತಿಗಳಲ್ಲ. ವೇದದ ಅಕ್ಷರ ಅಕ್ಷರವೂ- ಶಬ್ದಶಬ್ದವೂ ಇದ್ದಕ್ಕಿದ್ದಂತೆ ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟದ್ದು; ಮತ್ತು ಬದಲಾವಣೆಯಾಗದ ಸತ್ಯವನ್ನು ಹೇಳುವಂಥಾದ್ದು. ಈ ಮಂತ್ರಗಳನ್ನು ಪರಂಪರೆಯಿಂದ ಆ ಮಂತ್ರದ ದ್ರಷ್ಟಾರ(=ಮಂತ್ರಗಳನ್ನು ನೋಡಿದವರು)ರಿಂದ ಬಾಯಿದೆರೆಯಾಗಿ ಉಪದೇಶಿಸಿ ದಾಟಿಸಿಕೊಂಡು ಬಂದದ್ದಾಗಿದೆ. ಅಂದರೆ ಸಾವಿರಾರು ವರ್ಷಗಳಿಂದ ಕಿವಿಯ (ಶ್ರುತಿ) ಮೂಲಕವೆ ಕಲಿಸಿ ಕಲಿತು ಬಂದದ್ದು ಹೊರತು ಓದಿಬಂದದ್ದಲ್ಲ. ನಿಜಕ್ಕೂ ವಿದ್ಯೆಯೆಂಬುದು ಗುರುಮುಖದಿಂದ ಕೇಳಿ ಕಲಿಯತಕ್ಕದ್ದು. ವೈದಿಕ ವಿದ್ಯೆಯಿಂದ ಆರಂಭವಾದ ಈ ಪರಂಪರೆ ಅವೈದಿಕ ವಿದ್ಯೆಗಳಿಗೂ ಅನಂತರದ ಕಾಲದಲ್ಲಿ ಅನ್ವಯಿಸಿತು. "ಶ್ರುತಿ" ಪದವಿ ವೇದಗಳಿಗೆ ಮಾತ್ರ ಸಿಕ್ಕಿದರೂ ಎಲ್ಲ ವಿದ್ಯೆಯೂ "ಶ್ರುತ"(ಕೇಳಿದ್ದು)ಗಳೇ-ಬರೇ ಓದಿನಿಂದ ಬರತಕ್ಕವುಗಳಲ್ಲ. "ಗುರುವಿಲ್ಲದ ವಿದ್ಯೆ" ಓದಿ ಪಡೆದ ಜ್ಞಾನ-ಸಿದ್ಧಿಯನ್ನು ಕೊಡುವುದಿಲ್ಲ. ಗುರುವಿನಿಂದ ವೇದಗಳನ್ನಾಗಲಿ, ಇನ್ನಾವುದನ್ನಾಗಲಿ ಕಲಿಯಬೇಕಾದರೆ "ಗುರು ಶುಶ್ರೂಷೆ" ಮಾಡಬೇಕು. ಶುಶ್ರೂಷೆಯೆಂದರೆ ಕೇಳುವ (ಉತ್ಕಟ) ಬಯಕೆ. ಅದು ಬರೇ "ಗುರುಗಳೇ ನನಗೆ ಹೇಳಿ, ಹೇಳಿ" ಎಂದು ಗಂಟು ಬೀಳುವುದರಿಂದಲ್ಲ, ಅವರನ್ನು ಸರ್ವವಿಧದಿಂದ ಸೇವಿಸಿ ಪರೀಕ್ಷೆಗೊಳಪಟ್ಟು, ಒಲಿಸಿ ಪಡೆಯತಕ್ಕದ್ದು. ಆದ್ದರಿಂದ ಶುಶ್ರೂಷೆ ಎಂದರೆ ಕೇಳಲು ತರಗತಿಯಲ್ಲಿ ಕಿವಿ ನೆಟ್ಟಗೆ ಮಾಡಿ ಕುಳಿತುಕೊಳ್ಳುವುದು ಮಾತ್ರವಲ್ಲ, ಸೇವೆ, ಮರ್ಜಿ ಹಿಡಿಯುವುದು ಎಲ್ಲ ಒಳಗೊಂಡದ್ದು. ಹೀಗೆ ಬಹಳ ಹಂಬಲದಿಂದ ಪಡೆದದ್ದೇ ನಿಜ ಜ್ಞಾನ. ಜ್ಞಾನವೆಂಬುದು ಗುರು ಶುಶ್ರೂಷೆಯಿಂದಲೇ ಪಡೆಯತಕ್ಕದ್ದೆಂಬ ಭಾವನೆ ವೈದಿಕದಲ್ಲಿ ಮಾತ್ರವಲ್ಲ, ಆಧ್ಯಾತ್ಮಿಕ (ಉದಾ:- ಬ್ರಹ್ಮಜ್ಞಾನದ ಸಿದ್ಧಿ) ಮತ್ತು ಲೌಕಿಕ ಜ್ಞಾನದ ವಿಷಯದಲ್ಲಿ ಕೂಡ ಇಂದಿಗೂನಡೆದು ಬಂದದ್ದು.

ಜ್ಞಾನಕ್ಕೆ, ವಿದ್ಯೆಗೆ ಸಂಬಂಧಿಸಿ ನಡೆದುಬಂದ ಈ ಮಾತು-ಶುಶ್ರೂಷೆ-ಮುಂದೆ ಎಲ್ಲ ಬಗೆಯ ಸೇವೆಗೆ ಅನ್ವಯಿಸಿತು. ಅಗಸ್ತ್ಯರನ್ನು ಶುಶ್ರೂಷಿಸಲು ಬಂದದ್ದಾಕ್ಕಾಗಿ ರಾಮ ಋಷಿಗೆ ಹೇಳಿ ಕಲಿಸುವಾಗ (ರಾಮ, ಅರಣ್ಯ, 12, 8) ಒಟ್ಟು ಅವರಿಗೆ ಗೌರವೀಯುವುದಷ್ಟೇ ತಾತ್ಪರ್ಯವಾಗಿತ್ತು. "ಶುಶ್ರೂಷಸ್ವ ಗುರೂನ್" ಎಂದು ಕಣ್ವಮುನಿ ಶಕುಂತಲೆಗೆ ಹೇಳಿ ಗಂಡನ ಮನೆಗೆ ಕಳಿಸುವಾಗ ಯಾವಾಗಲೂ ಅವರ ಬೇಕು ಬೇಡಗಳನ್ನು ಕೇಳಿ ತಿಳಿದುಕೊಂಡು ಹಿರಿಯರ ಸೇವೆ ಮಾಡು ಎಂಬುದು ಅಭಿಪ್ರಾಯ. ರೋಗಿಗಳ "ಶುಶ್ರೂಷೆ"ಯಲ್ಲಿ ಅವರನ್ನು "ಕೇಳ"ತಕ್ಕದ್ದು ಬಹಳ ಇಲ್ಲ. ಮಗುವಿನ ಆರೈಕೆ ಮಾಡುವವಳು "ಶುಶ್ರೂ" ಎನ್ನುವಾಗ ಅದರ ಇಚ್ಛೆಗಳನ್ನು ಕೇಳಿ ತಿಳಿದುಕೊಳ್ಳುವ ಪ್ರಶ್ನೆಯೇ ಇಲ್ಲ. ಮಹಾ ವೈದ್ಯನಾದ "ಸುಶ್ರುತ"ನ ಅಂಕಿತನಾಮ ಬಹುಶಃ ಅದಲ್ಲ-ಅದು ಆವನ ಬಿರುದು-ಬಹಳ ಕೇಳಿದವನು-ಎಂದು; ಅರ್ಥಾತ್ ಭಾರಿ ಪಂಡಿತ. "ಬರೆ"ಯುವ (ಲಿಖ್) "ಓದು"ವ (ಪಠ್)ಕುರಿತ ಪದಗಳು ನಮ್ಮಲ್ಲಿ ತಡವಾಗಿಯೆ ಕಾಣಿಸಿಕೊಂಡವು. "ಓದು" ಎಂಬ ಕನ್ನಡ ಪದವಾಗಲಿ, "ಪಠ್" ಎಂಬ ಸಂಸ್ಕೃತ ಪದವಾಗಲಿ ಪುಸ್ತಕವನ್ನು ಹಿಡಿದು ಓದುವುದಕ್ಕೆ ಮಾತ್ರವಲ್ಲ, ಬಾಯಿಪಾಠ ಹೇಳುವುದಕ್ಕೂ ಸಲ್ಲುತ್ತವೆ. "ಶ್ಲೋಕ, ಪಠತಿ" ಗಿಳಿ ಓದುತ್ತದೆ. ಗಟ್ಟಿಯಾಗಿ ಹೇಳುವುದಷ್ಟೇ ಇಲ್ಲಿ ಇಂಗಿತ.

ಈ ಅಲಿಖಿತ ಶ್ರುತ ಪರಂಪರೆಯಿಂದಾಗಿ ನಮ್ಮ ದೇಶಕ್ಕೆ ಎಷ್ಟೋ ನಷ್ಟವಾಯಿತು. ಆದರೆ ಮಹಾಭಾರತ, ವೇದಗಳು ಮೊದಲಾದ ಮಹಾಪ್ರಾಚೀನ ಸಾಹಿತ್ಯ ಉಳಿದುಬರಲೂ ಅದೇ ಕಾರಣವಾಯಿತು. ಶತ್ರುಗಳು ಗ್ರಂಥಾಲಯಗಳನ್ನು ಸುಟ್ಟರು; ಸಾಹಿತ್ಯವನ್ನು ನಾಶಮಾಡಲು ಅವರಿಂದಾಗಲಿಲ್ಲ. ಹಾವೆಂ

ಅಂದು ರಣರಂಗದ ಸೈನಿಕ,
ಇಂದು ಸಮಾಜ ಸುಧಾರಕ

# ಅಣ್ಣಾ ಹಜಾರೆ



15 ವರ್ಷಗಳ ಹಿಂದಿನ ಮಾತು. ರಾಳೆಗಾಂವಶಿಂದಿ ಎಂಬ ಗ್ರಾಮ ಮಹಾರಾಷ್ಟ್ರದ ಅಹಮ್ಮದನಗರ ಜಿಲ್ಲೆಯ ಶುಷ್ಕಭಾಗಗಳಲ್ಲೊಂದು. ಮಳೆಗಾಲದಲ್ಲಿ ಮಾತ್ರ ಹೊಲಗಳಿಗೆ ನೀರು ದೊರೆಯುತ್ತಿದ್ದುದರಿಂದ ಇಲ್ಲಿಯ ರೈತ, ವರ್ಷದಲ್ಲಿ ಒಂದು ಬೆಳೆಯನ್ನು ಮಾತ್ರ ಪಡೆಯುತ್ತಿದ್ದ. ಸುಮಾರು 300 ಕುಟುಂಬಗಳ ಈ ಗ್ರಾಮದಲ್ಲಿ ಶೇಕಡಾ 70ರಷ್ಟು ಜನ ಕಡುಬಡವರು. ಇಲ್ಲಿ 40 ಕಳ್ಳ ಸರಾಯಿಭಟ್ಟಿಗಳಿದ್ದು ಕುಡುಕರ ಮತ್ತು ಜೂಜಾಡುವವರ ಸಂಖ್ಯೆಯೂ ಹೆಚ್ಚಿತ್ತು. ಕಳವು ಮತ್ತು ಹೊಡೆದಾಟಗಳು ದಿನನಿತ್ಯದ ಸಂಗತಿಗಳಾಗಿದ್ದವು.

ಆದರೆ ಇಂದು ಅದೇ ರಾಳೆಗಾಂವಶಿಂದಿಯಲ್ಲಿ ಸಾಕಷ್ಟು ಮಾರ್ಪಾಡಾಗಿದೆ. ಇಂದು ಇಲ್ಲಿನ ಹೊಲಗಳಲ್ಲಿ ಹೇರಳ ಪ್ರಮಾಣದಲ್ಲಿ ಧಾನ್ಯವನ್ನು ಬೆಳೆಯಲಾಗುತ್ತಿದೆ. ಇಲ್ಲೊಂದು ಬ್ಯಾಂಕು ಸ್ಥಾಪಿಸಲ್ಪಟ್ಟಿದೆಯಲ್ಲದೆ, ಬೋರ್ಡಿಂಗ್ ಸ್ಕೂಲು ಮತ್ತು ಜೈವಿಕ ಅನಿಲ (Biogas Plant) ಸ್ಥಾವರಗಳೂ ಕಾಣ ಸಿಗುತ್ತವೆ. ಮೊದಲು ಎತ್ತಿನ ಬಂಡಿ ನಡೆಸುತ್ತಿದ್ದ ಈ ಗ್ರಾಮದ ರೈತರು ಈಗ ದ್ವಿಚಕ್ರವಾಹನಗಳನ್ನು ಬಳಸುತ್ತಿದ್ದಾರೆ. ಇದಕ್ಕಿಂತ ಮಿಗಿಲಾಗಿ ಈ ಗ್ರಾಮದಲ್ಲಿ ಈಗ ಯಾರೂ ಸರಾಯಿ ಕುಡಿಯುವುದಿಲ್ಲ. ಸಿಗರೇಟು ಅಥವಾ ಬೀಡಿ ಸೇದುವವರ ಸಂಖ್ಯೆಯೂ ಗಣನೀಯವಾಗಿ ಕಡಿಮೆಯಾಗಿದೆ. ಸುಮಾರು ಹತ್ತು ವರ್ಷಗಳಲ್ಲಿ ಒಂದು ಅಪರಾಧವೂ ನಡೆದಿಲ್ಲ. ಅಸ್ಪೃಶ್ಯತೆಯೂ ದೂರವಾಗುತ್ತಿದೆ.

ಇಂಥ ಕ್ರಾಂತಿಕಾರಿ ಬದಲಾವಣೆ ತಂದ ವ್ಯಕ್ತಿಯೇ ಕಿಶನ ಬಾಬುರಾವ್ ಹಜಾರೆ. "ನಾವೆಲ್ಲ ಹಜಾರೆಗೆ ಕೃತಜ್ಞರಾಗಿದ್ದೇವೆ. ಇವನಿಂದಾಗಿ ಬೇರೆ ಗ್ರಾಮಗಳಷ್ಟೇ ಅಲ್ಲ, ಹತ್ತಿರ ಜಿಲ್ಲೆಯವರು ಕೂಡ ರಾಳೆಗಾಂವ-

*('ರೀಡರ್ಸ್ ಡೈಜೆಸ್ಟ್'ನಲ್ಲಿ ಪ್ರಕಟವಾದ ಲೇಖನದ ಆಧಾರದಿಂದ)*

## ಗೋಪಾಲ ಆಶ್ರಿತ

ಶಿಂದಿಯಿಂದ ಪ್ರೇರಣೆ ಪಡೆದಿದ್ದಾರೆ,'' ಎಂದು ಅಹಮ್ಮದನಗರದ ಜಿಲ್ಲಾಧಿಕಾರಿ ರಾಜೀವ ಅಗರವಾಲ್ ಬಹಳ ಹೆಮ್ಮೆಯಿಂದ ಹೇಳುತ್ತಾರೆ.

ಹಾಗಾದರೆ ಯಾರು ಈ ಹಜಾರೆ? ಅವನೊಬ್ಬ ಸರಳ ಒಮ್ಮೆಲೆ ಯಾರ ಮೇಲೂ ಪ್ರಭಾವ ಬೀರದಂಥ ವ್ಯಕ್ತಿ. ಒಬ್ಬ ನಾಯಕನಿಗಿರಬೇಕಾದ ಹಿನ್ನೆಲೆ ಅಥವಾ ಗುಣಗಳು ಇವನಲ್ಲಿ ಕಾಣಸುವುದಿಲ್ಲ. ಬಡ ರೈತ ಕುಟುಂಬದಲ್ಲಿ ಹುಟ್ಟಿದ ಹಜಾರೆಗೆ ಏಳನೆಯ ತರಗತಿಯನ್ನು ದಾಟುವದಾಗಲಿಲ್ಲ. ಸಿಡುಕಿನ ಸ್ವಭಾವದ ಈತ ಯಾವಾಗಲೂ ಜಗಳಾಡಿ ಪೇಚಿನಲ್ಲಿ ಸಿಕ್ಕಿ ಬೀಳುತ್ತಿದ್ದ. ಒಮ್ಮೆ ಸಣ್ಣ ವ್ಯಾಪಾರಿಗಳನ್ನು ಗೋಳಾಡಿಸುತ್ತಿದ್ದ ಪೋಲೀಸನನ್ನು ಹಜಾರೆ ಚೆನ್ನಾಗಿ ಬಡಿದ. ಇದರಿಂದಾಗಿ ಬೊಂಬಾಯಿಯ ಪೋಲೀಸರ 'ಕೃಪಾದೃಷ್ಟಿ' ಇವನ ಮೇಲೆ ಬಿತ್ತು.

ನಂತರ, ಸೈನ್ಯದಲ್ಲಿದ್ದಾಗಲೂ ಜಗಳಗಂಟನೆಂದು ಹೆಸರು ಗಳಿಸಿಕೊಂಡ. ಸೈನ್ಯ ಸೇರಿದ ಕೆಲವೇ ದಿನಗಳಲ್ಲಿ ಗಲ್ಲಿಯ ಹಿರಿಯ ಅಧಿಕಾರಿ ಭೋಜನಶಾಲೆಯ ಹಣವನ್ನು ತಿಂದು ಹಾಕಿದ್ದ ವಿಷಯ ಇವನಿಗೆ ತಿಳಿಯಿತು. ಈ ಬಗ್ಗೆ ಎಲ್ಲರ ಸಮ್ಮುಖದಲ್ಲಿ ಆ ಅಧಿಕಾರಿಯನ್ನು ಕೇಳಿದಾಗ ಅದಕ್ಕೆ ತಕ್ಕ ಶಾಸ್ತಿಯೆನ್ನುವಂತೆ ಹಜಾರೆಯನ್ನು ದೂರದ ನೇಫಾಕ್ಕೆ ವರ್ಗಾಯಿಸಲಾಯಿತು.

1964ರಲ್ಲಿ ಹಜಾರೆ ದಿಲ್ಲಿಯ ರೈಲು ನಿಲ್ದಾಣದಲ್ಲಿ ಸ್ವಾಮಿ ವಿವೇಕಾನಂದರನ್ನು ಕುರಿತು ಬರೆಯಲಾದ ಪುಸ್ತಕವೊಂದನ್ನು ಕೊಂಡ. ಈ ಪುಸ್ತಕದ ಪ್ರಭಾವದಿಂದಾಗಲಿ ಹಜಾರೆಯ ಸಂಪೂರ್ಣ ಬದಲಾವಣೆಯಾಯಿತು. ಜನಸೇವೆಗಿಂತ ಮಿಗಿಲಾದ ಸೇವೆ ಬೇರೊಂದಿಲ್ಲವೆಂದಾತ ನಿರ್ಧರಿಸಿದ. ಈ ಪುಸ್ತಕದ ಪ್ರಭಾವದಿಂದಾಗಿ ಆತ ಧರ್ಮಗ್ರಂಥಗಳನ್ನೂ ಸಮಾಜ ಸುಧಾರಕರ ಜೀವನ ಚರಿತ್ರೆಗಳನ್ನು ಬಹಳ ಶ್ರದ್ಧೆಯಿಂದ ಓದಹತ್ತಿದ. 1965ರ ಯುದ್ಧದಲ್ಲಿ ಹಜಾರೆ ಭಾರತೀಯ ಸೇನೆಯ ಸಜ್ಜಿತ ವಾಹನವೊಂದರ ಚಾಲಕನಾಗಿದ್ದ. ಖೇಮಕರಣದಲ್ಲಿ ಪಾಕಿಸ್ತಾನಿ ಸ್ಯಾಬರ್ ಜೆಟ್ಟುಗಳ ದಾಳಿಯಿಂದ ಪಾರಾಗಿ ಬಂದಂದಿನಿಂದ ಹಜಾರೆ ಸಸ್ಯಾಹಾರಿಯಾದನಲ್ಲದೆ ಕುಡಿಯುವದನ್ನೂ ಧೂಮಪಾನವನ್ನೂ ಬಿಟ್ಟುಬಿಟ್ಟ. ತನ್ನನ್ನು ಸಂಪೂರ್ಣವಾಗಿ ಸಮಾಜಸೇವೆಯಲ್ಲಿ ತೊಡಗಿಸಿಕೊಳ್ಳಬೇಕೆಂಬ ಉದ್ದೇಶದಿಂದ ಹಜಾರೆ ಬ್ರಹ್ಮಚಾರಿಯಾಗಿರಲು ನಿರ್ಧರಿಸಿದ.

ಅದಕ್ಕಾಗಿ ಆತ ತನ್ನ ಹುಟ್ಟೂರಾದ ರಾಳೆಗಾಂವಶಿಂದಿಯನ್ನ ಆರಿಸಿಕೊಂಡ. ಸೈನ್ಯದಲ್ಲಿದ್ದಾಗ ಹಜಾರೆ ಆಗಾಗ ತನ್ನ ಹಳ್ಳಿಗೆ ಹೋಗುತ್ತಿದ್ದ. ಆ ಹಳ್ಳಿಯ ಸ್ಥಿತಿ ಹದಗೆಡುತ್ತಿರುವುದನ್ನು ಕಂಡು ಅವನ ಮನಸ್ಸು ಗಾಸಿಗೊಂಡಿತ್ತು. ಊರಿನಲ್ಲಿನ ದೇವಾಲಯ ಕೂಡ ಬಿದ್ದುಹೋಗಿತ್ತು. ''ದೇವಾಲಯದ ಪುನರ್ನಿರ್ಮಾಣವನ್ನು ನಾನು ಪ್ರಾರಂಭಿಸಿದರೆ ಜನರು ದೇವರ ಬಗ್ಗೆ ಚಿಂತಿಸಬಹುದಲ್ಲದೆ ಉತ್ತಮ ನಾಗರಿಕರಾಗಬಹುದು,'' ಎಂದಾತ ಯೋಚಿಸಿದ. ಆದರೆ ಬಿದ್ದುಹೋದ ದೇವಾಲಯ ಕಟ್ಟಲು ಅವನಲ್ಲಿ ಹಣವಿರಲಿಲ್ಲ.

1975ರಲ್ಲಿ ಸೈನ್ಯದಿಂದ ನಿವೃತ್ತನಾದಾಗ ಅವನಿಗೆ ಇಪ್ಪತ್ತು ಸಾವಿರದಷ್ಟು ಹಣ ದೊರಕಿತು. ತನ್ನ ಗ್ರಾಮಕ್ಕೆ ಬಂದು ನೆಲಸಿದ ಕೂಡಲೇ ಈ ಹಣವನ್ನು ದೇವಾಲಯ ಕಟ್ಟುವ ಕೆಲಸಕ್ಕೆ ಬಳಸಿದ. ಹಜಾರೆಯ ಈ ಕೆಲಸ ಗ್ರಾಮದ ಬಹುತೇಕ ಜನರ ಮೇಲೆ ಪ್ರಭಾವ ಬೀರಲಿಲ್ಲ. ಆದರೆ ಮಂದಿರದ ಕೆಲಸ ಪೂರ್ಣಗೊಳ್ಳುವ ಹಂತಕ್ಕೆ ಬಂದಾಗ ಜನರಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಕೆಲವರು ಕಟ್ಟಿಗೆಯನ್ನು ದಾನವಾಗಿಕೊಟ್ಟರು. ಮತ್ತೆ ಕೆಲವರು ಶ್ರಮದಾನ ಮಾಡುವ ಮೂಲಕ ಈ ಕೆಲಸದಲ್ಲಿ ಪಾಲ್ಗೊಂಡರು.



"ಲೇ, ನೀನು ಸಂದರ್ಶನ ಕೊಡೋದು ಟೀವಿಗಲ್ಲ ರೇಡಿಯೋಕ್ಕೆ.."

"ನಿಃಸ್ವಾರ್ಥಿಯಾಗಿ ದುಡಿದರೆ ಜನ ಬೆಂಬಲ ದೊರೆದೇ ದೊರೆಯುತ್ತದೆಂಬುದನ್ನು ನಾನಿಲ್ಲಿ ಮನಗಂಡಿದ್ದೇನೆ," ಎಂದು ಹಜಾರೆ ಹೆಮ್ಮೆಯಿಂದ ಹೇಳುತ್ತಾನೆ.

ಹಜಾರೆಗೆ ಬೆಂಬಲ ನೀಡಿದ ಹಳ್ಳಿಗರಲ್ಲಿ ಕೆಲವು ಯುವಕರೂ ಇದ್ದಾರೆ. ಅವರೆಲ್ಲ ಹಜಾರೆಯನ್ನು 'ಅಣ್ಣಾ' ಎಂದೇ ಕರೆಯುತ್ತಾರೆ. ಗ್ರಾಮ ಸುಧಾರಣೆಯ ಈ ಕಾರ್ಯದಲ್ಲಿ ಯುವಕರ ಸಂಖ್ಯೆ ಬೆಳೆಯುತ್ತ ಹೋಯಿತು. ಯುವಕರೆಲ್ಲ ಕೂಡಿ 'ತರುಣ ಮಂಡಳ'ವೊಂದನ್ನು ಸ್ಥಾಪಿಸುವಂತೆ 'ಅಣ್ಣಾ' ಹಜಾರೆ ಅವರಿಗೆ ಸೂಚಿಸಿದ.

ಒಂದು ರಾತ್ರಿ ಹತ್ತಿರದ ಹಳ್ಳಿಯ ಕೆಲವು ಕುಡುಕರು ರಾಳೆಗಾಂವದ ಗುಲಾಬ ಭಾಲೇಕರ ಎಂಬ 40ವರ್ಷದ ರೈತನು ತಮಗೆ ನಮಸ್ಕರಿಸಲಿಲ್ಲವೆಂದು ಅವನನ್ನು ಹಿಡಿದು ಬಡಿದ ಸುದ್ದಿ ಹಜಾರೆಗೆ ತರುಣ ಮಂಡಳದ ಸದಸ್ಯರಿಂದ ತಿಳಿಯಿತು. ಕೂಡಲೇ ಊರಿನ ಜನರ ಒಂದು ಸಭೆ ಕರೆಯಲಾಯಿತು. ಈ ಸಭೆಯಲ್ಲಿ ಕುಡಿತ, ಕಳ್ಳಭಟ್ಟಿ ಸರಾಯಿ ಮತ್ತು ಜೂಜಾಟಗಳನ್ನು ಖಂಡಿಸಿ ಹಜಾರೆ ಮಾತಾಡಿ ಅಂಗಡಿಗಳನ್ನು ಮುಚ್ಚುವಂತೆ ಭಟ್ಟಿ ಸರಾಯಿಗಾರರನ್ನು ಎಚ್ಚರಿಸಿದ. ಈ 'ಅಣ್ಣಾ' ಮತ್ತು ಅವನ ತರುಣ ಮಂಡಳಿಯವರಿಗೆ ಹೆದರಿದ ಕೆಲವು ಭಟ್ಟಿಕಾರರು ಇವರ ಆಜ್ಞೆಗೆ 'ಅಸ್ತು' ಎಂದರು. ಮತ್ತೆ ಕೆಲವರು ಮನಃಪರಿವರ್ತನೆಯಾಗಿ ತಮ್ಮ ಸರಾಯಿ ಅಡ್ಡೆಗಳನ್ನು ಕಿತ್ತೊಗೆದರು. ಆ ಗ್ರಾಮದಲ್ಲಿ ಭಟ್ಟಿಯ ವ್ಯವಹಾರವನ್ನು ನಿಲ್ಲಿಸುವುದರಿಂದ ಮಾತ್ರ ಹಜಾರೆ ತೃಪ್ತಿಪಡಲಿಲ್ಲ. ಕುಡುಕರು ಮತ್ತೆಲ್ಲಾದರೂ ಹೋಗಿ ಕುಡಿದು ಬರಬಹುದೆಂಬ ಶಂಕೆ ಅವನಿಗಿತ್ತು. ಆದ್ದರಿಂದ, "ನೀವು ಎಲ್ಲಾದರೂ ಕುಡಿದು ಬಂದು ಇಲ್ಲಿ ಗಲಾಟೆ ಮಾಡಿದರೆ, ಆಮೇಲೆ ನಿಮ್ಮ ಗತಿ ಏನಾಗುವದೋ ನೋಡುವಿರಂತೆ," ಎಂಬ ಎಚ್ಚರಿಕೆಯ ಮಾತನ್ನೂ ಆತ ಕೊಟ್ಟ.

ಕೆಲವೇ ದಿನಗಳಲ್ಲಿ, ಅವನು ನುಡಿದಂತೆ ನಡೆದು ತೋರಿಸುವ ಪ್ರಸಂಗ ಬಂತು. ಹತ್ತಿರದ ಹಳ್ಳಿಯಲ್ಲಿ ಅತಿಯಾಗಿ ಕುಡಿದು ಬಂದ ಮೂರು ಜನರನ್ನು, ಗುಡಿಯ ಕಂಬಗಳಿಗೆ ಹಿಡಿದು ಕಟ್ಟಿಸಿ, ಸೈನ್ಯದಲ್ಲಿದ್ದಾಗ ತಾನು ಕಟ್ಟಿಕೊಳ್ಳುತ್ತಿದ್ದ ಟೊಂಕಪಟ್ಟಿಯಿಂದ ಹಜಾರೆ ಹೊಡೆದ. ಈ ವರ್ತನೆ ಕೆಲವರಿಗೆ ಸರಿ ಎನಿಸಲಿಲ್ಲ. ಆದರೆ ಹಜಾರೆ, "ಗ್ರಾಮೀಣ ಸಮಾಜ ಇನ್ನೂ ಕಠಿಣವಾಗಿಯೇ ಇದೆ. ಇಲ್ಲಿ ಬದಲಾವಣೆ ತರಬೇಕಾದರೆ ನಾವೂ ಕಠಿಣವಾಗಿಯೇ ವ್ಯವಹರಿಸಬೇಕಾಗುತ್ತದೆ," ಎಂದೆನ್ನುತ್ತಾನೆ. ಕುಡಿತವನ್ನು ರಾಳೆಗಾಂವದಿಂದ ದೂರ ಮಾಡುವಲ್ಲಿ ಯಶಸ್ವಿಯಾದ ಹಜಾರೆಗೆ, ದುಡಿಯಲು ಕೆಲಸವಿರದಿರುವುದೇ ಆ ಊರಿನ ಜನರ ಕಷ್ಟ ಕಾರ್ಪಣ್ಯಕ್ಕೆ ಒಂದು ಮುಖ್ಯ ಕಾರಣವೆಂಬುದು ಖಚಿತವಾಯಿತು. ಇವರಲ್ಲಿ ಕೆಲವರು ಕಳ್ಳ ಸರಾಯಿ ಭಟ್ಟಿಯಲ್ಲಿ ದುಡಿಯುತ್ತಿದ್ದವರೂ ಇದ್ದರು. ಆ ಭಟ್ಟಿಗ

ಳನ್ನು ಮುಚ್ಚಿದಾಗಿನಿಂದ ಅವರು ಇನ್ನಷ್ಟು ಬಡತನ ಅನುಭವಿಸಹತ್ತಿದ್ದರು. ಇದಕ್ಕೆ ಪರಿಹಾರವೇನೆಂದು ಚಿಂತಿಸುತ್ತಿದ್ದಂತೆ ಪತ್ರಿಕೆಯಲ್ಲಿ ಅಚ್ಚಾದ ಒಂದು ಲೇಖನ ಹಜಾರೆಯ ಕಣ್ಣಿಗೆ ಬಿತ್ತು. ಸರಕಾರ ಲೋಕೋಪಯೋಗಿ ಯೋಜನೆಯನ್ವಯ, ಕೂಲಿ ಕೆಲಸ ಒದಗಿಸುವ ಬಗ್ಗೆ ಆ ಲೇಖನದಲ್ಲಿ ಬರೆಯಲಾಗಿತ್ತು. ಹಜಾರೆ ಮತ್ತು ತರುಣ ಮಂಡಳದ ಸದಸ್ಯರೆಲ್ಲ ಸೇರಿ ಸುಮಾರು 300 ನಿರ್ಗತಿಕರಿಗೆ, ಈ ಯೋಜನೆಯಲ್ಲಿ ಕೆಲಸ ದೊರೆಯುವಂತೆ ಮಾಡಿದರು.

ಸರಕಾರ ನಡೆಸುವ ಅನೇಕ ಅಭಿವೃದ್ಧಿ ಯೋಜನೆಗಳ ಬಗ್ಗೆ ಸರಿಯಾದ ಪ್ರಚಾರವಿರದ ಕಾರಣದಿಂದಾಗಿ, ನಿರಕ್ಷರಿಗಳಾದ ಹಳ್ಳಿಗರಿಗೆ ಸರಿಯಾದ ಮಾಹಿತಿ ದೊರೆಯುವದಿಲ್ಲವೆಂಬುದು ಹಜಾರೆಯ ಗಮನಕ್ಕೆ ಬಂತು. ಈ ಯೋಜನೆಗಳ ಬಗ್ಗೆ ಚೆನ್ನಾಗಿ ಅಭ್ಯಾಸ ಮಾಡಿ ಅವುಗಳ ಲಾಭ ಪಡೆಯುವಲ್ಲಿ ಹಜಾರೆ ಹಳ್ಳಿಗರಿಗೆ ನೆರವಾದ. ಅಷ್ಟೇ ಅಲ್ಲ, ಇಂಥ ಯೋಜನೆಗಳ ಬಗ್ಗೆ ಹೆಚ್ಚೆಚ್ಚು ಮಾಹಿತಿಯನ್ನೂ ಸಂಗ್ರಹಿಸಹತ್ತಿದ. ಅದಕ್ಕಾಗಿ ಸರಕಾರಿ ಕಚೇರಿಗಳಿಗೆ ಹೋಗಿ ಸಂಬಂಧಿಸಿದ ಅಧಿಕಾರಿಗಳನ್ನು ಭೇಟಿಯಾದ.

ಕುಡಿಯುವ ನೀರಿನ ಸರಬರಾಜಿನ ಬಗ್ಗೆ ಆತ ಬಹಳ ಆಸಕ್ತಿ ವಹಿಸಿದ. ಅತಿಯಾದ ನೀರಿನ ಬರವನ್ನೆದುರಿಸುತ್ತಿದ್ದ ರಾಳೆಗಾಂವದಲ್ಲಿ ನೀರಾವರಿ ತಂತ್ರಗಳನ್ನು ಬಳಸಿಕೊಂಡು ನೀರಿನ ಸಮಸ್ಯೆಯನ್ನು ಪರಿಹರಿಸಬೇಕೆಂಬುದೇ ಅವನ ಮಹದಾಶೆ. ಸುಮಾರು 100 ಕಿಲೋಮೀಟರ್ ದೂರದಲ್ಲಿರುವ ಪುರಂಧರದಲ್ಲಿ ಜಲರಕ್ಷಣಾ ಯೋಜನೆ (Water Conservation Project)ಯೊಂದು ಯಶಸ್ವಿಯಾದ ಬಗ್ಗೆ ಹಜಾರೆ ಓದಿದ್ದ. ಈ ಪದ್ಧತಿಯ ಬಗ್ಗೆ ಅವನು ಚೆನ್ನಾಗಿ ತಿಳಿದುಕೊಂಡನಲ್ಲದೆ, ಅಂಥ ಸೌಲಭ್ಯ ರಾಳೆಗಾಂವಕ್ಕೂ ಒದಗುವಂತೆ ಯೋಜಿಸಲು ಇಲಾಖೆಯ ಇಂಜನಿಯ




"ಈ ಪುಸ್ತಕದಲ್ಲಿ ಮಣ್ಣಿನ ವಾಸನೆಯಿದೆಯೆಂದು ನೀವು ಹೇಳಿದಾಗ ಗೆದ್ದಲು ಮಣ್ಣಿನ ವಾಸನೆ ಎಂದು ನನ್ನ ತಲೆಗೆ ಹೊಳೆಯಲೇ ಇಲ್ಲ."

ರರನ್ನು ಒತ್ತಾಯಿಸಿದ. ಇದಕ್ಕಾಗಿ ಹಳ್ಳಿಗರು ಸಾಕಷ್ಟು ದುಡಿಯುವಂತೆ ಅವರನ್ನು ಪ್ರೋತ್ಸಾಹಿಸಿದ. ಅನೇಕ ಸಾಧನಗಳನ್ನು ಅಲ್ಲಿಯೇ ತಯಾರು ಮಾಡಿದ್ದರಿಂದಾಗಿ ವೆಚ್ಚ ಬಹಳ ಕಡಿಮೆಯಾಯಿತು. "ಗುಡಿಯನ್ನು ಕಟ್ಟಿದಂದಿನಿಂದ, ಈ ಹಳ್ಳಿಗರಲ್ಲಿ ಜೊತೆಯಾಗಿ ಕೆಲಸ ಮಾಡುವದರಿಂದಾಗುವ ಪ್ರಯೋಜನಗಳ ಬಗ್ಗೆ ಅರಿವು ಮೂಡಿದೆ. ಅಂದಿನಿಂದ ಶ್ರಮದಾನ ನಮ್ಮ ಜೀವನದ ವಿಧಾನವೇ ಆಗಿದೆ," ಎಂದೆನ್ನುತ್ತಾನೆ ಆತ.

ಇಂದು ರಾಳೆಗಾಂವದ ಶೇಕಡಾ 41ರಷ್ಟು ಹೊಲಗಳಿಗೆ ನೀರಾವರಿ ಸೌಲಭ್ಯ ದೊರಕಿದೆ. ಕೃಷಿ ಉತ್ಪನ್ನ ಐದುಪಟ್ಟು ಹೆಚ್ಚಾಗಿದೆ. ಈಗ ಶೇಕಡಾ 30 ರಷ್ಟು ಜನರು ಮಾತ್ರ ಇನ್ನೂ ಬಡತನ ರೇಖೆಯ ಕೆಳಗಿದ್ದಾರೆ. ಜನರ ಜೀವನಮಟ್ಟದಲ್ಲಿ ಸುಧಾರಣೆಯಾಗಿದೆಯಲ್ಲದೆ, ಎಷ್ಟೋ ಹಳ್ಳಿಗರು ಸಾಲದಿಂದ ಮುಕ್ತರಾಗಿದ್ದಾರೆ.

ರಾಳೆಗಾಂವ ಜನರ ಈ ಸ್ವಸಹಾಯ ಪದ್ಧತಿಯ ಯಶಸ್ಸು ಕೆಲವರಿಗೆ ಹಿಡಿಸಿಲ್ಲ. ತಮ್ಮ

ಹಳ್ಳಿಗೆ ಒಂದು ಪ್ರೌಢಶಾಲೆ ಬೇಕೆಂದು, ತಾವೇ 10 ಕೊಠಡಿಗಳ ಒಂದು ಕಟ್ಟಡವನ್ನು ಕಟ್ಟಿದಾಗ, ಅದನ್ನು ನಡೆಸಲು ಬೇಕಾಗುವ ಧನಸಹಾಯವನ್ನು ಸರಕಾರ ಮಂಜೂರಿ ಮಾಡಲಿಲ್ಲ. ಈ ನಿರಾಕರಣೆಗೆ ಕಾರಣ ಕಂಡು ಹಿಡಿಯಲು ಅಣ್ಣಾಗೆ ಬಹಳ ಸಮಯ ಹಿಡಿಯಲಿಲ್ಲ. ಹಿಂದಿನ ಚುನಾವಣೆಯಲ್ಲಿ ರಾಳೆಗಾಂವದಿಂದ ತನಗೆ ಮತದೊರಕಿರಲಿಲ್ಲವೆಂಬ ಕಾರಣದಿಂದ, ಸ್ಥಳೀಯ ಪ್ರಭಾವಶಾಲಿ ರಾಜಕಾರಣಿಯೊಬ್ಬ, ಸರಕಾರ ಧನಸಹಾಯ ನಿರಾಕರಿಸುವಂತೆ ಮಾಡಿದ್ದ. ಆದರೆ ಇದರಿಂದ ಹಜಾರೆ ಎದೆಗುಂದಲಿಲ್ಲ. ಹತ್ತು ಶಿಕ್ಷಕರನ್ನು ನೇಮಿಸಿಕೊಂಡು ತಾನೇ ಅವರಿಗೆ ಸಂಬಳದ ಬದಲಾಗಿ ಪುಕ್ಕಟೆ ಊಟ ಹಾಗೂ ವಸತಿ ಒದಗಿಸಿ, ಶಾಲೆ ನಡೆಯುವಂತೆ ನೋಡಿಕೊಂಡ. ಆನಂತರ ಅವನು ವ್ಯವಸ್ಥಿತ ರೀತಿಯಲ್ಲಿ ಅಹಮ್ಮದನಗರದಲ್ಲಿನ ಜಿಲ್ಲೆ ಮಟ್ಟದ ಅಧಿಕಾರಿಗಳ ಜೊತೆ ಮತ್ತು ಮುಂಬಯಿಯಲ್ಲಿನ ಶಿಕ್ಷಣ ಇಲಾಖೆಯ ಅಧಿಕಾರಿಗಳ ಜೊತೆ ವ್ಯವಹರಿಸಹತ್ತಿದ. ಮುಂಬಯಿಗೆ ಬಂದಾಗಲೆಲ್ಲ ಅವನು ಬಸ್‌ನಿಲ್ದಾಣಗಳಲ್ಲಿ ಸ್ನಾನ ಮಾಡಿ, ಕಡಿಮೆ ಖರ್ಚಿನಲ್ಲಿ ಕೆಲಸ ಮಾಡಿಕೊಳ್ಳುತ್ತಿದ್ದ. ಒಂದು ವರ್ಷದಲ್ಲಿ ಸುಮಾರು 30 ಸಲ ಮುಂಬಯಿಗೆ ಮತ್ತು ಅದಕ್ಕಿಂತ ಹೆಚ್ಚು ಸಲ ಅಹಮ್ಮದನಗರಕ್ಕೆ ಎಡತಾಕಿದರೂ ಫಲ ದೊರೆಯಲಿಲ್ಲ. ಕೊನೆಗೆ ಬೇಸತ್ತು, ಒಂದು ಬೆಳಿಗ್ಗೆ ಸುಮಾರು 250 ಹಳ್ಳಿಗರೊಡನೆ ಅಹಮ್ಮದನಗರದ ಜಿಲ್ಲಾ ಪರಿಷತ್ ಕಾರ್ಯಾಲಕ್ಕೆ ಬಂದ ಹಜಾರೆ, ತಾವೆಲ್ಲ ಉಪವಾಸ ಸತ್ಯಾಗ್ರಹ ಕೈಗೊಳ್ಳುವ ನಿರ್ಧಾರವನ್ನು ಘೋಷಿಸಿದ. ಕೆಲವೇ ಗಂಟೆಗಳಲ್ಲಿ ಸರಕಾರ ಹಣವೊದಗಿಸುವದೆಂಬ ಆಶ್ವಾಸನೆ ಮುಂಬಯಿಯಿಂದ ಬಂತು.

ಶಾಲೆಯನ್ನು ಸೈನ್ಯಪದ್ಧತಿಯ ತಳಹದಿಯ ಮೇಲೆ ನಡೆಸಲಾಗುತ್ತಿದೆ. ಭಾಷೆ, ವಿಜ್ಞಾನ ಮತ್ತು ಇತರ ವಿಷಯಗಳನ್ನು ಕಲಿಯುವ ಇಲ್ಲಿನ ವಿದ್ಯಾರ್ಥಿಗಳು ಆಟ ಮತ್ತು ವ್ಯಾಯಾಮದ ಅಭ್ಯಾಸವನ್ನು ಕಡ್ಡಾಯವಾಗಿ ಮಾಡಬೇಕು.

ರಾಳೆಗಾಂವ ತರುಣ ಮಂಡಳವು ವರ್ಷಕ್ಕೆ ಮೂರು ಸಲ ಸಾಮೂಹಿಕ ಲಗ್ನಗಳನ್ನು ನೆರವೇರಿಸುತ್ತದೆ. ಯಾರಿಗೂ ಒಂದು ಸಾವಿರ ರೂಪಾಯಿಗಿಂತ ಹೆಚ್ಚು ಖರ್ಚು ಬರುವುದಿಲ್ಲ. ಬಡಕುಟುಂಬದವರು ಅದನ್ನೂ ಕೊಡಬೇಕಾಗಿಲ್ಲ. ಹತ್ತಿರದ ಹಳ್ಳಿಯವರೂ ರಾಳೆ-ಗಾಂವಕ್ಕೆ ಬಂದು ಲಗ್ನವಾದ ಉದಾಹರಣೆಗಳು ಉಂಟು.

ಅಸ್ಪೃಶ್ಯತೆಯ ಬಿಗಿತವೂ ಈ ಊರಲ್ಲಿ ಸಡಿಲಾಗುತ್ತಿದೆ. ಇಂದು ಈ ಹಳ್ಳಿಯ ಹರಿಜನರು ಇತರ ಹಿಂದೂ ಜಾತಿ ಬಾಂಧವರ ಜೊತೆ ಒಂದೇ ಕಡೆಯಿಂದ ನೀರು ತರುತ್ತಾರಲ್ಲದೆ, ಸಾಮೂಹಿಕ ಲಗ್ನಗಳಲ್ಲಿ ಎಲ್ಲರ ಜೊತೆ ಕುಳಿತು ಊಟ ಮಾಡುತ್ತಾರೆ. ಪ್ರತಿ ವರ್ಷ ಈ ಗ್ರಾಮದಲ್ಲಿ ನಡೆಯುವ ಕಾರ ಹುಣ್ಣಿಮೆಯ ಉತ್ಸವದಲ್ಲಿ ಹರಿಜನ ರೈತರ ಎತ್ತುಗಳಿಗೆ ಪ್ರಾಧಾನ್ಯ ನೀಡುವುದು ಇಲ್ಲಿ ನಡೆದುಕೊಂಡು ಬಂದ ಪರಂಪರೆ.

ಈ ರೀತಿ ಪ್ರಗತಿಯಾಗಬೇಕಾದರೆ ಧರ್ಮದ ಬಗೆಗೆ ಅಚಲ ಶ್ರದ್ಧೆಯಿರಬೇಕೆಂದು ಹಜಾರೆ ಹೇಳುತ್ತಾನೆ. ರಾಳೆಗಾಂವದ ಮಂದಿರವೇ ಅವನ ಎಲ್ಲ ಚಟುವಟಿಕೆಯ ಕೇಂದ್ರ. ಅವನು ವಾಸಿಸುವುದು ಕೂಡ ಆ ಮಂದಿರದ ಒಂದು ಚಿಕ್ಕಕೋಣೆಯಲ್ಲಿ ಕಡತಗಳು, ಕಾಗದ ಪತ್ರಗಳ ಹೊರೆಯ ಮಧ್ಯೆ. ತನ್ನನ್ನು ಕಾಣಲು ಬಂದವರೊಡನೆ ಮಾತಾಡುತ್ತ ಕುಳಿತಿರುತ್ತಾನೆ ಅಣ್ಣಾ ಹಜಾರೆ.

ಈ ಗ್ರಾಮದ ಪ್ರಗತಿ ಹತ್ತಿರದ ಇತರ ಗ್ರಾಮಗಳಿಗೂ ಮಾದರಿಯಾಗಿದೆ. ಅಹಮ್ಮದ ನಗರದ ಹತ್ತಿರದಲ್ಲಿನ ಒಂದು ಪ್ರೌಢಶಾಲೆಯ ಮುಖ್ಯೋಪಾಧ್ಯಾಯನಾಗಿದ್ದ 29

ವರ್ಷದ ರಘುನಾಥ ಡಾಂಗೆ ತನ್ನ ಕೆಲಸಕ್ಕೆ ರಾಜೀನಾಮೆಯಿತ್ತು, ಹಳ್ಳಿಗಳಲ್ಲಿನ ಕಳ್ಳಭಟ್ಟಿಗಳನ್ನು ಮುಚ್ಚಿಸುವ ಕೆಲಸದಲ್ಲಿ ತೊಡಗಿದ್ದಾನೆ. "ಅಣ್ಣಾ ಹಾಕಿಕೊಟ್ಟ ದಾರಿಯಲ್ಲಿ ಪೊರಟಿದ್ದೇವೆ. ಅವರ ಕೃಪೆಯಿಂದಾಗಿ ನಾವೇನು ಮಾಡಬೇಕೆಂಬುದು ನಮಗೆ ತಿಳಿದಿದೆ," ಎಂದಾತ ಹೇಳುತ್ತಾನೆ.

ಇಷ್ಟೆಲ್ಲ ಪ್ರಗತಿ ಸಾಧಿಸಿದ್ದರೂ ಅಣ್ಣಾಗೆ ತೃಪ್ತಿಯಿಲ್ಲ. ವರ್ಷವಿಡಿ ಈ ಹಳ್ಳಿಯ ಎಲ್ಲ ಹೊಲಗಳಿಗೆ ನೀರು ಒದಗಿಸುವಂತಾಗಬೇಕು; ಪ್ರತಿಯೊಂದು ಕುಟುಂಬಕ್ಕೆ ಜೈವಿಕ ಅನಿಲದ ಸೌಲಭ್ಯ ದೊರೆಯಬೇಕು; ಆ ಹಳ್ಳಿಗೊಂದು ಕಾಲೇಜು ಬೇಕು ಮತ್ತು ಅಲ್ಲಿ ಶಿಕ್ಷಣ ಪಡೆದ ಯುವಕರು ಊರು ಬಿಡದಂತೆ ಮಾಡಲು ಉದ್ಯಮಗಳನ್ನು ಸರಕಾರ ಸ್ಥಾಪಿಸುವಂತೆ ಮಾಡಬೇಕು ಎಂಬ ಉದ್ದೇಶದಿಂದ ಈಗಲೂ ಹಜಾರೆ ಅವಿರತವಾಗಿ ಪ್ರಯತ್ನ ನಡೆಸಿದ್ದಾನೆ.

ಹತ್ತಿರದ ಹಳ್ಳಿಯ ಜನರು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಅಥವಾ ತಮ್ಮೂರಿನ ಸಾರ್ವಜನಿಕ ಸಭೆಗಳಿಗೆ ಆಹ್ವಾನಿಸಲು ಬರುತ್ತಿರುತ್ತಾರೆ. "ನಾನು ನೀಡುವ ಸಂದೇಶ ಇಷ್ಟೆ: ರಾಷ್ಟ್ರದಲ್ಲಿ ಬದಲಾವಣೆಯಾಗಬೇಕಾದರೆ ನಮ್ಮ ಗ್ರಾಮಗಳಲ್ಲಿ ಬದಲಾವಣೆಯಾಗಬೇಕು ಮತ್ತು ಆ ಕಾರ್ಯವಾಗಬೇಕಾದರೆ ಮೊದಲು ನಾವು ನಮ್ಮಲ್ಲಿ ಬದಲಾವಣೆಯನ್ನು ತಂದು ಕೊಳ್ಳಬೇಕು' ಎಂದು ಹೇಳುತ್ತಾನೆ ಅಣ್ಣಾ ಹಜಾರೆ. ●

# ಮೂರನೆಯ ಕೋರಿಕೆ

## ಸಾಸ್ಕಾ ಮೂರ್ತಿ

''ನಾನು ಹೇಳೋದು ಸುಳ್ಳಲ್ಲ ಸ್ವಾಮಿ. ಪರೀಕ್ಷೆ ಮಾಡಿನೋಡಿ. ಎಲ್ಲಾರೂ ಕಣ್ಕಟ್ಟು ಅಂದ್ಬಿಡ್ತಾರೆ. ನಂದು ಹಾಗಲ್ಲಾ ಸ್ವಾಮಿ. ಪರೀಕ್ಷೆ ಮಾಡಿನೋಡಿ. ಇದು ನೋಡಿ. ನಿಮ್ಮ ಕೋರಿಕೆಗಳನ್ನು ಈಡೇರಿಸೋ ಶಕ್ತಿ ಇದಕ್ಕಿದೆ. ಈ ನಾಣ್ಯ, ಒಂದು ಸಾವಿರ ವರ್ಷಗಳ ಹಿಂದಿನದು. ಲೇ ಹುಡುಗಾ, ಈ ನಾಣ್ಯಾನ ಎಲ್ಲಾ ಸ್ವಾಮಿಗಳಿಗೂ ತೋರ್ಸಿಕೊಂಡು ಬಾ.'' ಆಟದವ ಏರುದನಿಯಲ್ಲಿ ಕೂಗಿದ. ಅವನ ಕೂಗಿಗೆ ಸರಿಯಾಗಿ ಡೋಲು ಬಡಿಯುತ್ತಿದ್ದ ಹುಡುಗ ನಾಣ್ಯವನ್ನು ತೋರುಬೆರಳು, ಹೆಬ್ಬೆರಳಿನ ಮಧ್ಯೆ ಹಿಡಿದು ಸುತ್ತುಬರುತ್ತ ಎಲ್ಲರಿಗೂ ತೋರಿಸಹತ್ತಿದ.

ಶ್ರೀನಿವಾಸಯ್ಯ ಕಣ್ಣುಗಳನ್ನು ಸಂಕುಚಿಸುತ್ತ ದೃಷ್ಟಿಯನ್ನು ತೀಕ್ಷ್ಣಗೊಳಿಸಿ ನಾಣ್ಯವನ್ನು ನೋಡಿದರು.

ಹುಡುಗ ನಾಣ್ಯವನ್ನು ಹಿಂದೆಮುಂದೆ ತಿರುಗಿಸಿದ. ತಾಮ್ರದ ಬಣ್ಣದ ನಾಣ್ಯ. ಅದಕ್ಕೊಂದು ನಿರ್ದಿಷ್ಟ ಆಕಾರ ಇರಲಿಲ್ಲ. ಮುದ್ರಣ ಒರಟಾಗಿತ್ತು. ಮೇಲ್ಮೈಯಿಂದ ಉಬ್ಬಿದಂತೆ ಕ್ಷುದ್ರದೇವತೆಯೊಂದರ ಅಚ್ಚು ಕಾಣಿಸಿತು. ಮತ್ತೊಂದು ಬದಿಯಲ್ಲಿ ಸಿಕ್ಕಾಪಟ್ಟೆ ಗೀಚಿದಂತೆ ಗೆರೆಗಳಿದ್ದವು.

''ಒಂದು ಸಾವಿರ ವರ್ಷ ಹಳೆಯದು ಸ್ವಾಮಿ. ಮಹಾ ಮಹಾ ಮಾಂತ್ರಿಕರ ಶಕ್ತಿಯ ಫಲ. ಕೋರಿದ್ದು ನೆರವೇರ್ತದೆ ಸ್ವಾಮಿ. ದುಡ್ಡು ಕೇಳಿ, ಸೈಟು ಕೇಳಿ, ಮನೆ ಕೇಳಿ, ಏನು ಕೇಳಿ ಅದು ಸಿಗ್ತದೆ-''

''ನೀನೇ ಬೇಕಾದ್ದನ್ನ ಕೇಳಿಕೋಬಹುದಲ್ಲಯ್ಯ? ಈ ರೀತಿ ಬೀದಿ ಬೀದಿ ಯಾಕೆ ಸುತ್ತಿದೀಯಾ?'' ಯಾರೋ ಕೆಣಕಿದರು. ಘೊಳ್ಳನೆ ನಗು ಹರಡಿತು.

ಆಟದವ ತಲೆಯಾಡಿಸುತ್ತ ಕೂಗಿದ,

''ನಮ್ಮಂಥಾ ಆಟದವರಿಗೆ, ಅವರ ಕುಲದವರಿಗೆ, ಸಿದ್ಧಿಸೋ ಮಂತ್ರಗಾರರಿಗೆ, ಅವರ ಕುಲದವರಿಗೆ ಈ ನಾಣ್ಯದಿಂದ ಪ್ರಯೋಜನ ಇಲ್ಲ ಸ್ವಾಮಿ, ಇಲ್ದೆ ಇದ್ರೆ ಇಂಥಾ ವಸ್ತು ಇಟ್ಕೊಂಡು ನಾವ್ಯಾಕೆ ಸ್ವಾಮಿ ಹಿಂಗಿರಬೇಕು? ಎಲ್ಲಿ, ಹುಡುಗಾ.., ಜೋರಾಗಿ ಡೋಲು ಬಾರಿಸು.''

ಹುಡುಗ ಡೋಲನ್ನು ದಬದಬನೆ ಚಚ್ಚಿದ. ಆಟದವ ಕೂಗತೊಡಗಿದ,

''ಬನ್ನಿ ಸ್ವಾಮಿ, ಇರೋದು ಒಂದೇ ನಾಣ್ಯ. ಬೆಲೆ ಹತ್ತು ರೂಪಾಯಿ. ಯಾವ ಪುಣ್ಯಾತ್ಮರು ಮೊದಲು ಕೈಚಾಚ್ತಾರೋ ಅವರಿಗೆ ಸಿಗ್ತದೆ. ಕೈ ನೀಡಿ ಸ್ವಾಮಿ, ಕೇವಲ ಹತ್ತು

(ಜೇಕಬ್ಸ್‌ರವರ ಇಂಗ್ಲಿಷ್ ಕಥೆಯ ಸ್ಫೂರ್ತಿಯಿಂದ)

ರೂಪಾಯಿ. ನೀವು ಬಡವರಾಗಿದ್ರೆ, ಸುಮ್ಮನೆ ಕೈನೀಡಿ, ಕೊಟ್ಟುಬಿಡ್ತೀನಿ. ಇದೋ ಸ್ವಾಮಿ, ತಗೊಳ್ಳಿ,'' ಎನ್ನುತ್ತ ನಾಣ್ಯವನ್ನು ಮುಂದಕ್ಕೆ ನೀಡುತ್ತ ಸುತ್ತುಬರತೊಡಗಿದ.

ಯಾರೂ ಕೈ ನೀಡಲಿಲ್ಲ.

''ಶ್ರೀಮಂತರಾದ್ರೆ ಹತ್ತು ರೂಪಾಯಿ ಕೊಡಿ. ಬಡವರಾದರೆ ಸುಮ್ಮನೆ ಕೈ ನೀಡಿ.''

ಗುಂಪು ಕರಗಹತ್ತಿತು. ಕೊನೆಕೊನೆಗೆ ಹುಡುಗನ್ನ ಬಿಟ್ಟರೆ ಉಳಿದವರು ನಾಲ್ಕೈದು ಮಂದಿ ದೊಡ್ಡವರು ಮಾತ್ರ.

ಶ್ರೀನಿವಾಸಯ್ಯ ಪ್ಯಾಂಟಿನ ಕಿಸೆಗೆ ಕೈ ಹಾಕಿ ನೋಟನ್ನು ತಡವಿದರು. ಒಂದರೆಗಳಿಗೆ ಅನುಮಾನಿಸಿದಂತೆ ಮಾಡಿ, ನಂತರ ಯಾಂತ್ರಿಕವಾಗಿ ಹತ್ತರ ನೋಟನ್ನು ತೆಗೆದು ನೀಡಿದರು.

''ತಗೊಳ್ಳಿ ಸ್ವಾಮಿ, ಪುಣ್ಯಾತ್ಮರು. ಮನೆಗೆ ತಗೊಂಡು ಹೋಗಿ ಬೇಕಾದ್ದು ಕೋರಿಕೊಳ್ಳಿ. ಸ್ನಾನ, ಪೂಜೆ, ಏನೂ ಬೇಕಾಗಿಲ್ಲ. ನಿಂತ ಕಾಲಿನ ಮೇಲೆ, ನಿಂತ ಸ್ಥಳದಲ್ಲಿ ಕೋರಿಕೊಳ್ಳಬಹುದು. ಆದರೆ ಒಂದು ಮಾತ್ರ ಗಮನದಲ್ಲಿಡಿ. ನೀವು ಮೂರು ಕೋರಿಕೆಗಳನ್ನು ಮಾತ್ರ ಕೋರಿಕೊಳ್ಳಬಹುದು. ನಂತರ ಈ ನಾಣ್ಯದಿಂದ ನಿಮಗಾಗಲಿ ನಿಮ್ಮ ಕುಲಕ್ಕಾಗಲಿ ಉಪಯೋಗವಿಲ್ಲ.''

ಕೈಗೆ ಬಂದ ನಾಣ್ಯವನ್ನು ಶ್ರೀನಿವಾಸಯ್ಯ ತಟ್ಟನೆ ಕಿಸೆಗೆ ಸೇರಿಸಿ, ಸಂಕೋಚದಿಂದಲೋ ನಾಚಿಕೆಯಿಂದಲೋ ಸರಸರನೆ ಮನೆಯ ಕಡೆಗೆ ಹೆಜ್ಜೆ ಹಾಕಿದರು.



★

"ಒಳ್ಳೇ ಗಿರಾಕಿಯಾದೆಯಲ್ಲಪ್ಪ ನೀನು! ಇದಕ್ಕೆ ಹತ್ತು ರೂಪಾಯಿ ಕೊಟ್ಟು ತರೋಕೆ ಅದು ಹ್ಯಾಗೆ ಮನಸ್ಸು ಬಂತು? ಅದ್ಯಾವ ಸ್ಮಶಾನದ ಬಾಬತ್ತೋ ಇದು! ಈ ಕೆತ್ತನೆ ನೋಡು. ಯಾವುದೋ ಭೂತದ ಆಕಾರ ಇದ್ದ ಹಾಗಿದೆ! ಒಳ್ಳೇ ಮೂಢನಂಬಿಕೆ ಆಯ್ತಲ್ಲ ನಿಂದು! ಮನೇಲಿ ಕಷ್ಟ ಇದೆ, ನಿಜ. ತಲೆತಲಾಂತರದಿಂದ ಬಂದ ಈ ದೊಡ್ಡ ಮನೆ ಗಿರವಿಗೆ ಬಿದ್ದಿದೆ. ಹಾಗಂತ ಈ ಕಲ್ಲಿನ ವಸ್ತು ವಿನ ಆಶ್ರಯ ಬೇಕಾಗಿತ್ತೇ? ಕೇಳಿಕೊಂಡಾ ಕ್ಷಣ ದುಡ್ಡನ್ನು ಪಟಪಟಾಂತ ಉದುರಿಸಿಬಿಡ್ತ ದೇನು?" ರಾಮಣ್ಣ ಸಿಟ್ಟಿನಿಂದ ಒದರಾಡಿದ.

ಕಮಲಮ್ಮ ದುಗುಡದಿಂದ ಹೇಳಿದರು,

"ನೀನು ಸುಮ್ಮನಿರು, ರಾಮು. ಅವರಿ ಗೇನೋ ಹಿಂದಿನ ವೈಭವ ಮತ್ತೆ ಬರಬೇಕಂತ ಕನವರಿಕೆ. ಯಾವ ವ್ಯಾಪಾರವೂ ಕೈ ಹತ್ತದೆ ಇದ್ದದ್ದೆಲ್ಲಾ ಕಳೆದುಹೋಯ್ತು. ರಾಜಕುಮಾ ರನ ತರ ಕಾರನ್ನು ಇಟ್ಕೋಬೇಕಾಗಿರೋ ನೀನು ಒಂದು ಪ್ರೈವೇಟ್ ಕಂಪನೀಲಿ ಡ್ರೈವರ್ ಆಗಿದ್ದೀಯ! ಏನೋ ಆಸೆ; ತಂದ್ಬಿಟ್ಟಿದ್ದಾರೆ. ತಂದಿರೋದು ಮುಖ್ಯವಲ್ಲ, ಅದರ ಹಿಂದೆ ಅವರಿಗೆ ಎಂಥಾ ಕಳಕಳಿಯಿದೆ ಅನ್ನೋದನ್ನ ನೋಡಬೇಕು."

ರಾಮಣ್ಣ ಎಚ್ಚತ್ತುಕೊಂಡವನಂತೆ ಸಾಂತ್ವ ನದ ನಗೆಯನ್ನು ಬೀರಿದ.

"ಹೋಗಲಿ ಬಿಡಪ್ಪ. ಹೇಗೂ ತಂದಿ ದ್ದೀಯ. ಸುಮ್ಮನೆ ಬೀಸಾಕೋ ಬದಲು, ಅದೂ ನೋಡಿಬಿಡೋಣ, ಒಂದು ಐದು ಸಾವಿರ ರೂಪಾಯಿ ಸಿಗಲಿ ಅಂತ ಕೇಳಿಕೋ. ಆಮೇಲೆ ಅದರ ಶಕ್ತಿ ಎಂಥದ್ದು ಅಂತ ನಿನಗೇ ಗೊತ್ತಾಗುತ್ತೆ," ಎಂದು ಜೋರಾಗಿ ನಕ್ಕ.

ಶ್ರೀನಿವಾಸಯ್ಯ ತಪ್ಪು ಮಾಡಿದವರಂತೆ ಮುಖವನ್ನು ಸಪ್ಪಗೆ ಮಾಡಿಕೊಂಡು ಕುಳಿತಿದ್ದರು. ಕಮಲಮ್ಮ ತಂದಿಟ್ಟ ತಿಂಡಿಯನ್ನು ತಿಂದು ರಾಮಣ್ಣ ಮೇಲೆದ್ದ.

"ನಾನಿನ್ನು ಬರ್ತೀನಿ. ಹೊತ್ತಾಗಿದೆ," ಎನ್ನುತ್ತಾ ಹೊರ ನಡೆದವನು ಬಾಗಿಲ ಬಳಿ ನಿಂತು ಹಿಂದಕ್ಕೆ ಹೊರಳಿ ಹೇಳಿದ, "ನಾನು ಸಂಜೆ ಬರುವಷ್ಟರೊಳಗೆ ಐದು ಸಾವಿರ ಸಿದ್ಧ ವಾಗಿರ್ಲಿ. ನಾನು ಒಂದು ಮೊಪೆಡ್‌ನಾದ್ರೂ ತಗೋತೀನಿ. ಏನಪ್ಪಾ?"

"ಏಯ್. ಹೋಗೋ ಸುಮ್ಮನೆ. ಅತಿ ಯಾಗಿ ಆಡಬೇಡ," ಕಮಲಮ್ಮ ಗದರಿದರು. ರಾಮಣ್ಣ ನಗುತ್ತ ಹೊರಹೋದ.

"ಕೇಳ್ಕೊಳ್ಳಿ ಅಂದ್ರೆ. ದುಡ್ಡು ಅದೆಲ್ಲಿಂದ ಸುರಿದು ಬರುತ್ತೋ ನೋಡಿಯೇಬಿಡೋಣ' ಕಮಲಮ್ಮ ತಾವೂ ನಗುತ್ತ ಟೇಬಲ್ಲಿನ ಮೇಲಿದ್ದ ನಾಣ್ಯವನ್ನು ಶ್ರೀನಿವಾಸಯ್ಯನವರ ಮುಂದಕ್ಕೆ ತಳ್ಳಿ, ಕಾಫಿಯನ್ನು ತರಲು ಅಡಿಗೆ ಮನೆಗೆ ನಡೆದರು. ಕಾಫಿಯನ್ನು ಹಿಡಿದು ಹೊರಬಂದಾಗ ಎದುರಿಗೆ ಕಂಡ ದೃಶ್ಯ ಅವ ರನ್ನು ವಿಸ್ಮಿತರನ್ನಾಗಿ ಮಾಡಿತು.

ಶ್ರೀನಿವಾಸಯ್ಯ ಬಲಗೈಯಲ್ಲಿ ನಾಣ್ಯ ವನ್ನು ಹಿಡಿದು ಮೇಲೆತ್ತಿ ಏನನ್ನೋ ಕೋರಿ ಕೊಳ್ಳುತ್ತಿದ್ದರು.

"ಸರಿಹೋಯ್ತು! ಒಳ್ಳೇ ಹುಚ್ಚಾಟ ವಾಯ್ತೇ ನಿಮ್ಮದು!" ಎನ್ನುತ್ತ ಕಮಲಮ್ಮ ಮುಂದೆ ನಡೆದು ಕಾಫಿಯ ಬಟ್ಟಲನ್ನು ಟೇಬ ಲ್ಲಿನ ಮೇಲೆ ಸಶಬ್ದವಾಗಿಟ್ಟರು. "ಏನು ಕೇಳಿದಿರಿ? ಲಕ್ಷ ಸಿಗಲೆಂದಾ?" ಹೆಂಡತಿಯ ಅಣಕದ ಪ್ರಶ್ನೆಗೆ ಶ್ರೀನಿವಾಸಯ್ಯ ತುಟಿಯನ್ನರಳಿಸಿದರು.

"ಐದು ಸಾವಿರ ರೂಪಾಯಿ. ಪರೀಕ್ಷಿಸಿ ನೋಡೋದ್ರಲ್ಲೇನು ತಪ್ಪು?"

"ಹಾಗೇ ಕಾದುಕೊಂಡಿರಿ. ಆಕಾಶದಿಂದ ಪಟಪಟನೆ ನಿಮ್ಮ ತಲೇ ಮೇಲೇನೇ ಉದು ರುತ್ತೆ!" ಕಮಲಮ್ಮ ಖೊಳ್ಳನೆ ನಗೆ ಚೆಲ್ಲಿ ಮಾಡಿನತ್ತ ನಾಟಕೀಯವಾಗಿ ನೋಡಿದರು.

★

ಮಹಡಿಯ ಮೇಲಿನ ಮಲಗುವ ಕೋಣೆಯ ಕಿಡಕಿಯ ಮುಂದೆ ಕುರ್ಚಿಯಲ್ಲಿ ಕುಳಿತು ಶ್ರೀನಿವಾಸಯ್ಯ ಹೊರಗ ನೋಡತೊಡಗಿದ್ದರು. ಸಂಜೆ ಕಳೆದು ನಿಧಾನವಾಗಿ ಕತ್ತಲಿನ ಮಬ್ಬು ಹರಡುತ್ತಿತ್ತು.

''ರಾಮಣ್ಣ ಇಷ್ಟು ಹೊತ್ತಾದರೂ ಬರಲಿಲ್ಲವಲ್ಲ? ಒಂದು ಗಂಟೆ ಹಿಂದೇನೇ ಬರಬೇಕಾಗಿತ್ತು,'' ಕಮಲಮ್ಮ ಹೇಳಿದರು.

ಶ್ರೀನಿವಾಸಯ್ಯ ದೃಷ್ಟಿ ಕದಲಿಸಲಿಲ್ಲ. ಕಮಲಮ್ಮ ಗಂಡನ ಪಕ್ಕಕ್ಕೆ ಬಂದು ನಿಂತು ಆತಂಕದಿಂದೆಂಬಂತೆ ಕೇಳಿದರು.

''ಅದೇನು ನೋಡ್ತಿದ್ದೀರಿ? ನಿಮ್ಮ ಐದು ಸಾವಿರ ರೂಪಾಯಿ ಅದೆಲ್ಲಿಂದ ಬರುತ್ತೆ ಅಂತಲೆ?''

''ಅಲ್ಲ ಕಣೆ, ಅದು ಬಂದ್ರೆಷ್ಟು, ಹೋದರೆಷ್ಟು! ನಾಣ್ಯ ತಂದಿದ್ದಾಗಿತ್ತು, ಕೇಳಿಕೊಂಡೆ. ರಾಮಣ್ಣ ಬರದಿರೋದು ಚಿಂತೆಯಾಗಿದೆ.''

''ಕಾಫಿ ತರ್ತೀನಿ,'' ಎಂದು ಕಮಲಮ್ಮ ಹೊರಡಲಿದ್ದವರು ಏನನ್ನೋ ಕಂಡು ನಿಂತರು.

ಕಾಂಪೌಂಡಿನ ಗೇಟನ್ನು ತೆರೆದುಕೊಂಡು ಯಾರೋ ಒಳಗೆ ಬರುತ್ತಿದ್ದುದು ಕಾಣಿಸಿತು. ದೇಹಭಾವದಿಂದ ಆತ ರಾಮಣ್ಣ ಅಲ್ಲವೆಂದು ತಿಳಿಯಬಹುದಿತ್ತು.

''ಯಾರೋ ಬರ್ತಿದ್ದಾರೆ ಅಂದ್ರೆ.....'' ಕಮಲಮ್ಮ ಗಂಡನಿಗೆ ಹೇಳಿದರು.

ಶ್ರೀನಿವಾಸಯ್ಯ ಮೇಲೆ ಮಹಡಿಯ ಮೆಟ್ಟಿಲುಗಳನ್ನು ಇಳಿದು ಬಾಗಿಲಿನತ್ತ ನಡೆದರು.

ತಟ್ಟಿದ ಬಾಗಿಲು ತೆರೆದಾಗ ಎದುರಿಗೆ ಅಪರಿಚಿತನೊಬ್ಬ ನಿಂತಿದ್ದ.

''ರಾಮಣ್ಣನವರ ಮನೆ ಇದೆಯೇ?''

''ಹೌದು, ನೀವು ಯಾರು? ಏನಾಗಬೇಕಿತ್ತು?''



''ನಿಮ್ಮ ಆಯುಷ್ಯ ರೇಖೆಯ ಪ್ರಕಾರ ನೀವು ಈಗಾಗಲೇ ಮೇಲೆ ಹೋಗಿರಬೇಕಾಗಿತ್ತಲ್ಲ..''

''ನಾನು ವಿಸ್ಮೃತ ರೋಡ್‌ಲೈನ್ಸ್‌ನಿಂದ ಬರ್ತಿದ್ದೇನೆ.''

''ಓಹ್, ಏನು ಸಮಾಚಾರ? ರಾಮಣ್ಣ ಎಲ್ಲಿ?'' ಶ್ರೀನಿವಾಸಯ್ಯನವರ ಮುಖದಲ್ಲಿ ಆತಂಕ ಮೂಡಿತು.

''ರಾಮಣ್ಣ ಎಲ್ಲಪ್ಪ? ಅವನಿಗೆ ಏನೂ ಆಗಿಲ್ಲವಷ್ಟೇ?'' ಕಮಲಮ್ಮ ಉದ್ವೇಗದ ದನಿಯಲ್ಲಿ ಕೇಳಿದರು.

ಅಪರಿಚಿತನ ಮುಖದಲ್ಲಿ ವಿಷಾದ ತುಂಬಿತ್ತು. ಹೇಳಲೋ ಬೇಡವೋ ಎನ್ನುವಂತೆ ಮುಖ ನೋಡಿದ.

''ಹೇಳಪ್ಪಾ, ರಾಮಣ್ಣ ಎಲ್ಲಿದ್ದಾನೆ? ಚೆನ್ನಾಗಿದ್ದಾನೆ ತಾನೆ?''

ದಂಪತಿಯಿಬ್ಬರೂ ಒಟ್ಟಿಗೇ ಎನ್ನುವಂತೆ ಗಾಬರಿಯಿಂದ ಉದ್ಗಾರ ತೆಗೆದರು.

ಅಪರಿಚಿತ ಅನುಮಾನಿಸಿ, ಅನುಮಾನಿಸಿ, ನಂತರ ಧೈರ್ಯ ತೆಗೆದುಕೊಂಡವನಂತೆ ಹೇಳಿದ,

''ರಾಮಣ್ಣ ಸಂಜೆ ಕಂಪನಿಗೆ ಹಿಂದಿರುಗುವಾಗ ಶೇಷಾದ್ರಿಪುರದಲ್ಲಿ ಆಕ್ಸಿಡೆಂಟ್ ಆಗಿ

ಸತ್ತು ಹೋದರು. ಪೋಲೀಸಿಗೆ ಸುದ್ದಿ ಕಳಿಸಿದೆ. ರಾಮಣ್ಣನವರ ಸಾವಿಗೆ ಪರಿಹಾರ ರೂಪದಲ್ಲಿ ಕಂಪೆನಿ ಈ ಹಣವನ್ನು ಕೊಟ್ಟಿದೆ. ಇಗೊಳ್ಳಿ,'' ಎಂದು ಒಂದೇ ಉಸಿರಿಗೆ ಹೇಳಿ ಶ್ರೀನಿವಾಸಯ್ಯನವರ ಕೈಗೆ ಚೆಕ್ಕೊಂದನ್ನಿತ್ತ.

ಒಂದು ಕ್ಷಣ ಇಡೀ ವಾತಾವರಣ ಸ್ತಬ್ಧವಾಯಿತು.

ಆಘಾತದ ತೀವ್ರತೆವು ಆಳಿಕ್ಕಿಳಿದು ನಂತರ ಒಮ್ಮೆಲೇ ಸ್ಫೋಟಿಸಿ ವಾತಾವರಣವು ಶೋಕದಿಂದ ತುಂಬಿಹೋಯಿತು.

ಶ್ರೀನಿವಾಸಯ್ಯ ಎದೆಯನ್ನು ಒತ್ತಿ ಹಿಡಿಯುತ್ತ, ಉಬ್ಬಸ ಬಂದವರಂತೆ ಕಷ್ಟಪಡುತ್ತ, ಉಕ್ಕಿಬರುತ್ತಿದ್ದ ದುಃಖವನ್ನು ಹಿಂದಕ್ಕೆ ಒತ್ತಲು ಶತಪ್ರಯತ್ನ ನಡೆಸುತ್ತ ಕೈಯಲ್ಲಿದ್ದ ಚೆಕ್ಕನ್ನು ನೋಡಿದರು.

ರಾಮಣ್ಣನ ಆಕಸ್ಮಿಕ ಸಾವಿಗೆ ಪರಿಹಾರಾರ್ಥವಾಗಿ ವಿಸ್ಪತ ರೋಡ್‌ಲೈನ್ಸ್ ಸಂಸ್ಥೆಯು ರಾಮಣ್ಣನ ಸಂಸಾರಕ್ಕೆ ಐದು ಸಾವಿರ ರೂಪಾಯಿಗಳನ್ನು ಕೊಟ್ಟಿತ್ತು!

★

ಹಿಂದಿನ ವೈಭವದ ನೆನಪು, ಮುಂದಿನ ವೈಭವದ ಕನಸುಗಳನ್ನುಮರೆತು, ಇದ್ದ ಒಬ್ಬ ಮಗನನ್ನು ವಿಕೃತ ರೀತಿಯಲ್ಲಿ ಕಳೆದುಕೊಂಡ ಆ ದಂಪತಿ ಕಾರ್ಮೋಡದ ಹೆಪ್ಪಿನ ನಡುವೆ ಕರಕಾಗಿಬಿಟ್ಟಿತ್ತು. ಲವಲವಿಕೆಯೇ ಇಲ್ಲದೆ, ಪರಸ್ಪರ ಮಾತುಕತೆಯೂ ಹೆಚ್ಚಿಲ್ಲದೆ, ಯಾಂತ್ರಿಕವಾಗಿ ದಿನಗಳನ್ನು ದೂಡುತ್ತ ಕಾಲ ಕಳೆಯುತ್ತಿದ್ದರು.

ಮಗ ಸತ್ತು ಒಂದು ವಾರವಾಗಿತ್ತು.

ಒಂದು ದಿನ ನಡುರಾತ್ರಿ, ಕೆಟ್ಟ ಕನಸೊಂದನ್ನು ತಲೆಯನ್ನು ಝಾಡಿಸಿ ಓಡಿಸುತ್ತ ತಟ್ಟನೆ ಎಚ್ಚರಾಗಿ ಕಣ್ಣುಬಿಟ್ಟರು ಶ್ರೀನಿವಾಸಯ್ಯ. ಹೊರಗೆ ವಿದ್ಯುತ್ ಸರಬರಾಜು ನಿಂತಿದ್ದರಿಂದ ದಟ್ಟಗತ್ತಲು ಹರಡಿತ್ತು. ಪಕ್ಕಕ್ಕೆ ಹೊರಳಿದಾಗ ಹೆಂಡತಿಯಿಲ್ಲದಿರುವುದು ಗಮನಕ್ಕೆ ಬಂದು ಹಾಸಿಗೆಯ ಮೇಲೆ ಎದ್ದು ಕುಳಿತರು.

ಕಿಟಕಿಯ ಬಳಿ ನಿಂತಿದ್ದ ಹೆಂಡತಿಯ ಕುಳ್ಳು ಆಕಾರ ಕಾಣಿಸಿತು. ಮುಸಿಮುಸಿ ಅಳುವ ದನಿಯೂ ಕೇಳಿಸಿತು.

''ಕಮಲೂ, ಮಲಕ್ಕೋ ಬಾ,'' ಸಂತೈಸುವ ದನಿಯಲ್ಲಿ ಕರೆದರು. ಅವರ ದನಿ ತುಂಬಿ ಬಂದಂತಾಗಿತ್ತು.

ಕಮಲಮ್ಮ ಮೂಗೆಳೆದರು.

''ದೇವರು ನಮಗೆ ಹೀಗ್ಯಾಕೆ ಮಾಡಿದ ಅಂದ್ರೆ? ಒಬ್ಬನೇ ಮಗ! ಹೀಗ್ಯಾಕಾಯ್ತು? ಹೀಗ್ಯಾಕಾಯ್ತು?''

ಅಳು ಜೋರಾಯಿತು. ಶ್ರೀನಿವಾಸಯ್ಯ ಹೃದಯದಾಳದಿಂದ ಎದ್ದ ವೇದನೆಯ ಉಕ್ಕನ್ನು ಕಂಠವನ್ನುಬ್ಬಿಸಿ ತಡೆದರು. ತಮ್ಮನ್ನು ತಾವೇ ಶಪಿಸಿಕೊಳ್ಳುವವರಂತೆ ನಿಂದನೆಯ ದನಿಯಲ್ಲಿ, ''ಎಲ್ಲಾ ಆದದ್ದು ನನ್ನಿಂದ್ಲೇನೆ! ಆ ನಾಣ್ಯವನ್ನು ತರದೇ ಹೋಗಿದ್ದಿದ್ರೆ ಇಷ್ಟೆಲ್ಲಾ ನಡೀತಾನೇ ಇರ್ಲಿಲ್ಲ. ಅಬ್ಬಾ! ಕೋರಿಕೆ ಈಡೇರಿಸೋದಂದ್ರೆ ಇಷ್ಟು ಭಯಂಕರವಾಗೇ!,'' ಎಂದು ಉದ್ಗರಿಸಿದರು.

ಸ್ವಲ್ಪ ಹೊತ್ತು ಮೂಗೆಳೆಯುವ ಸದ್ದು ಮತ್ತು ಉಚ್ಛ್ವಾಸ, ನಿಃಶ್ವಾಸಗಳನ್ನು ಬಿಟ್ಟರೆ ವಾತಾವರಣವೆಲ್ಲ ಮೌನ.

''ಏನೂಂದ್ರೆ!'' ಕಮಲಮ್ಮ ಇದ್ದಕ್ಕಿದ್ದಂತೆ ಉದ್ವೇಗದಿಂದ ಕೂಗಿದಳು. ಶ್ರೀನಿವಾಸಯ್ಯ ಚಕಿತರಾಗಿ ಆಕೆಯನ್ನು ನೋಡಿದರು.

ಕಮಲಮ್ಮ ಸರಸರನೆ ಅವರ ಬಳಿಗೆ ಬಂದು ಅವರ ಭುಜಗಳನ್ನು ಹಿಡಿದಳು. ಆ ಹಿಡಿತದಲ್ಲಿದ್ದ ಬಿಗಿ ಮತ್ತು ನಡುಕ ಶ್ರೀನಿವಾಸಯ್ಯನವರನ್ನು ಎಚ್ಚರಿಸಿತು.

''ಕಮಲೂ! ಏನು ವಿಷಯ?'' ಎನ್ನುತ್ತ ಹೆಗಲಮೇಲಿದ್ದ ಆಕೆಯ ಕೈಗಳನ್ನು ಹಿಡಿದುಕೊಂಡರು.

''ಏನೂಂದ್ರೆ! ಆ ನಾಣ್ಯ ಎಲ್ಲಿ? ಬಿಸಾಕಿಬಿಟ್ರಾ?'' ಕಮಲಮ್ಮನವರ ಧ್ವನಿ ನಡುಗುತ್ತಿತ್ತು.

''ಇಲ್ಲ, ಕೋಟಿನ ಜೇಬಿನಲ್ಲಿರಬೇಕು. ಯಾಕೆ?'' ಶ್ರೀನಿವಾಸಯ್ಯ ಬೆರಗಿನಿಂದ ಕೇಳಿದರು.

ಕಮಲಮ್ಮವರ ಕೈಗಳು ಸ್ತಿಮಿತ ತಪ್ಪಿದಂತೆ ನಡುಗುತ್ತಿದ್ದವು. ಕತ್ತಲ ನಡುವೆಯೂ ಅವರ ಕಣ್ಣುಗಳಲ್ಲಿ ತುಂಬಿದ್ದ ದೈತ್ಯಭಾವ ಅರಿವಿಗೆ ಬರುವಂತಿತ್ತು.

''ಏನೂಂದ್ರೆ! ಆ ನಾಣ್ಯದಿಂದ ಮೂರು ಕೋರಿಕೆಗಳು ಸಿದ್ಧಿಸುತ್ತವೆ, ಅಲ್ವೆ?''

''ಹೌದು, ಅದರಿಂದ ಈಗ ಆಗಬೇಕಾದ್ದೇನು? ಈಗಾಗಲೇ ಒಂದು ಕೋರಿಕೆಯನ್ನು ಫಲಪ್ರದವಾಗಿ ಅನುಭವಿಸ್ತಿದ್ದೀವಲ್ಲ!''

''ಇಲ್ಲ! ಇನ್ನೊಂದು ಕೋರಿಕೆ ಕೇಳಿಕೊಳ್ಳಿ! ತಗೊಳ್ಳಿ ಅಂದ್ರೆ, ಆ ನಾಣ್ಯ ತಗೊಂಡು ಒಂದೇ ಒಂದು ಕೋರಿಕೆ ಕೇಳಿಕೊಳ್ಳಿ ನನಗಾಗಿ!''

''ಏನಂತ ಕೇಳಿಕೊಳ್ಳಲಿ?'' ಉದ್ವೇಗದಿಂದ ಕೇಳಿದರು ಶ್ರೀನಿವಾಸಯ್ಯ.

''ನನಗೆ ನನ್ನ ಮಗ ಬೇಕು! ರಾಮಣ್ಣ ಬದುಕಿ ಬರಲಿ ಅಂತ ಕೋರಿಕೊಳ್ಳಿ!''

ಶ್ರೀನಿವಾಸಯ್ಯನವರ ಉಸಿರು ನಿಂತಂತಾಯಿತು. ದಿಗ್ಭ್ರಮೆಯಿಂದ ಆಕೆಯನ್ನು ದಿಟ್ಟಿಸಿದರು. ನಂತರ ನಡುಗುವ ದನಿಯಲ್ಲಿ ಉದ್ಗರಿಸಿದರು.

''ರಾಮ, ರಾಮ! ಇದೆಂಥಾ ಹುಚ್ಚುತನ! ನಿನಗೇನಾಗಿದೆ ಕಮಲೂ!?''

ಕಮಲಮ್ಮನ ಮುಖದಲ್ಲಿ ಹುಚ್ಚುಕಳೆ ಕುಣಿದಾಡಹತ್ತಿತ್ತು.

''ದಯವಿಟ್ಟು ಕೋರಿಕೊಳ್ಳಿ! ನನಗೆ ರಾಮಣ್ಣ ಬೇಕು!''

''ಕಮಲೂ, ನೀನು ಏನು ಹೇಳ್ತಿದ್ದೀಯಾಂತ ನಿಂಗೆ ಗೊತ್ತಿಲ್ಲ!''



''ಇಂದು ಎನಗೆ ಗೋವಿಂದಾ..''

''ಮೊದಲನೇ ಕೋರಿಕೆ ನೆರವೇರಿದೆ. ಎರಡನೆಯದೂ ಖಂಡಿತ ನೆರವೇರುತ್ತೆ! ಕೋರಿಕೊಳ್ಳಿ!''

ಶ್ರೀನಿವಾಸಯ್ಯ ಆಕೆಯನ್ನು ದಿಟ್ಟಿಸಿದರು. ಕತ್ತಲಲ್ಲಿ ಆಕೆಯ ಕಣ್ಣುಗಳು ಗಾಜಿನ ಮಣಿಗಳಂತೆ ಹೊಳೆಯುತ್ತಿದ್ದುವು.

ದನಿಯಲ್ಲಿನ ನಡುಕವನ್ನು ಹತೋಟಿಯಲ್ಲಿಡಲು ಯತ್ನಿಸುತ್ತ ಹೇಳಿದರು,

''ರಾಮಣ್ಣ ಸತ್ತು ವಾರದ ಮೇಲಾಗಿದೆ. ಅವನ ದೇಹ ಜೀರ್ಣವಾಗಿಬಿಟ್ಟಿರುತ್ತೆ. ಅಂಥವನು ಬದುಕಿ ಬಂದ್ರೆ ಅವನ ಭಯಂಕರ ರೂಪವನ್ನು ನಮ್ಮಿಂದ ಸಹಿಸೋದಕ್ಕಾಗ್ತ-ದೆಯೆ?''

ಕಮಲಮ್ಮ ಅವರ ಮಾತನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ.

''ಅವನು ಯಾವ ಸ್ಥಿತಿಯಲ್ಲೇ ಇರಲಿ. ಅವನು ನನ್ನ ಮಗ. ನಾನು ಹೆತ್ತ ಮಗ. ಅವನು ನನಗೆ ಬೇಕೇಬೇಕು!''

ಶ್ರೀನಿವಾಸಯ್ಯ ಕೈಕಾಲುಗೆಟ್ಟವರಂತೆ ಎರಡು ಗಳಿಗೆ ಮೌನವಾಗಿ ಕುಳಿತರು. ನಂತರ ನಿಧಾನವಾಗಿ ಮೇಲೆದ್ದು ಟೇಬಲ್ಲಿನ ಮೇಲಿದ್ದ ಮೇಣದ ಬತ್ತಿಯನ್ನು ಹಚ್ಚಿ, ಕೈಯಲ್ಲಿ ಹಿಡಿದು ಮೆಟ್ಟಿಲಿಳಿದು ಕೆಳಗೆ ಹೋದರು. ಸ್ವಲ್ಪ ಹೊತ್ತಿನ ನಂತರ ಮೇಲೆ ಬಂದಾಗ ಅವರ ಮುಖದ ಮೇಲೆ ಭೀತಿಯ ಭಾವ ಮೂಡಿತ್ತು.

"ಕಮಲೂ, ಮತ್ತೊಮ್ಮೆ ಯೋಚನೆ ಮಾಡು! ರಾಮಣ್ಣ ಈಗ ಮನುಷ್ಯನಲ್ಲ! ಯಾವುದೋ ಅಮಾನುಷ ಶಕ್ತಿಯಾಗಿ, ಮೃಗ ವಾ. ಬರಬಹುದು! ಪ್ರೀತಿಯಿಂದ ಕುರು ಡಾಗಿ ಭಯಂಕರ ಕೋರಿಕೆಗಳನ್ನು ಮುಂದಿಡ ಬೇಡ!"

"ಸುಮ್ಮನೆ ಕೋರಿಕೊಳ್ಳಿ! ನೀವು ಮೊದ ಲನೇ ಸಾರಿ ಕೋರಿದ್ದಕ್ಕಿಂತ ಈ ನನ್ನ ಕೋರಿಕೆ ಭಯಂಕರವಾಗಿರುತ್ತೇನು?"

ಶ್ರೀನಿವಾಸಯ್ಯನವರ ಬಾಯಿ ಕಟ್ಟಿತು. ಆಕೆಯನ್ನು ಒಂದು ಗಳಿಗೆ ದಿಟ್ಟಿಸಿ ನೋಡಿ, ನಂತರ ವಿಧಿಯಿಲ್ಲದವರಂತೆ ನಾಣ್ಯವನ್ನು ಹಿಡಿದಿದ್ದ ಕೈಯನ್ನು ಎತ್ತಿದರು. ಕೈ ನಡುಗು ತ್ತಿತ್ತು. ದೀರ್ಘವಾದ ನಿಟ್ಟುಸಿರೊಂದನ್ನು ಹೊರಹಾಕಿ ತುಟಿಗಳನ್ನು ಮಣಮಣನೆ ಆಡಿ ಸುತ್ತ ತಮ್ಮ ಎರಡನೇ ಕೋರಿಕೆಯನ್ನು ಕೋರಿಕೊಂಡರು.



ಗಾಢಮೌನ ಆವರಿಸಿತು. ಶ್ರೀನಿವಾಸಯ್ಯ ಕುರ್ಚಿಯ ಮೇಲೆ ಕುಸಿದುಕುಳಿತರು. ಎದೆಯು ತಿದಿಯೊತ್ತಿದಂತೆ ಏರಿಳಿಯುತ್ತಿತ್ತು.

ಅಲುಗುತ್ತಿದ್ದ ಮೇಣದ ಬತ್ತಿಯ ಬೆಳಕು ಗೋಡೆಯ ಮೇಲೆ ಚಿತ್ರವಿಚಿತ್ರವಾದ ಆಕಾರ ಗಳನ್ನು ಮೂಡಿಸುತ್ತ ವ್ಯಕ್ತಿಗಳ ಮನಸ್ಸಿನ ಭಾವನೆಗಳ ಪ್ರತೀಕದಂತೆ ಹೊರಳಾಡುತ್ತಿತ್ತು.

ಎಷ್ಟೋ ಹೊತ್ತು ಉರಿಯುತ್ತ ಬಂದಿದ್ದ ಮೇಣದಬತ್ತಿ ತಟ್ಟನೆ ಆರಿತು. ಕತ್ತಲ ಮುದ್ದೆ ಇಬ್ಬರನ್ನೂ ನೆಕ್ಕುತ್ತಾ ಕುಳಿತಿತು. ಇಬ್ಬರೂ ಮಾತನಾಡಲಿಲ್ಲ. ಯಾವುದೋ ಘಟನೆಗಾಗಿ, ಸಪ್ಪಳಕ್ಕಾಗಿ ಮೈಯನ್ನು ಸೆಟೆಸಿ ಕಿವಿಗಳನ್ನು ನಿಮಿರಿಸಿ ಕುಳಿತಿದ್ದರು.

ಅಸಹನೀಯ ನೀರವತೆ. ದುರ್ಧರ ಶೀತಲ ಉದ್ವೇಗ.

ಏನೋ ಸದ್ದಾದಂತಾಯಿತು.

ಶ್ರೀನಿವಾಸಯ್ಯ ತಟ್ಟನೆ ಉಸಿರೆಳೆದು-ಕೊಂಡರು. ಮೆಲ್ಲನೆದ್ದು ಕಿಟಕಿಯ ಬಳಿ ನಿಂತು ಹೊರಗೆ ದಿಟ್ಟಿಸಿದರು.

"ಯಾರೋ ಗೇಟು ತೆರೆದಂತಾಯಿತಲ್ಲ," ಕಮಲಮ್ಮ ಕೇಳಿದರು.

"ಯಾರೂ ಇಲ್ಲ. ಗಾಳಿಗೆ ಗೇಟು ಅಲುಗಿ ರಬೇಕು."

ಅರೆಕ್ಷಣ ಮೌನ.

ಇದ್ದಕ್ಕಿದ್ದಂತೆ ಕೆಳಗಿನ ಬಾಗಿಲನ್ನು ಯಾರೋ ತಟ್ಟಿದಂತೆ ಕೇಳಿಸಿತು.

"ಏನದು? ಯಾರೋ ಬಾಗಿಲನ್ನು ತಟ್ಟಿದ್ದಾರೆ!" ಕಮಲಮ್ಮ ಮೇಲೆದ್ದರು.

"ಏನೂ ಇಲ್ಲ, ಸುಮ್ನಿರೆ!" ಶ್ರೀನಿವಾಸಯ್ಯ ಹಾಗೆಂದರೂ ಅವರ ದನಿಯಲ್ಲಿದ್ದ ನಡುಕ ಅವರ ಭೀತಿಯನ್ನು ಹೊರಗೆಡವುತ್ತಿತ್ತು.

ಮತ್ತೆ ಮೌನ.

ಈ ಬಾರಿ ಬಾಗಿಲು ತಟ್ಟಿದ ಶಬ್ದ ಜೋರಾಗಿಯೇ ಕೇಳಿಸಿತು.

"ರಾಮಣ್ಣ! ರಾಮಣ್ಣ ಬಂದ!" ಕಮಲಮ್ಮ ಉದ್ವೇಗದಿಂದ ಕೂಗಿ, ಹಿಂದಕ್ಕೆ ತಿರುಗಿ ಬಾಗಿಲಿನತ್ತ ಧಾವಿಸಿದರು.

"ಕಮಲೂ! ಕಮಲೂ! ನಿಧಾನ ಮಾಡು! ಬಾಗಿಲು ತೆಗೆಯಬೇಡ!" ಶ್ರೀನಿವಾಸಯ್ಯ ಗಾಬರಿಯಿಂದ ಕೂಗುತ್ತ ಆಕೆಯ ಹಿಂದೆ ಧಾವಿಸಿದರು. ಅವರ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು.

"ರಾಮಣ್ಣಾ! ಬಂದೆ, ಬಂದೆ, ಇರು,"

ಕಮಲಮ್ಮ ಮೆಟ್ಟಿಲುಗಳನ್ನು ಇಳಿಯತೊಡಗಿದರು. ಹಿಂದೆಯೇ ಶ್ರೀನಿವಾಸಯ್ಯ ಆಶೆಯನ್ನು ಎಟುಕಿಸಿ ಹಿಡಿಯಲು ಯತ್ನಿಸುತ್ತ ಅನುಸರಿಸಿದರು.

ಧಡ್ ಧಡ್ ಧಡ್ ಧಡ್.......

ಬಾಗಿಲ ಬಡಿತ ಈಗ ಜೋರಾಗಹತ್ತಿತ್ತು. ಯಾರೋ ಬಾಗಿಲನ್ನು ಸತತವಾಗಿ ತಟ್ಟು-ತ್ತಿದ್ದರು.

ಕಮಲಮ್ಮ ಮೆಟ್ಟಿಲಿಳಿದು ಬಾಗಿಲ ಕಡೆಗೆ ಓಡಿದರು. ಆಕೆಯ ಹಿಂದೆಯೇ ಬಂದ ಶ್ರೀನಿವಾಸಯ್ಯ ಮುಗ್ಗರಿಸಿ ಆಯತಪ್ಪಿ ಉರುಳಿದರು. ಅವರ ಕೈಯಲ್ಲಿದ್ದ ನಾಣ್ಯವು ಜಾರಿ ಉರುಳಿಹೋಯಿತು.

''ಕಮಲೂ ಬಾಗಿಲು ತೆಗೀಬೇಡ! ದಯವಿಟ್ಟು ಬಾಗಿಲು ತೆಗೀಬೇಡ!'' ಶ್ರೀನಿವಾಸಯ್ಯ ನೋವಿನಿಂದ ಮುಲುಗುತ್ತ ಎದ್ದು ಕುಳಿತುಕೊಳ್ಳಲು ಯತ್ನಿಸುತ್ತ ಅರಚಿದರು. ದನಿ ಬಡಕಲಾಗಿ ಕ್ಷೀಣಗೊಂಡಿತ್ತು.

ಬಾಗಿಲ ಮೇಲೆ ಬೀಳುತ್ತಿದ್ದ ಬಡಿತಗಳು ಮಾಂಸಲಭರಿತ ಕೈಯಿಂದ ಬೀಳುವ ಬಡಿತ-ಗಳಂತೆ ತೋರುತ್ತಿರಲಿಲ್ಲ. ಕಟ್ಟಿಗೆಯಿಂದ ತಟ್ಟುತ್ತಿರುವಂತೆ ಭಾಸವಾಗುತ್ತಿತ್ತು. ಅಸಾಧ್ಯ ಚಳಿಯಲ್ಲಿ ಸಿಕ್ಕಂತೆ ಅವರ ಮೈ ಛಿಲ್ಲನೆ ಸೆಳಕುಗಳನ್ನೆಬ್ಬಿಸುತ್ತ ನಡುಗಿತು.

ಕಮಲಮ್ಮ ಬಾಗಿಲಿನ ಹತ್ತಿರ ಬಂದು ಚಿಲಕಕ್ಕಾಗಿ ತಡಕಾಡಹತ್ತಿದರು. ಮೇಲಿನ ಚಿಲಕ ಹಾಕಿತ್ತು. ಅದು ಎಟುಕದ್ದರಿಂದ ಹತ್ತಿರದ ಸ್ಟೂಲನ್ನು ಎಳೆದು ತರತೊಡಗಿದರು.

''ಕಮಲೂ! ಕಮಲೂ! ಬಾಗಿಲು ತೆರೀಬೇಡ! ಅನಾಹುತ ಖಂಡಿತ! ಕಮಲೂ!''

ಬಾಗಿಲಿನ ಮೇಲೆ ಬೀಳುತ್ತಿದ್ದ ಬಡಿತಗಳಿಂದಾಗಿ ಇದೀಗ ಬಾಗಿಲು ದಡದಡ ಅಲುಗ ತೊಡಗಿತ್ತು.

''ರಾಮಣ್ಣಾ, ಬಂದೆ! ತೆಗೀತೀನಿ ಇರು!'' ಕಮಲಮ್ಮ ಸ್ಟೂಲನ್ನು ಎಳೆದು ತಂದು




''ಅಯ್ಯೋ ಮುಂಡೇದೇ..ಹಣಾ ಅಲ್ಲಾ 'ಹಣ' ಅಂತ ಬರಿ..''

ಬಾಗಿಲ ಮುಂದೆ ಇಟ್ಟು ಅದರ ಮೇಲೆ ಹತ್ತಲು ಪ್ರಯತ್ನಿಸಿದರು.

ಶ್ರೀನಿವಾಸಯ್ಯ ಗಡಗಡ ನಡುಗಿದರು.

ಊಹಿಸಿಕೊಳ್ಳಲೂ ಆಗದಂತಹ ಭಯಂಕರ ವಸ್ತುವೊಂದು ಇನ್ನು ಕೆಲವೇ ಕ್ಷಣಗಳಲ್ಲಿ ಒಳಬರುವುದರಲ್ಲಿತ್ತು!

ಅವರಿಗೆ ಕ್ಷಣ ಕಾಲ ಮಂಕುಕವಿದಂತಾಗಿ ಯಾವುದೋ ಆಪತ್ತನ್ನು ಎದುರುನೋಡುವವರಂತೆ ಕಣ್ಣುಗಳನ್ನು ಅಗಲವಾಗಿ ತೆರೆದು ಭಸ್ ಭಸ್ ಎಂದು ಉಸಿರು ಬಿಡುತ್ತ ಕುಳಿತರು.

ಇದ್ದಕ್ಕಿದ್ದಂತೆ ಅವರ ತಲೆಯಲ್ಲಿ ಮಿಂಚು ಹೊಳೆದಂತಾಗಿ ಉಸಿರುಕಟ್ಟಿಕೊಂಡಿತು.

ನಾಣ್ಯ! ಮೂರನೇ ಕೋರಿಕೆ ಇನ್ನೂ ಉಳಿದಿದೆ!

ಶ್ರೀನಿವಾಸಯ್ಯ ಒಂದರೆಗಳಿಗೆ ಸ್ತಬ್ಧರಾಗಿ ಕುಳಿತರು. ನಂತರ ಅವಸರವಸರದಿಂದ ಕೆಳಗೆ ಉರುಳಿಹೋಗಿದ್ದ ನಾಣ್ಯಕ್ಕಾಗಿ ಕತ್ತಲಲ್ಲಿ

ಕೈಯಾಡಿಸುತ್ತ ತಡಕಾಡತೊಡಗಿದರು.

ಕಮಲಮ್ಮ ಸ್ಟೂಲಿನ ಮೇಲೆ ಹತ್ತಿದರು.

ಇನ್ನು ಒಂದೇ ಕ್ಷಣ, ಬಾಗಿಲು ತೆರೆಯುತ್ತದೆ!

ನಂತರ.......!?

ಏದುಸಿರುಬಿಡುತ್ತಾ, ಗಂಟಲಿನಿಂದ ವಿಚಿತ್ರ ಶಬ್ದಗಳನ್ನು ಹೊರಡಿಸುತ್ತಾ ಹುಚ್ಚು ಹತ್ತಿದವರಂತೆ ಹುಡುಕತೊಡಗಿದರು.

ಕಮಲಮ್ಮ ಚಿಲಕಕ್ಕೆ ಕೈ ಹಾಕಿದುದು ಕಾಣಿಸಿತು.

ಧಡ್ ಧಡ್ ಧಡ್ ಧಡ್....... ಬಡಿತ ಜೋರಾಗುತ್ತಾ ನಡೆದಿತ್ತು. ಬಾಗಿಲು ತುಯ್ಯತೊಡಗಿತ್ತು.

''ದೇವರೆ!'' ಶ್ರೀನಿವಾಸಯ್ಯ ಹತಾಶೆಯ ಉದ್ಗಾರ ಹೊರಡಿಸಿದರು.

ಅದೇ ಗಳಿಗೆಯಲ್ಲಿ ಅವರ ಕೈಗೆ ನಾಣ್ಯವು ತಾಗಿತು. ನಿಧಿ ಸಿಕ್ಕಿದವರಂತೆ ಅದನ್ನವರು ಬಾಚಿಹಿಡಿದರು. ಕೈಯನ್ನೆತ್ತಿ, ಅಸ್ಪಷ್ಟ ನಡುಕು ಸ್ವರದಲ್ಲಿ ಉದ್ಗಾರ ತೆಗೆಯುತ್ತ ತಮ್ಮ ಕೊನೆಯ ಕೋರಿಕೆಯನ್ನು ಕೇಳಿ-ಕೊಂಡರು.

ಬಾಗಿಲಿನ ಬಡಿತ ತಟ್ಟನೆ ನಿಂತಿತು. ಭಯಂಕರವಾಗಿ ತುಯ್ಯುತ್ತಿದ್ದ ಬಾಗಿಲು ಸ್ತಬ್ಧವಾಯಿತು.

ಕಮಲಮ್ಮ ಚಿಲಕವನ್ನು ತೆರೆದು ಸ್ಟೂಲನ್ನು ಪಕ್ಕಕ್ಕೆ ಸರಿಸಿದರು. ಶ್ರೀನಿವಾಸಯ್ಯ ಧಡಧಡಿಸುವ ಎದೆಯೊಂದಿಗೆ ಉಬ್ಬಸ ಬಿಡುತ್ತಾ ಕುಳಿತಂತೆಯೇ ಬಾಗಿಲತ್ತ ಭೀತಿಯುಕ್ತ ದೃಷ್ಟಿಯನ್ನು ಬೀರಹತ್ತಿದರು.

ಬಾಗಿಲು ತೆರೆಯಿತು.

ಶ್ರೀನಿವಾಸಯ್ಯನವರ ಎದೆಯ ಬಡಿತ ಸ್ತಬ್ಧವಾಯಿತು.

ಕಮಲಮ್ಮನವರ ದೇಹ ಬಾಗಿಲ ಕಟ್ಟಿಗೆ ಹೊಂದಿ ನಿಂತುಕೊಂಡಿತು.

ಒಂದು ಗಳಿಗೆ.

ಕಮಲಮ್ಮನವರ ನಿಟ್ಟುಸಿರು ಅವರನ್ನು ಎಚ್ಚರಿಸಿತು. ಕಾಲಿನ ನೋವನ್ನು ಲೆಕ್ಕಿಸದೆ ತಟ್ಟನೆ ಎದ್ದು ಬಾಗಿಲತ್ತ ಧಾವಿಸಿದರು. ಹೆಂಡತಿಯನ್ನು ಪಕ್ಕಕ್ಕೆ ಸರಿಸಿ ನೋಡಿದರು.

ದಾರಿ ನಿರ್ಜನವಾಗಿತ್ತು.

ಕಾಂಪೌಂಡಿನಿಂದಾಚೆಯ ಬೀದಿಯ ದೀಪಗಳು ಅದೇ ತಾನೇ ಪ್ರಾರಂಭವಾದ ವಿದ್ಯುತ್ ಸರಬರಾಜಿನಿಂದ ಭಗ್ಗನೆ ಹೊತ್ತಿಕೊಂಡವು.

ಅದೇ ಸಹಜ ಪ್ರಕೃತಿ.

ಅದೇ ಸಹಜ ವಾತಾವರಣ.

ಎದೆಯಬಡಿತ ಸ್ತಿಮಿತಕ್ಕೆ ಬರುತ್ತಿದ್ದಂ-ತೆಯೇ ಯಾವುದೋ ಒಳಭಾವನೆಯಿಂದ ಹೃದಯ ಗದ್ಗದಿಸಿದಂತಾಗಿ ಶ್ರೀನಿವಾಸಯ್ಯನವರ ಕಣ್ಣುಗಳು ಹನಿಗೂಡಿದವು. ●

*ಮಾನವನಲ್ಲಿ ನಿಹಿತವಾದ ಅಪರಿಮಿತ ಶಕ್ತಿಯ ಕೋಶಕ್ಕೆ ಮನಸ್ಸೆಂಬ ಹೆಸರು. ಮತ್ತು ಈ ಮನಸ್ಸು ಯಾವ ಯಂತ್ರದಿಂದ ಈ ಕೋಶದಲ್ಲಿನ ಶಕ್ತಿಯನ್ನು ಉಪಯೋಗಿಸಿಕೊಳ್ಳುತ್ತಿದೆಯೋ ಅದಕ್ಕೆ ದೇಹ ಎಂಬ ಹೆಸರು. ಮನಸ್ಸು ಮತ್ತು ದೇಹಗಳ ತರುವಾಯ ಜನರು ಹಣಕ್ಕೆ ಮಹತ್ವವನ್ನೀಯುತ್ತಾರೆ. ಆದರೆ ಇದು ತಪ್ಪು. ಹಣಕ್ಕೆ ಶಕ್ತಿಯಿದೆ, ನಿಜ. ಆದರೆ ಅದು ತುಂಬ ನಿಕೃಷ್ಟವಾದ ಶಕ್ತಿ. ಅದಕ್ಕಿಂತಲೂ ಹೆಚ್ಚಿನ ಶಕ್ತಿಯೆಂದರೆ ಯಶಸ್ಸು. ಹಾಗೆಯೆ ಯಶಸ್ಸಿಗಿಂತಲೂ ಹೆಚ್ಚಿನ ಶಕ್ತಿಯೆಂದರೆ ವಿಚಾರ. ವಿಚಾರಕ್ಕಿಂತಲೂ ಹೆಚ್ಚಿನ ಶಕ್ತಿ ಆತ್ಮದ್ದು. ಹಣಕ್ಕೆ ಇಷ್ಟೊಂದು ಮಹತ್ವ ಕೊಟ್ಟದ್ದರಿಂದಲೇ ಇಂದು ನಾವಿಷ್ಟು ಗೊಂದಲದಲ್ಲಿ ಸಿಲುಕಿಕೊಂಡಿದ್ದೇವೆ.*

ಅಮೇರಿಕದ ಕೋಟ್ಯಧೀಶ ರಾಕ್‌ಫೆಲರ್

ಸಂಗ್ರಹ - *ಶಂ.ಚಂ. ಜೋಯಿಸ್*

ಪುಸ್ತಕ ವಿಭಾಗ

# ಕೈಗಾ

## ಅಪೇಕ್ಷಿತವೋ?
## ಅನಪೇಕ್ಷಿತವೋ?



ಸಂಗ್ರಹ:

ಎಸ್. ಎನ್. ಲಕ್ಷ್ಮೀಪತಿ

ಕೈಗಾ ಅಣುಸ್ಥಾವರ ಕುರಿತಂತೆ 10-11-1988ರಂದು ಕರ್ನಾಟಕ ಸರಕಾರ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ರಾಷ್ಟ್ರೀಯ ಕಾರ್ಯಾಗಾರವೊಂದನ್ನು ಏರ್ಪಡಿಸಿತ್ತು. ಆಗ ಪರಮಾಣು ಸ್ಥಾವರಗಳು ಪ್ರಕೃತಿ ಮತ್ತು ಜೀವ ಸಂಪತ್ತಿನ ಮೇಲೆ ಬೀರಬಹುದೆನ್ನುವ ಪ್ರತಿಕೂಲ ಪರಿಣಾಮದ ಬಗ್ಗೆ ಚರ್ಚಿಸಿದರೂ, ಉದ್ದೇಶಿತ ಕೈಗಾ ಪರಮಾಣು ಸ್ಥಾವರದ ಸಾಧಕ-ಬಾಧಕಗಳನ್ನು ವಿಶೇಷವಾಗಿ ಚರ್ಚಿಸಲಾಯಿತು.

ಖ್ಯಾತ ಅಣು ವಿಜ್ಞಾನಿ, ಕನ್ನಡಿಗ ಹಾಗೂ ಅಣುಶಕ್ತಿ ಆಯೋಗದ ಅಧ್ಯಕ್ಷ ಡಾ.ಎಂ.ಆರ್. ಶ್ರೀನಿವಾಸನ್, ಪ್ರೊ.ಮಾಲ್ಕಂ ಆದಿಶೇಷಯ್ಯ, ಡಾ. ಶಿವರಾಮ ಕಾರಂತ, ಮಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿ ಹಾಗೂ ಅಂತಾರಾಷ್ಟ್ರೀಯ ಖ್ಯಾತಿಯ ಸಸ್ಯಶಾಸ್ತ್ರಜ್ಞ ಡಾ. ಷಫಿಉಲ್ಲಾ, ಯೋಜನಾ ಆಯೋಗದ ಉಪಾಧ್ಯಕ್ಷ ಡಾ. ಶ್ರೀವಾತ್ಸವ ಮುಂತಾದವರು ಅಣುಶಕ್ತಿ ಪರ-ವಿರೋಧಿ ಲೇಖನಗಳನ್ನು ಮಂಡಿಸಿದರು. ಅಲ್ಲಿ ಮಂಡಿಸಲಾದ ಲೇಖನಗಳ ಪೈಕಿ ಕೆಲವನ್ನು ಆಯ್ದು ಸಂಕ್ಷೇಪಿಸಿ ಇಲ್ಲಿ ಕೊಡಲಾಗಿದೆ.

ಉದ್ದೇಶಿತ ಕೈಗಾ ಪರಮಾಣುಸ್ಥಾವರ ರಾಷ್ಟ್ರಹಿತಕ್ಕೆ ಸಾಧಕವೆ ಅಥವಾ ಬಾಧಕವೆ ಎಂಬುದನ್ನು ಓದುಗರೇ ನಿರ್ಧರಿಸಬೇಕು.

ಪರ

# ಕೈಗಾ ಯೋಜನೆಯ ಪ್ರಮುಖ ವೈಶಿಷ್ಟ್ಯಗಳು

ಕರ್ನಾಟಕದಲ್ಲಿ ವಿದ್ಯುತ್ ಉತ್ಪಾದನೆಯು ಹೆಚ್ಚುಮಟ್ಟಿಗೆ ಮಳೆಯನ್ನು ಅವಲಂಬಿಸಿದೆ. ರಾಜ್ಯದಲ್ಲಿ ಅನೇಕ ವರ್ಷಗಳಿಂದ ಅಣೆಕಟ್ಟೆಗಳು ಭರ್ತಿಯಾಗದೆ ವಿದ್ಯುತ್ತಿನ ಉತ್ಪಾದನೆ ಕುಂಠಿತಗೊಂಡಿದೆ. 7ನೇ ಪಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ (1989-90) 2,590 ಮೆಗಾವ್ಯಾಟ್ ಜಲವಿದ್ಯುತ್ತಿನಿಂದಲೂ 630 ಮೆಗಾವ್ಯಾಟ್. ಶಾಖೋತ್ಪನ್ನ ಕೇಂದ್ರದಿಂದಲೂ ದೊರೆಯಬಹುದೆಂದು ಎಣಿಸಲಾಗಿದೆ. ಆದರೆ 11ನೇ ವಾರ್ಷಿಕ ವಿದ್ಯುಚ್ಛಕ್ತಿಯ ಸರ್ವೆಯಂತೆ ಕರ್ನಾಟಕದ ವಿದ್ಯುತ್ ಬೇಡಿಕೆ ಕೆಳಕಂಡಂತೆ ಇದೆ.

| | 1984-85<br>6ನೇಯ ಪಂ.ವಾ.ಯೋಜನೆ ಅಂತ್ಯ | 1989-90<br>7ನೇಯ ಪಂ.ವಾ.ಯೋಜನೆ ಅಂತ್ಯ | 1991-92<br>ಗುರಿ |
|---|---|---|---|
| ಪೀಕ್‌ಲೋಡ್ ಮೆಗಾವ್ಯಾಟ್ | 2.166 | 3,325 | 3,948 |
| ವಿದ್ಯುತ್‌ಬೇಡಿಕೆ ಮೆಗಾಕಿಲೋವ್ಯಾಟ್ | 13,262 | 20405 | 24,244 |

ಇತ್ತೀಚಿನ ವರ್ಷಗಳಲ್ಲಿ ವಿದ್ಯುತ್ ಬೇಡಿಕೆ ಗಗನ ಮುಟ್ಟಿದ್ದು ಮೂಲಭೂತ ಅಗತ್ಯಗಳನ್ನು ಪೂರೈಸಿಕೊಳ್ಳಲು ಸೂಕ್ತ ಮಾರ್ಗೋಪಾಯಗಳನ್ನು ಹುಡುಕಿಕೊಳ್ಳಲೇಬೇಕಾದ ಪರಿಸ್ಥಿತಿ ತಲೆದೋರಿದೆ. ಶೀಘ್ರವಾಗಿ ವಿಸ್ತರಣಗೊಂಡ ಜಲವಿದ್ಯುತ್ ಸಂಪನ್ಮೂಲ ಅಂತರ್ಗತವಾಗಿ ಮೇಳೈಸಿಕೊಂಡಿರುವ ಕೆಲವು ಸಮಸ್ಯೆಗಳ ಜೊತೆಗೆ ರಾಜ್ಯದಲ್ಲಿ ಯಾವುದೇ ಕಲ್ಲಿದ್ದಲು ನಿಕ್ಷೇಪ ಇಲ್ಲದಿರುವುದರ ಕಾರಣ ನಾವು ಬದಲಿ ಶಕ್ತಿಗೆ ಶರಣು ಹೋಗಬೇಕಾದ ಸಂದರ್ಭಕ್ಕೆ ಈಡಾಗಿದ್ದೇವೆ. ಆ ಬದಲಿ ಶಕ್ತಿಯೇ ಪರಮಾಣು ಶಕ್ತಿ.

**ಕೈಗಾ ನೆಲೆಯ ಆಯ್ಕೆ ಕುರಿತಂತೆ**

ಅಣುಶಕ್ತಿ ಇಲಾಖೆಯು ಸ್ಥಳದ ಆಯ್ಕೆಯ ಪೂರ್ವಭಾವಿಯಾಗಿ ಅನುಸರಿಸಬೇಕಾದ ಎಲ್ಲ ಅಂಶಗಳನ್ನೂ ಬಹು ಎಚ್ಚರಿಕೆಯಿಂದ ಪರಿಶೀಲಿಸಿರುತ್ತದೆ. ಸ್ಥಳ ಆಯ್ಕೆ ಸಮಿತಿಯಲ್ಲಿ ಕೇಂದ್ರ ವಿದ್ಯುತ್ ಪ್ರಾಧಿಕಾರದ ತಂತ್ರಜ್ಞರು, ಅಣುಶಕ್ತಿ ಇಲಾಖೆ, ಪರಿಸರ ಸಚಿವಾಲಯ, ತಾಂತ್ರಿಕ ತಜ್ಞರು, ಆರೋಗ್ಯ, ಭೌತಶಾಸ್ತ್ರ ವಿಭಾಗ, ಭೂವಿಜ್ಞಾನ ಮುಂತಾದ ವಿವಿಧ ಇಲಾಖೆಗಳ ತಜ್ಞರು ಭಾಗವಹಿಸಿದ್ದರು. ಇವರ ಅಧ್ಯಯನದ ವರದಿಯನ್ನು ಆಧರಿಸಿ ಕೈಗಾವನ್ನು ಅಂತಿಮವಾಗಿ ಆಯ್ಕೆ ಮಾಡಲಾಗಿದೆ. ಈ ತಜ್ಞರು ಕೈಗಾ ಜೊತೆಗೆ ತುಂಗಭದ್ರಾ ಮತ್ತು ನಾರಾಯಣಪುರಗಳನ್ನೂ ಪರಿಶೀಲಿಸಿರುವರು. ಆದರೆ ಕೈಗಾವನ್ನು ಈ ಕೆಳಗಿನ ಕಾರಣಗಳಿಂದಾಗಿ ಆಯ್ಕೆ ಮಾಡಲಾಯಿತು:

1. ಕಲ್ಲಿದ್ದಲು ಗಣಿಗಳಿಂದ ದೂರದಲ್ಲಿದೆ.
2. ಜಲ ವಿವಾದವಿಲ್ಲ.
3. ಅತ್ಯಂತ ಕಡಿಮೆ ಜನಸಾಂದ್ರತೆಯ ವಲಯವಿದು.
4. ದೃಢವಾದ ಆಂತರಿಕ ಭೂಗರ್ಭ ಸ್ತರಗಳುಳ್ಳ ಸ್ಥಳ.
5. ದಕ್ಷಿಣ ವಲಯದ ಪಶ್ಚಿಮ ಭಾಗವನ್ನು ವಿದ್ಯುತ್ ಉತ್ಪಾದನೆಯ ಮೂಲಕ ಅಭಿವೃದ್ಧಿಗೊಳಿಸಬಹುದು.

ಪರಿಸರ ಸಂಪನ್ಮೂಲ ಇಲಾಖೆಯ ಪ್ರತಿನಿಧಿಗಳು ತಮ್ಮ ಸಮ್ಮತಿಯನ್ನು ನೀಡುವ ಮುನ್ನ ಈ ಸ್ಥಳಕ್ಕೆ ಭೇಟಿ ನೀಡಿ ಪರಿಶೀಲಿಸಿದ್ದಾರೆ. ಗಿಡ ನೆಡುವುದು, ಪೋಷಿಸುವುದು ಮುಂತಾದ ಪರಿಸರ ಇಲಾಖೆ ವಿಧಿಸಿದ ಶರತ್ತುಗಳನ್ನೆಲ್ಲ ಪಾಲಿಸುವ ಮುಚ್ಚಳಿಕೆಯನ್ನು ಅಣುಶಕ್ತಿ ನಿಗಮ ಅದಕ್ಕೆ ಸಲ್ಲಿಸಿದ ನಂತರವೇ ಮುಂದಿನ ಕೆಲಸ-ಕಾರ್ಯಗಳನ್ನು ಕೈಗಾದಲ್ಲಿ ಪ್ರಾರಂಭಿಸಲಾಗಿದೆ.

**ಅರಣ್ಯ**

ಉದ್ದೇಶಿತ ಕೈಗಾ ಯೋಜನೆಯ ಮುಖ್ಯ ನೆಲೆ ಆಯ್ಕೆಯಾಗಿರುವುದು ಕೆಳದರ್ಜೆಯ ಕಾಡಿನಲ್ಲಿ. ವಾಣಿಜ್ಯ ಉದ್ದೇಶದ ಮರಗಳನ್ನು ಬೆಳೆಸಿ ನಿಯತಕಾಲಿಕವಾಗಿ ಕಡಿಯುವಂತಹ

ಕಾಡಿದು. ಸ್ಥಾವರದ ನಿರ್ಮಾಣ, ಕಟ್ಟಡಗಳ ನಿರ್ಮಾಣ ಹಾಗೂ ರಸ್ತೆಗಳ ನಿರ್ಮಾಣ ಮಾಡುವ ಸಂದರ್ಭದಲ್ಲಿ ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ಮರಗಳನ್ನು ಕಡಿಯಲು ಎಲ್ಲ ಮುಂಜಾಗರೂಕತೆಯನ್ನು ತೆಗೆದುಕೊಳ್ಳಲಾಗುತ್ತಿದೆ. ಸ್ಥಾವರದ ವತಿಯಿಂದಲೇ ಕಡಿಯುವ ಮರಗಳಿಗೆ ಪ್ರತಿಯಾಗಿ ನಾಲ್ಕು ಪಟ್ಟು ಮರಗಳನ್ನು ಈ ಕಾಡಿನಲ್ಲಿ ಬೆಳೆಸುವ, ಸಂರಕ್ಷಿಸುವ ಕಾರ್ಯಕ್ಕೆ ಒಂದು ಕೋಟಿಗೂ ಹೆಚ್ಚು ಹಣವನ್ನು ವಿನಿಯೋಗಿಸಲಾಗುವದು.

ಕೈಗಾ ಸ್ಥಾವರದ ನಿರ್ಮಾಣಕ್ಕಾಗಿ ಸರಕಾರ 732 ಹೆಕ್ಟೇರು ಕಾಡನ್ನು ಮಂಜೂರು ಮಾಡಿದ್ದರೂ 235 ಮೆಗಾವ್ಯಾಟ್‌ನ ಆರು ಉದ್ದೇಶಿತ ಘಟಕಗಳ ಸ್ಥಾಪನೆಗೆ ಬಳಕೆಯಾಗಿರುವ ಭೂಮಿ ಕೇವಲ 120 ಹೆಕ್ಟೇರುಗಳಷ್ಟು. ಕರ್ನಾಟಕ ಸರಕಾರದ ಅರಣ್ಯ ಇಲಾಖೆಯ ವಶದಲ್ಲೇ ಈ ಸ್ಥಾವರದ ಆಸುಪಾಸಿನ ಅರಣ್ಯಪ್ರದೇಶ ಸಂರಕ್ಷಿಸಲ್ಪಡುತ್ತದೆ. ಈ ಅರಣ್ಯ ಸಂರಕ್ಷಣೆಗೆ ಬೇಕಾಗುವ ಸಿಬ್ಬಂದಿಯ ವೇತನ ಮೊದಲಾದವನ್ನು ಅಣುಶಕ್ತಿ ನಿಗಮ ಪೂರೈಸಿಕೊಳ್ಳುತ್ತದೆ.

**ಪುನರ್‌ವಸತಿ**

ಕೈಗಾದಲ್ಲಿ ಪುನರ್‌ವಸತಿಗೊಳಗಾಗುವ ಒಟ್ಟು ಸಂಸಾರಗಳ ಸಂಖ್ಯೆ 85. ಪ್ರತಿ ಸಂಸಾರದ ಜಮೀನಿನ ಸ್ವಾಧೀನಕ್ಕೆ ಪರಿಹಾರವಾಗಿ ಭೂ ಪರಿಹಾರಧನದ ಜೊತೆಗೆ ಪುನರ್‌ವಸತಿ ಸಹಾಯಧನವನ್ನೂ ಕೊಡಲಾಸುವುದು. ಅಣುಶಕ್ತಿ ನಿಗಮ ಈ ಕಾರ್ಯಕ್ಕೆ ಅಗತ್ಯವಾದ ಹಣವನ್ನು ರಾಜ್ಯಸರಕಾರದ ವಶಕ್ಕೆ ನೀಡಿದೆ.

**ಸ್ಥಳೀಯರಿಗೆ ಉದ್ಯೋಗ**

ಈಗಾಗಲೇ ಹೇಳಿರುವಂತೆ ಕೈಗಾ ಸ್ಥಾವರದ ಸ್ಥಾಪನೆಯಿಂದಾಗಿ 85 ಸಂಸಾರಗಳು ಮಾತ್ರ ತೊಂದರೆಗೆ ಈಡಾಗುವವು. ಇದರಲ್ಲಿ 48 ಮಂದಿಯ ಜಮೀನನ್ನು ಸ್ಥಾವರದ ಸಿಬ್ಬಂದಿಯ ವಸತಿಗಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆ. ನೌಕರಿ ಕೊಡಬೇಕಾದಾಗ ಜಮೀನು ಕಳೆದುಕೊಂಡ ಸಂಸಾರಗಳಿಗೆ ಮೊದಲ ಆದ್ಯತೆ ನೀಡಲಾಗುವದು. ಈಗ ಕೈಗಾದಲ್ಲಿ ಕೆಲಸ ಮಾಡುತ್ತಿರುವ ಒಟ್ಟು 200 ಮಂದಿ ಸಿಬ್ಬಂದಿಯಲ್ಲಿ 31 ಮಂದಿ ಭೂಸ್ವಾಧೀನದಿಂದ ಜಮೀನು ಕಳೆದುಕೊಂಡ ಸಂಸಾರಗಳಿಂದ ಬಂದವರು. ಜೊತೆಗೆ 18 ಮಂದಿಗೆ ಫಿಟ್ಟರ್, ವೆಲ್ಡರ್, ಎಲೆಕ್ಟ್ರಿಷಿಯನ್, ಮೆಷಿನಿಸ್ಟ್ ಮುಂತಾದ ವ್ಯಾಸಂಗಗಳಲ್ಲಿ ತರಬೇತಿ ನೀಡಲಾಗಿದೆ. 'ಸಿ' ಮತ್ತು 'ಡಿ' ವರ್ಗದ ಎಲ್ಲ ಹುದ್ದೆಗಳನ್ನು ಸ್ಥಳೀಯ ಉದ್ಯೋಗ ವಿನಿಮಯ ಕೇಂದ್ರದಿಂದ ಭರ್ತಿಮಾಡಿಕೊಳ್ಳಲಾಗುವುದು.

**ಪರಿಸರದ ಮೇಲೆ ಪ್ರಭಾವ**

ಅಣುಸ್ಥಾವರಗಳಿಂದ ಹೊರಸೂಸುವ ಅಣುವಿಕಿರಣದ ಪರಿಣಾಮ ಕುರಿತಂತೆ ಬಣ್ಣಕಟ್ಟಿ ಹೇಳುವುದನ್ನು ನಾನು ಆಗಾಗ್ಗೆ ಕೇಳುತ್ತಿದ್ದೇನೆ. ಸ್ಥಾವರದಿಂದ ಹೊರಹೊಮ್ಮುವ ಅಣುವಿಕಿರಣದ ಪ್ರಮಾಣ ತೀರ ಅಲ್ಪಮಟ್ಟದ್ದಾಗಿರುವದರಿಂದ ಸ್ಥಾವರದ ಸುತ್ತಮುತ್ತ ಇರುವ ಜನರಿಗಾಗಲಿ, ಪಶುಪಕ್ಷಿಗಳಿಗಾಗಲಿ, ಜಲಚರಗಳಿಗಾಗಲಿ, ಮರಗಿಡ ಅಥವಾ ಮೃಗಗಳಿಗಾಗಲಿ, ಕಾರ್ಯನಿರತ ಸ್ಥಾವರಗಳಿಂದ ಹಾನಿ ತಟ್ಟುವುದಿಲ್ಲ. ವಾಸ್ತವವಾಗಿ ಇಲ್ಲಿಂದ ಹೊರಡುವ ವಿಕಿರಣದ ಪ್ರಮಾಣ ಪ್ರಕೃತಿಯಲ್ಲಿ ನೈಸರ್ಗಿಕವಾಗಿ ಹೊರಸೂಸುವ ವಿಕಿರಣದ ಪ್ರಮಾಣಕ್ಕಿಂತ ತೀರ ಕಡಿಮೆ. ಉತ್ತಮ ವಿನ್ಯಾಸ, ಅತ್ಯಂತ ಮುಂದುವರಿದ ಸುರಕ್ಷಿತ ಕ್ರಮಗಳನ್ನು ಅಳವಡಿಸಿದ್ದರಿಂದ ಕೈಗಾ ಪರಮಾಣು ಸ್ಥಾವರದಲ್ಲಿ ಕೆಲಸ ಮಾಡುವ ಸಿಬ್ಬಂದಿಯ ಹಾಗೂ ಸುತ್ತಮುತ್ತ ಪರಿಸರದ ಮೇಲೆ ಅಣುವಿಕಿರಣದ ಪ್ರಭಾವ ಗಣನೀಯವಾಗಿ ಕಡಿಮೆಯಿರುತ್ತದೆ.

ಕೈಗಾ ಪರಮಾಣು ಸ್ಥಾವರದ ಬಳಿ ಪರಿಸರ ಸರ್ವೇಕ್ಷಣ ಪ್ರಯೋಗಾಲಯವನ್ನು ಸ್ಥಾಪಿಸಲಾಗುವುದು. ಈ ಸ್ಥಾವರ ಕೆಲಸ ಪ್ರಾರಂಭಿಸುವುದಕ್ಕಿಂತ ಎರಡು-ಮೂರು ವರ್ಷ ಮೊದಲ ಅರಣ್ಯ, ಪ್ರಾಣಿ, ಪಕ್ಷಿ, ಜಲಚರ, ಆಹಾರ ಪದಾರ್ಥ, ಗಾಳಿ ಹಾಗೂ ನೀರಿನ ಮೇಲೆ ಉಂಟಾಗಿರುವ ಪ್ರಕೃತಿದತ್ತ ವಿಕಿರಣದ ಪ್ರಭಾವವನ್ನೂ ಈ ಪ್ರಯೋಗಾಲಯ ಅಳೆಯಲು ಪ್ರಾರಂಭಿಸುತ್ತದೆ. ಈ ಕಾರ್ಯ ನಿಯಮಿತವಾಗಿ ಮುಂದುವರಿಯುವುದು ಹಾಗೂ ಕೈಗಾ ಸ್ಥಾವರದಿಂದ ಹೊರಸೂಸುವ ವಿಕಿರಣದ ಪ್ರಮಾಣ ನಿಗದಿತ ಪ್ರಮಾಣವನ್ನು ಎಂದೂ ಮೀರದಂತೆ ತೀವ್ರ ಎಚ್ಚರಿಕೆಯನ್ನು ವಹಿಸಲಾಗುವುದು.

### ಸುರಕ್ಷತಾ ಕ್ರಮಗಳು

ಸ್ಥಾವರದಲ್ಲಿ ಕೆಲಸ ಮಾಡುವ ಸಿಬ್ಬಂದಿಯನ್ನು ಸಾರ್ವಜನಿಕರ ಹಾಗೂ ಪರಿಸರದ ಸುರಕ್ಷತೆಯ ಸಂರಕ್ಷಣಾ ಕ್ರಮಗಳನ್ನು ಜಾರಿಗೆ ತರುವಲ್ಲಿ ಅಣುಶಕ್ತಿ ನಿಗಮ ಪೂರ್ಣ ಹೊಣೆಹೊತ್ತಿದೆ. ಸ್ಥಾವರದ ವಿನ್ಯಾಸ ನಿರ್ಮಾಣ, ನಿರ್ವಹಣೆಯ ಎಲ್ಲ ಹಂತದಲ್ಲಿ ಪಾಲಿಸಬೇಕಾದ ಮುಂಜಾಗ್ರತೆ ಕ್ರಮಗಳನ್ನು ಕಟ್ಟುನಿಟ್ಟಾಗಿ ನಿಗಮ ಜಾರಿಗೆ ತರುತ್ತದೆ. ಸ್ಥಾವರದಲ್ಲಿರುವ ವೈದ್ಯರ ತಂಡವು ಸ್ಥಾವರದ ಸಿಬ್ಬಂದಿಯ ಪರೀಕ್ಷಿಸುವುದಲ್ಲದೆ ಪರಿಸರದ ಮೇಲೆ ವಿಕಿರಣದ ಪ್ರಮಾಣವನ್ನು ಆಗಿಂದಾಗ್ಗೆ ಪತ್ತೆಹಚ್ಚುವುದು. ಈ ಸ್ವಾಯತ್ತ ತಂಡ ಪರಿಸರ ಸರ್ವೇಕ್ಷಣಾ ಪ್ರಯೋಗಾಲಯಕ್ಕೆ ಜವಾಬುದಾರಿಯಾಗಿರುತ್ತದೆ. ಸ್ಥಾವರದ ಮೇಲೆ ಸಂಪೂರ್ಣ ಸ್ವಾಮ್ಯವನ್ನು ಪರಮಾಣು ಶಕ್ತಿ ನಿಯಂತ್ರಣ ಮಂಡಳಿಯು ಹೊಂದಿದೆ. ಈ ಮಂಡಳಿಗೆ ಸಹಾಯ ಮಾಡಲು ವೈದ್ಯರ ತಂಡದಿಂದ ಕೂಡಿದ ಪರಿಸರ ಸರ್ವೇಕ್ಷಣ ಪ್ರಯೋಗಾಲಯವಿರುತ್ತದೆ. ಸುರಕ್ಷತಾ ನಿಯಮಗಳ ಉಲ್ಲಂಘನೆಯ ಸಂದರ್ಭದಲ್ಲಿ ಪರಮಾಣು ಶಕ್ತಿ ನಿಯಂತ್ರಣ ಮಂಡಳಿಯು ಸ್ಥಾವರ ಕೆಲಸ ನಿಲ್ಲಿಸುವಂತೆ ಹೇಳುವ ಪರಮಾಧಿಕಾರವನ್ನು ಹೊಂದಿದೆ.

ಇವಿಷ್ಟು ಕೈಗಾ ಯೋಜನೆಯ ಪ್ರಮುಖ ವೈಶಿಷ್ಟ್ಯಗಳು. ಕೈಗಾ ಬಗ್ಗೆ ನಿಮ್ಮಲ್ಲಿ ಮೂಡಿದ್ದ ಸಂಶಯಗಳ ನಿವಾರಣೆಯಾಗಿದೆ ಎಂದು ಭಾವಿಸುವೆ.

*(ಶ್ರೀ ಎಸ್.ಎಲ್.ಕಟ್ಟಿ, ವ್ಯವಸ್ಥಾಪಕ ನಿರ್ದೇಶಕರು, ಪರಮಾಣುಶಕ್ತಿ ನಿಗಮ ಇವರು ದಿ. 10-11 ಡಿಸೆಂಬರ್ 1988ರಂದು ಬೆಂಗಳೂರಿನ ವಿಜ್ಞಾನ ಮಂದಿರದಲ್ಲಿ ಕೈಗಾ ಪರಮಾಣು ಸ್ಥಾವರ ಕುರಿತಂತೆ ನಡೆದ ರಾಷ್ಟ್ರೀಯ ಚರ್ಚಾಗಾರದಲ್ಲಿ ಮಾಡಿದ ಭಾಷಣದ ಭಾವಾನುವಾದ.)*

## ವಿರೋಧ

# ಪರಮಾಣು ಶಕ್ತಿ: ಅಪಾಯಕಾರಿ ಹಾಗೂ ದುಬಾರಿ

ಪರಮಾಣುಶಕ್ತಿಯ ಟೀಕೆಯು ವಿಜ್ಞಾನದ ವಿರೋಧ ಅಥವಾ ತಂತ್ರಜ್ಞಾನದ ವಿರೋಧವೆಂದು ಅರ್ಥವಲ್ಲ. ವಾಸ್ತವವಾಗಿ, ಅಣುವಿಕಿರಣವು ಅನೇಕ ತಲೆಮಾರುಗಳವರೆಗೆ ಜೈವಿಕ ಪ್ರಕ್ರಿಯೆಗೆ ಮಾರಕವಾಗುವುದೆಂದು ವೈಜ್ಞಾನಿಕ ಆಧಾರಗಳಿಂದ ತಿಳಿದು ಬಂದಿದೆ. ಅಣುವಿಕಿರಣದಿಂದ ವರ್ಣತಂತು (chromosomes)ಗಳಿಗೆ ಧಕ್ಕೆಯೊದಗಿ ವಂಶವಾಹಿಗಳಲ್ಲಿ (genes) ಬದಲಾ

ವಣೆಯುಂಟಾಗಿ ವಿಕೃತ ರೂಪದ ಅಥವಾ ಅಂಗವಿಕಲ ಮಕ್ಕಳು ಜನಿಸುತ್ತವೆ ಎಂಬುದು ದೃಢಪಟ್ಟಿದೆ.

ಅಣು ಸ್ಥಾವರಗಳಿಂದ ಸೋರಿ ಹೋಗುವ ಅಣು ವಿಕಿರಣದ ಪ್ರಭಾವಕ್ಕೆ ಗುರಿಯಾದವರ ಮೇಲೆ ಅಂತಹ ಪ್ರತಿಕೂಲ ಪರಿಣಾಮ ನೇರವಾಗಿ ಆಗದೇ ಇರಬಹುದು. ಆದರೆ ಎರಡನೆ ಅಥವಾ ಮೂರನೆ ತಲೆಮಾರಿನಲ್ಲಿ ವಿಕಿರಣದ ಪ್ರಭಾವ ಕಾಣಿಸಿಕೊಳ್ಳಲಾರದೆಂದು ಹೇಳಲು ಸಾಧ್ಯವಿಲ್ಲ! ಅಣುವಿಕಿರಣದಿಂದಾಗುವ ಅಪಘಾತಗಳನ್ನು ಭಾರಿ ಪ್ರಮಾಣದಲ್ಲಾಗುವ ರಸ್ತೆ ಅಪಘಾತಗಳಿಗೆ, ಅಣೆಕಟ್ಟುಗಳ ಒಡೆಯುವಿಕೆಗೆ ಅಥವಾ ಭೂಪಾಲ ಅನಿಲ ದುರಂತದ ಮಾದರಿ ಅಪಘಾತಗಳಿಗೆ ಹೋಲಿಸುವುದು ಅಸಂಬದ್ಧ. ಅಣುವಿಕಿರಣದಿಂದ ಉಂಟಾಗುವ ಅಪಾಯ ಕಣ್ಣಿಗೆ ಕಾಣಿಸುವುದಿಲ್ಲ. ಅದನ್ನು ಮಾರ್ಪಡಿಸಲೂ ಸಾಧ್ಯವಿಲ್ಲ! ಇವೆಲ್ಲಕ್ಕೂ ಮೇಲಾಗಿ ಅದರ ಪರಿಣಾಮ ಅಳತೆಗೂ ನಿಲುಕದ್ದು!

**ಮೂಲ ಸಮಸ್ಯೆಗಳು**

ನಮ್ಮ ದೇಶದಲ್ಲಿ ಇಂದು ಪರಮಾಣು ಶಕ್ತಿಯ ಬಗ್ಗೆ ಚರ್ಚಿಸಲು ಅಧಿಕೃತ ಮಾಹಿತಿ ಸಾಕಷ್ಟು ದೊರಕುವುದು ದುಸ್ತರವಾಗಿದೆ. ಚರ್ನೋಬಿಲ್ ದುರಂತ ಭಾರತದಲ್ಲಿ ಮರುಕಳಿಸದೆಂದು ನಮ್ಮ ಪರಮಾಣು ಶಕ್ತಿ ಇಲಾಖೆಯ ವಿಜ್ಞಾನಿಗಳು ಹೇಳಬಹುದು. ನಮ್ಮ ಸ್ಥಾವರದ ವಿನ್ಯಾಸವು ರಶಿಯದ ಸ್ಥಾವರಗಳಿಗಿಂತ ಭಿನ್ನವೆಂದೂ, ನಮ್ಮ ಸ್ಥಾವರವು ಎರಡನೆಯ ಭದ್ರ ಕೋಟೆಯಲ್ಲಿ ಅಂತರ್ಗತವಾಗಿರುತ್ತದೆಂದೂ ಸಾರ್ವತ್ರಿಕವಾಗಿ ಹೇಳಲಾಗುವ ಮಾತು ನಂಬಲರ್ಹವಲ್ಲ.

''ಚರ್ನೋಬಿಲ್‌ನಂತಹ ಅಪಘಾತ'' ಭಾರತದಲ್ಲಿ ಎಂದೆಂದಿಗೂ ಉಂಟಾಗದು. ಕಾರಣ ಇಲ್ಲಿ ತೆಗೆದುಕೊಂಡಿರುವ ಮುನ್ನೆಚ್ಚರಿಕೆಗಳು ಬೇರೆ ದೇಶಗಳಿಗಿಂತಲೂ ಅತ್ಯುತ್ತಮ ಎಂದು ಅಣುಶಕ್ತಿ ಇಲಾಖೆಯ ಅಧಿಕಾರಿಗಳು ಹೇಳುವುದನ್ನು ರುಜುವಾತುಪಡಿಸಲು ಯಾವುದೇ ವೈಜ್ಞಾನಿಕ ಮಾಹಿತಿಯನ್ನು ಒದಗಿಸಲಾಗುತ್ತಿಲ್ಲ. ಜೊತೆಗೆ ಹಿಂದಿನ ವರದಿಗಳನ್ನು ಪರಿಶೀಲಿಸಿ ನೋಡಿದಾಗ ಸುರಕ್ಷತೆಯ ಬಗ್ಗೆ ಇವರು ಹೇಳುವುದು ತೀರ ಸುಳ್ಳೆಂದು ತಿಳಿದುಬರುತ್ತದೆ. ಅಂದಾಜು 300 ಅಪಘಾತಗಳಲ್ಲಿ ಅಣುವಿಕಿರಣ ಹೊರಚೆಲ್ಲಿ ಅಣುಶಕ್ತಿ ಆಯೋಗದ ನೌಕರರಿಗೆ ಭೌತಿಕ ನ್ಯೂನತೆಗಳು ತಲೆದೋರಿವೆ. ಆದರೆ ಈ ಎಲ್ಲ ನತದೃಷ್ಟ ಅಪಘಾತಗಳ ವರದಿಗಳು ಗೌಪ್ಯವಾಗೇ ಉಳಿದು ಹೋಗಿವೆ! ಉದಾಹರಣೆಗೆ 1979ರಲ್ಲಿ ತಾರಾಪುರ ಅಣುಸ್ಥಾವರದಲ್ಲಿ ಉಂಟಾದ ಅಪಘಾತದಲ್ಲಿ 3 ಮಂದಿ ಸತ್ತು 3000 ಮಂದಿ ನೌಕರರು ವಿಕಿರಣದ ಪ್ರಭಾವಕ್ಕೆ ತುತ್ತಾದರು. 1981ರಲ್ಲಿ ರಾವತ್‌ಭಟ್ ಅಣುಸ್ಥಾವರದ ಘಟಕ-ಇಇದರಲ್ಲಿ ಉಂಟಾದ ಸೋರುವಿಕೆಯಿಂದ 2000 ಸಿಬ್ಬಂದಿ ಗರಿಷ್ಠಮಟ್ಟದ ವಿಕಿರಣಕ್ಕೆ ತುತ್ತಾಗಿ 300 ಮಂದಿ ಆಸ್ಪತ್ರೆಗೆ ದಾಖಲಾದರು. RAPS-I ಮತ್ತು II ಘಟಕಗಳಲ್ಲಿ ಸೋರಿದ ಅಣುವಿಕಿರಣದಿಂದ ಪರಿಸರದ ಮೇಲೆ ಆದ ಹಾನಿಯನ್ನು ಪ್ರಕಟಿಸಲೇ ಇಲ್ಲ. ನಮ್ಮಲ್ಲಿ ಅಣುಶಕ್ತಿ ಆಯೋಗದ ದಾಖಲೆಗಳನ್ನು ತೆಗೆಸಿನೋಡುವಂಥ ಅರ್ಹ ಸ್ವತಂತ್ರ ಏಜೆನ್ಸಿಯೊಂದು ಇಲ್ಲ. ಮೇಲಾಗಿ 1962ರ ಭಾರತ ಅಣುಶಕ್ತಿ ಕಾಯ್ದೆಯು ಸರಕಾರವು ಸಾರ್ವಜನಿಕರಿಗೆ ಯಾವುದೇ ವಿಮರ್ಶಾತ್ಮಕ ಮಾಹಿತಿಯನ್ನು ಪಡೆದುಕೊಳ್ಳುವ ಅವಕಾಶವನ್ನು ತಿರಸ್ಕರಿಸುತ್ತದೆ.

ಸುರಕ್ಷಿತ-ಸುರಕ್ಷಿತವಲ್ಲದ್ದು ಎಂಬ ಸ್ಥಾವರಗಳು ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಅವು ಪರಿಸರಕ್ಕಾಗಲಿ ಅಥವಾ ಜೀವಕ್ಕಾಗಲೀ ಕರಾರುವಾಕ್ಕಾಗಿ ಸುರಕ್ಷತೆಯ ಭರವಸೆಯನ್ನು ನೀಡಲಾ

ರವು. ಪರಮಾಣು ದುರಂತಗಳ ಎಲ್ಲ ದಾಖಲೆಗಳು ಹಾಗೂ ವಿಶ್ಲೇಷಣೆಗಳು ಹೇಳುವುದು ಒಂದೇ - 'ಸಂಭವನೀಯ'ವೆಂದು. ಅಣು ವಿದಳನ ಪ್ರಕ್ರಿಯೆಯು ಮಾನವನ ತಾಂತ್ರಿಕ ಕೌಶಲದ ಪರಿಧಿಯೊಳಗೆ ಬರುವುದರಿಂದ ಅವನ ಜ್ಞಾನದ ಮಿತಿಯನ್ನು ನೆಚ್ಚಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ದೇಶದ ಪರಮಾಣು ವ್ಯವಸ್ಥೆಯು 'ಸಂಪೂರ್ಣವಾಗಿ ಸುರಕ್ಷಿತ'ವಾಗಿದೆ ಎನ್ನುವುದು ಸತ್ಯವೂ ಅಲ್ಲ ಅಥವಾ ವೈಜ್ಞಾನಿಕವಾಗಿ ಸಮಂಜಸವೂ ಅಲ್ಲ.

ಶಕ್ತಿಯನ್ನು ಉತ್ಪಾದಿಸುವ ವಿದಳನ ಪ್ರಕ್ರಿಯೆಯಲ್ಲಿ ಯುರೇನಿಯಮ್-235 ಅನೇಕ ಅತಿಯಾದ ನಂಜುಳ್ಳ ಮೂಲವಸ್ತುಗಳನ್ನು ಉತ್ಪಾದಿಸುತ್ತದೆ. ಜೊತೆಗೆ ವಿದಳನಗೊಳ್ಳದ ಯುರೇನಿಯಂ-238 ಅಧಿಕ ನ್ಯೂಟ್ರಾನುಗಳನ್ನು ಸೆರೆ ಹಿಡಿದಾಗ ಪ್ಲುಟೋನಿಯಮ್ ಸಾವಿರಾರು ವರ್ಷಗಳವರೆಗೆ ಅಪಾಯಕಾರಿಯಾಗಿ ಉಳಿಯುತ್ತದೆ. ಇಂಧನದ ಕಟ್ಟಿನಲ್ಲಿ (Bundle) ಅತಿ ತೀಕ್ಷ್ಣವಾದ ವಿಕಿರಣತೆಯನ್ನು ಉತ್ಪಾದಿಸುತ್ತದೆ. ಇದರಲ್ಲಿ ರವೆಯಷ್ಟು ವಿಕಿರಣ ತಪ್ಪಿಸಿಕೊಂಡು ಪರಿಸರವನ್ನು ಸೇರಿದರೆ ಅದು ನಮ್ಮ ಆಹಾರದ ಸರಪಳಿಯೊಂದಿಗೆ ಸೇರಿಕೊಂಡು ನೀರು, ತರಕಾರಿ, ಪಶು, ಮೀನು ಮತ್ತು ವ್ಯವಸಾಯೋತ್ಪನ್ನಗಳನ್ನು ಕಲುಷಿತಗೊಳಿಸುತ್ತದೆ. ಈ ವಿದಳನ ಪ್ರಕ್ರಿಯೆಯಲ್ಲಿ ಉತ್ಪತ್ತಿಯಾಗುವ ರೇಡಿಯೋ ಐಸೋಟೋಪುಗಳಾದ ಟ್ರಿಟಿಯಮ್ ಮತ್ತು ಸ್ಟ್ರಾನ್‌ಷಿಯಮ್‌ಗಳು 12 ವರುಷಗಳಿಂದ 53 ದಿನಗಳವರೆಗೆ ತಮ್ಮ ಪ್ರಭಾವವನ್ನು ಉಳಿಸಿಕೊಂಡರೆ, ಪ್ಲುಟೋನಿಯಮ್ 24,300 ವರ್ಷಗಳವರೆಗೂ, ಪ್ಲುಟೋನಿಯಮ್-242 ಸುಮಾರು 3,79,000 ವರ್ಷಗಳವರೆಗೂ ತನ್ನ ಪ್ರಭಾವವನ್ನು ಉಳಿಸಿಕೊಳ್ಳುತ್ತದೆ. ಮಾನವನು ಕೈಗೊಳ್ಳುವ ತಪ್ಪಿನಿಂದಾಗಲಿ, ಹಾನಿಯಿಂದಾಗಲಿ, ಅಥವಾ ತಾಂತ್ರಿಕ ದೋಷದಿಂದಾಗಲಿ, ಒಂದು ಸಾರಿ ಈ ವ್ಯವಸ್ಥೆಗೆ ಧಕ್ಕೆಯೊದಗಿದರೆ ಸಾಕು, ವಿದಳನ ಪ್ರಕ್ರಿಯೆಯನ್ನು ಹಿಂದಿನ ಸ್ಥಿತಿಗೆ ತರುವುದು ಅಸಾಧ್ಯ.

ನಮ್ಮ ಈ ಉದ್ದೇಶಿತ ವಿನ್ಯಾಸದ ಸ್ಥಾವರದಲ್ಲಿ 2-3000 ಸೆಂಟೀಗ್ರೇಡ್ ಉಷ್ಣತೆ ಸದಾ ಇರುತ್ತದೆ. ಇಂಧನ ಕಟ್ಟುಗಳಿಂದ ಉತ್ಪಾದನೆಯಾಗುವ ಈ ಉಷ್ಣತೆಯನ್ನು ಸದಾ ಕಡಿಮೆ ತಾಪದಲ್ಲಿ ಕಾಯ್ದಿಡಲು ಅಪಾರ ಒತ್ತಡದಲ್ಲಿ ನೀರನ್ನು ಅದರ ಸುತ್ತ ಹರಿಯಬಿಡಲಾಗುತ್ತದೆ. ಉಷ್ಣತೆಯ ಮಟ್ಟ 500 ಸೇಂಟೀಗ್ರೇಡಿನಷ್ಟಿರುತ್ತದೆ. ಈ ನೀರಿನ ವರ್ತುಲ ವ್ಯವಸ್ಥೆಗೆ ಬೇಕಾಗುವ ವಿದ್ಯುತ್ತನ್ನು ಬೇರೆ ಮೂಲಗಳಿಂದ ಪಡೆಯಬೇಕು. ಒಂದು ವೇಳೆ ಈ ವಿದ್ಯುತ್ -ಮೂಲ ಕೇವಲ ಒಂದೇ ಒಂದು ಸೆಕೆಂಡ್ ಸ್ತಬ್ಧವಾದರೆ ಆಗ ಇಂಧನದ ಕಟ್ಟಿನ ಉಷ್ಣತೆ ತತ್‌ಕ್ಷಣವೇ ಸಾವಿರಾರು ಡಿಗ್ರಿ ಸೆಂಟೀಗ್ರೇಡುಗಳಿಗೆ ಏರಿ ಇಂಧನ ಇರಿಸಿರುವ ಹೊರ ಆವರಣವನ್ನು ಕರಗಿಸಿ ನೀರಾಗಿಸಿ ಬಿಡುತ್ತದೆ. ಆಗ ಒದಗಬಹುದಾದ ಅಪಾಯ ಊಹೆಗೂ ನಿಲುಕದ್ದು! ಅಕಸ್ಮಾತ್ 'ಸಂಪೂರ್ಣ ಸುರಕ್ಷಿತ' ಅಥವಾ 'ಅಂತರ್ಗತವಾಗಿ ಸುರಕ್ಷಿತ' ಹಾಗೂ 'ಕರಗದೆ ಇರುವಂತಹ' ಸ್ಥಾವರಗಳನ್ನು ನಿರ್ಮಿಸಲು ಸಾಧ್ಯವಾದರೂ ಸ್ಥಾವರವನ್ನು ಬಿಚ್ಚುವಲ್ಲಿ ಹಾಗು ಸಾವಿರಾರು ಟನ್ನುಗಳಷ್ಟು ಅಣುಕಸವನ್ನು ವಿಸರ್ಜಿಸುವಲ್ಲಿ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ಇತ್ತೀಚೆಗೆ ಇಂಗ್ಲಂಡಿನಲ್ಲಿ ನಡೆಸಿದ ವೈಜ್ಞಾನಿಕ ಸಮೀಕ್ಷೆ 5 ವರ್ಷಗಳ ಕಾಲ ಅಣು ಸ್ಥಾವರವನ್ನು ಉರಿಸದೆ ಹಾಗೆ ಬಿಡಬೇಕು; ಮತ್ತೆ 15 ವರ್ಷಗಳ ಕಾಲ ಅದನ್ನು ಎಂಭತ್ತು ಕೋಟಿ ಪೌಂಡುಗಳ ವೆಚ್ಚದಲ್ಲಿ ಬಿಚ್ಚಬೇಕು. ಹೀಗೆ ಮಾಡುವ ಬದಲು ಅಣುಸ್ಥಾವರವನ್ನು ಬಿಚ್ಚುವ ಮುಂಚೆ ಕಡೇ ಪಕ್ಷ 130 ವರ್ಷಗಳ ಕಾಲ ಅದನ್ನು ಅಲ್ಲೇ ಗೋರಿ ತೋಡಿ ಹೂತಿಟ್ಟು ಅದರ ಮೂಲ ವಸ್ತುಗಳು ತಣ್ಣಗಾಗುವವರೆಗೆ ಸಾಕಷ್ಟು ಕಾಲ ಬಿಡಬೇಕು ಎನ್ನುತ್ತದೆ. ನಮ್ಮ ಅಣುಶಕ್ತಿ

ಇಲಾಖೆ ತಮ್ಮ ತಾಂತ್ರಿಕ ಸಾಮರ್ಥ್ಯವನ್ನು ಈ ನಿಟ್ಟಿನಲ್ಲಿ ಈವರೆಗೆ ವ್ಯಕ್ತಪಡಿಸಿಲ್ಲ. ಅಣುಕಸ ನಿವಾರಣೆಗೆ ಆರ್ಥಿಕ ಮತ್ತು ವ್ಯವಸ್ಥಿತ ಕ್ರಮಗಳನ್ನು ಕೈಗೊಂಡಿಲ್ಲ. ಈ ಹಿನ್ನೆಲೆಯಲ್ಲಿ ಕೈಗಾ ಮತ್ತು ಭಾರಿ ಕಂಪನ ವಲಯವಾದ ಗಂಗಾ ನದಿಯ ನರೋರಾ ಬಗ್ಗೆ ಟೀಕೆಗಳು ಬಂದಿವೆ. ಎಲ್ಲ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆಯೆಂದೂ ಮತ್ತು ಇಂಧನದ ಪಾತ್ರೆಯು ಭೂಕಂಪನದ ಧಕ್ಕೆಯನ್ನು ತಡೆದುಕೊಳ್ಳಬಲ್ಲದೆಂದೂ ಅಣು ಇಲಾಖೆಯ ಅಧಿಕಾರಿಗಳು ವಾದಿಸಿದ ಮಾತ್ರಕ್ಕೆ ಪರಿಸರದ ಬಗ್ಗೆ ಮೂಡುವ ಆಕ್ಷೇಪಗಳಿಗೆ ಸಮಾಧಾನಕರ ಉತ್ತರ ದೊರೆತಂತಾಗುವುದಿಲ್ಲ.

ಅಣುಸ್ಥಾವರಗಳು ಹೀರೋಶಿಮಾ ಬಾಂಬಿನಂತೆ ಆಸ್ಫೋಟಿಸುವುದಿಲ್ಲ. ಆದರೆ ಅದು ಕರಗಿ ನೀರಾಗಿ ಅಂತರ್ಜಲವನ್ನು ಸೇರಿದರೆ ಅಪಾಯ ಕಟ್ಟಿಟ್ಟ ಬುತ್ತಿ. ಯುರೇನಿಯಮ್ಮಿನ ಇಂಧನದ ಪಾತ್ರೆ ಎಷ್ಟು ದೀರ್ಘಕಾಲ 3000 ಡಿಗ್ರಿ ತಾಪವನ್ನು ತಡೆಹಿಡಿದುಕೊಳ್ಳಬಲ್ಲದೆಂದು ಊಹಿಸುವುದು ಅಸಾಧ್ಯವೆ. ಸೋವಿಯತ್ ತಜ್ಞ ಡಾ. ಎ.ಎಮ್.ಪೆಟ್ರೋಯಾಂಟ್ ''ಅಣು ವಿಜ್ಞಾನದ ಸಮಸ್ಯೆಗಳು ಮತ್ತು ತಂತ್ರಜ್ಞಾನ'' ಎಂಬ ಪುಸ್ತಕದಲ್ಲಿ ಚರ್ನೋಬಿಲ್‌ನ ಸ್ಥಾವರವನ್ನು ಕುರಿತು, ''ತಾಂತ್ರಿಕ ಜಗತ್ತಿನಲ್ಲೇ ಅತ್ಯಂತ ಸುರಕ್ಷಿತವಾದ ಸ್ಥಾವರ'' ಎಂದು ಬಣ್ಣಿಸಿದ್ದಾರೆ. ಆದರೂ ಅದು ಕೈಕೊಟ್ಟಿತು. 21ನೇ ಶತಮಾನದಲ್ಲಿ ಪರಮಾಣು ಶಕ್ತಿಯು ಬದಲಿ ಶಕ್ತಿಯಾಗಿ ಉಳಿಯಬಲ್ಲದೆ? ಎಂಬ ಬಗ್ಗೆ ಭಾರಿ ಸಂದೇಹಗಳು ಮೂಡತೊಡಗಿವೆ. 2000ನೇ ಇಸವಿಯ ವೇಳೆಗೆ ಬದಲಿ ಶಕ್ತಿಮೂಲದ ಅನ್ವೇಷಣೆಗೆ ಜಪಾನ್ ಮತ್ತು ಸಂಯುಕ್ತ ಸಂಸ್ಥಾನಗಳು 10 ಬಿಲಿಯನ್ ಡಾಲರಿಗೂ ಹೆಚ್ಚು ಹಣವನ್ನು ಸಂಶೋಧನೆ ಮತ್ತು ಅಭಿವೃದ್ಧಿಯಲ್ಲಿ ತೊಡಗಿಸಿವೆ. ಪಶ್ಚಿಮ ಜರ್ಮನಿಯ ವಿಜ್ಞಾನಿಗಳು ಸೌರಶಕ್ತಿಯಿಂದ ಜಲಜನಕವನ್ನು ಉತ್ಪಾದಿಸುವ ಸಂಶೋಧನೆಯಲ್ಲಿ ನಿರತರಾಗಿದ್ದಾರೆ. ಅನೇಕ ಯುರೋಪಿಯನ್ ರಾಷ್ಟ್ರಗಳು ಅಣುಶಕ್ತಿಯನ್ನು ಅಳಿಸಿಹಾಕಲು ಆಲೋಚಿಸುತ್ತಿದ್ದು ಈಗ ಹೊಸ ಸ್ಥಾವರಗಳಿಗಾಗಿ ಬೇಡಿಕೆಯನ್ನು ಸಲ್ಲಿಸಿಲ್ಲ. ಶೇಕಡ 70 ರಷ್ಟು ಯುರೋಪಿಯನ್ನರು ಅಣುಶಕ್ತಿಯನ್ನು ವಿರೋಧಿಸುತ್ತಿದ್ದಾರೆ. ಇತ್ತೀಚಿಗಿನ ಅಭಿಪ್ರಾಯದಂತೆ ಅಮೇರಿಕದಲ್ಲಿ ಶೇಕಡ 68 ರಷ್ಟು ಮಂದಿ ಅಣುಶಕ್ತಿಯನ್ನು ವಿರೋಧಿಸುತ್ತಿದ್ದಾರೆ. ಯುರೋಪಿನ ಬಹುತೇಕ ಎಲ್ಲ ಸಮಾಜವಾದಿ ಕಮ್ಯುನಿಸ್ ಪಕ್ಷಗಳು ಅಣುಶಕ್ತಿಯನ್ನು ತಿರಸ್ಕರಿಸಲು ತೀರ್ಮಾನಿಸಿವೆ.

## ರಾಕ್ಷಸೀ ಸ್ವರೂಪ

ಮಾನವನ ಅತಿ ಪುರಾತನ ನಾಗರಿಕತೆ, ಈಜಿಪ್ಟಿನಲ್ಲಿ ದೊರೆತಿದ್ದು, ಅದು 5000 ವರ್ಷಗಳಷ್ಟು ಮಾತ್ರ ಹಳೆಯದೆಂದು ಗುರುತಿಸಲಾಗಿದೆ. ಆದರೆ ಪರಮಾಣು ಕಸ 25,000 ವರ್ಷಗಳವರೆಗೂ ತನ್ನ ದೈತ್ಯ ಶಕ್ತಿಯನ್ನು ಪ್ರದರ್ಶಿಸಬಲ್ಲದು. ಅಣುಕಸವನ್ನು ಹೂಳಿದರೂ 20 ಸಾವಿರ ವರ್ಷ ಅದರ ದೈತ್ಯ ಶಕ್ತಿಯನ್ನು ಉಡುಗಿಸುವ ವಿನ್ಯಾಸವನ್ನು ಹೇಗೆ ರಚಿಸುವುದು ಎನ್ನುವುದೇ ನಮ್ಮ ವಿಜ್ಞಾನಿಗಳ ಸಮಸ್ಯೆ. ಅಮೇರಿಕ ಸರಕಾರದ ಪರವಾಗಿ, ಈಜಿಪ್ಟಿನ ಪಿರಮಿಡ್ಡು, ಚೈನಾ ದೇಶದ ಬೃಹತ್ ಗೋಡೆಗಳ ಬಗೆಗೆ ಅಧ್ಯಯನ ಕೈಗೊಂಡ ಒಂದು ಸಂಸ್ಥೆ ತಾನು ಸಲ್ಲಿಸಿದ ವರದಿಯಲ್ಲಿ ಅಣು ಕಸವನ್ನು ಹೂಳುವ ಗೋರಿಯ ವಿನ್ಯಾಸ ಕುರಿತು ಈ ರೀತಿ ಹೇಳುತ್ತದೆ: ''7 ಮೀಟರ್ ಎತ್ತರದ ಪ್ರತಿಯೊಂದು 25 ಟನ್ ತೂಗುವ ಬೃಹತ್ ಗಾತ್ರದ 25 ಏಕಶಿಲಾ ಗ್ರಾನೈಟ್‌ಗಳನ್ನು ಹೊರಕವಚವಾಗಿ ಬಳಸಬೇಕು. ಮಧ್ಯದಲ್ಲಿ ಅಣುಕಸ ಹೂಳಲು 200 ಮೀಟರ್ ವಿಸ್ತೀರ್ಣದ

ಎತ್ತರದ ಜಗಲಿಯ ಮೇಲೆ ಕೇಂದ್ರದಲ್ಲಿ ಏಕಶಿಲೆ ಇರಬೇಕು. ಕೇಂದ್ರದ ಮೂರು ಶಿಲಾ ಕವಚಗಳು ಪ್ರತಿಯೊಂದು 200 ಟನ್‌ನಷ್ಟು ತೂಗಬೇಕು. ಹಾಗೂ ಪ್ರತಿಯೊಂದನ್ನು ಒಂದಕ್ಕೊಂದಕ್ಕೆ ಆಸರೆಯಾಗಿ ನಿಲ್ಲಿಸಬೇಕು. ಇಂತಹ ಬೃಹತ್ ಗಾತ್ರದ ವಿನ್ಯಾಸವನ್ನು ನಾಶಮಾಡಲು ಮಾನವನು ಉದ್ದೇಶಪೂರ್ವಕವಾಗಿ ತನ್ನೆಲ್ಲ ಶಕ್ತಿಯನ್ನು ಬಳಸಬೇಕು ಅಥವಾ ಹೊಸ ಹಿಮ ವರ್ಷ ಸುರಿದು ನಾಶವಾಗಬೇಕಷ್ಟೆ.''

ನಾನು ಅಂತಾರಾಷ್ಟ್ರೀಯ ಅಣುಶಕ್ತಿ ನಿಯೋಗ (IAEA), ಯುನೈಟೆಡ್ ಕಿಂಗ್‌ಡಮ್‌ನ ಆಟಮ್ (ATOM) ನಿಯೋಗಗಳ ಅಧಿಕೃತ ದಾಖಲೆಗಳನ್ನೂ ಅಮೇರಿಕನ್ನರ ದಾಖಲೆ-ಗಳನ್ನೂ ಸಾಕಷ್ಟು ತಿರುವಿ ಹಾಕಿರುವೆ. ನಮ್ಮ ಈ ಅಣುಶಕ್ತಿ ಪಂಡಿತರು ಸರ್ವೇಸಾಮಾನ್ಯವಾಗಿ ಹಾಡುವ ಮಾಮೂಲಿ ರಾಗ ''ಅಣುಶಕ್ತಿ ಸುರಕ್ಷಿತ'' ಎನ್ನುವುದು ಎಲ್ಲೂ ನನ್ನ ಕಣ್ಣಿಗೆ ಬೀಳಲಿಲ್ಲ. ಆದ್ದರಿಂದ ನಮ್ಮ ಅಣುಶಕ್ತಿ ಪಂಡಿತರಿಗೆ ಹೇಳುವುದಿಷ್ಟೇ: ತಮ್ಮ ಈ 'ಸುರಕ್ಷಿತ' ಎಂಬ ಹೇಳಿಕೆಯನ್ನು ಮೊದಲು ಅಂತಾರಾಷ್ಟ್ರೀಯ ಅಣುಶಕ್ತಿ ಆಯೋಗದಿಂದ ಅನುಮೋದನೆಗೊಳಿಸಿಕೊಳ್ಳಿ ಇಲ್ಲವೆ ಈ ದೇಶದ ಜನರನ್ನು ಹಾಗೂ ಸಂಪತ್ತನ್ನು ಅಡ್ಡದಾರಿಗೆಳೆಯುವುದನ್ನು ನಿಲ್ಲಿಸಿ.''

ಅಣುಶಕ್ತಿಯನ್ನು ಟೀಕೆ ಮಾಡುವ ನಾವು ನಮ್ಮ ವಾದದಲ್ಲಿ ತಪ್ಪಿಲ್ಲವೆಂದು ಹೇಳುವುದಿಲ್ಲ. ಆದರೆ ಮಾನವ ಕುಲಕ್ಕೆ ವಿಶ್ವಾಸಾರ್ಹವಲ್ಲದ ವಿಷಯದ ವಿರುದ್ಧ ನಾವು ಹೋರಾಡುತ್ತಿದ್ದೇವೆ. ಆದರೆ ನಮ್ಮ ವಿಜ್ಞಾನಿಗಳು ಮತ್ತು ಅಣುಶಕ್ತಿ ಚಟುವಟಿಕೆಗಳು ಮಾನವನಿಗೆ ವಿಶ್ವಾಸಾರ್ಹವಲ್ಲದ ವಿಷಯದೊಂದಿಗೆ ವ್ಯವಹರಿಸುತ್ತಿವೆ.

ನಮ್ಮ ತಾಂತ್ರಿಕ ಜ್ಞಾನದಲ್ಲಿ ನಂಬಿಕೆಯಿಡಿ ಎಂದು ನೀವು ನಮ್ಮನ್ನು ಕೇಳುತ್ತಿದ್ದೀರಿ. ಆದರೆ ನಿಮ್ಮ 'ಪೂರ್ಣಜ್ಞಾನ'ಕ್ಕೆ ಯಾವುದೇ ಆಧಾರವನ್ನು ತೋರಿಸುತ್ತಿಲ್ಲ. ಅಣುಶಕ್ತಿ ಇಲಾಖೆ ಸ್ವಾಯತ್ತತೆಯನ್ನು ಹಾಗೂ ಸಂಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದು ಅದಂತೂ ಒಂದು ಮಿನಿ ಸರಕಾರದಂತಿದೆ. ಜೊತೆಗೆ ಈ ರಾಷ್ಟ್ರ ನಿಮ್ಮನ್ನೇನು ಜನತೆಗೆ ಹೊಣೆಗಾರರನ್ನಾಗಿ ಮಾಡುವುದಿಲ್ಲ. ಕೈಗಾ, ಕಕ್ರಪಾರಾ ಹಾಗೂ ನರೋರಾದಿಂದ ಬರುವ ನಿಮ್ಮ 'ಅಗ್ಗದ ವಿದ್ಯುತ್'ಗಾಗಿ ನಾವು ಮೌಲ್ಯ ಕಟ್ಟಲಾಗದ ಬೆಲೆಯನ್ನು ತೆರಲು ಸಿದ್ಧರಿಲ್ಲ. ಚರ್ನೋಬಿಲ್ ದುರಂತವನ್ನು ಚೆನ್ನಾಗಿ ಅರಿತಿರುವ ಕರ್ನಾಟಕದ ಜನತೆ ಅಣುಶಕ್ತಿ ಸ್ಥಾವರಗಳ ಪರ ತಮ್ಮ ಮತ ನೀಡಲು ಸಿದ್ಧರಿಲ್ಲವೆಂದು ನಾವು ಭಾವಿಸಿದ್ದೇವೆ.

*(ದಿನಾಂಕ 10-11 ಡಿಸೆಂಬರ್ 1988 ರಂದು ಭಾರತೀಯ ವಿಜ್ಞಾನ ಸಂಸ್ಥೆಯ ಆವರಣದಲ್ಲಿ ನಡೆದ ರಾಷ್ಟ್ರೀಯ ಚರ್ಚಾಗಾರದಲ್ಲಿ ನವದೆಹಲಿಯ ಜವಾಹರಲಾಲ ನೆಹರೂ ವಿಶ್ವವಿದ್ಯಾಲಯದ ಶ್ರೀ ಧೀರೇಂದ್ರ ಶರ್ಮಾರು, ಮಾಡಿದ ಭಾಷಣದ ಭಾವಾನುವಾದ.)*

## ಪರ

## ರಾಜ್ಯಕ್ಕೆ ಪರಮಾಣು ಶಕ್ತಿಯ ಅಗತ್ಯವನ್ನು ಕುರಿತಂತೆ

ಪರಮಾಣುಶಕ್ತಿಗೆ ಮೂರು ದಶಕಗಳಿಗಿಂತ ಹೆಚ್ಚು ಕಾಲದ ಸುರಕ್ಷತಾ ದಾಖಲೆಯಿದೆ. 1979ರ ಮಾರ್ಚ್‌ನಲ್ಲಿ ನಡೆದ ಟಿಎಂಐ-2 ಅಪಘಾತ ಮತ್ತು ಏಪ್ರಿಲ್ 1986ರ ಚರ್ನೋಬಿಲ್ ದುರಂತ

ಗಳು ಸಾರ್ವಜನಿಕರ ಮನದಲ್ಲಿ ಅಣುಶಕ್ತಿಯ ಬಗ್ಗೆ ಶಂಕೆಯನ್ನುಂಟುಮಾಡಿವೆ. ಈ ಭೀತಿಯನ್ನು ನಿವಾರಿಸುವ ಕರ್ತವ್ಯ ಪರಮಾಣು ವಿಜ್ಞಾನಿಗಳದ್ದಾಗಿದೆ. ಈ ನಿಟ್ಟಿನಲ್ಲಿ ಪರಮಾಣು ಕುರಿತಂತೆ ಎಲ್ಲ ಅಭಿಪ್ರಾಯಗಳನ್ನು ಅರಿತುಕೊಳ್ಳಲು-ವಿಶೇಷವಾಗಿ ಕೈಗಾ ಬಗ್ಗೆ ಅರಿಯಲು-ಕರ್ನಾಟಕ ಸರಕಾರ ಈ ವಿಚಾರ ಸಂಕಿರಣವನ್ನು ಏರ್ಪಡಿಸಿದೆ.

ನಲವತ್ತು ವರ್ಷಗಳಿಗೂ ಹಿಂದೆ ಪ್ರಾರಂಭಗೊಂಡ ಪರಮಾಣು ತಂತ್ರಜ್ಞಾನ ಪ್ರಾರಂಭದಿಂದಲೂ ಬಹು ಪ್ರಯೋಜನಕಾರಿಯಾಗಿ ಕಂಡುಬಂದು ಭವಿಷ್ಯತ್ತಿನ ವರದಾನವೆನಿಸಿದೆ. ಇಂದು 26 ದೇಶಗಳ 417 ಅಣುಶಕ್ತಿ ಸ್ಥಾವರಗಳಿಂದ ಸುಮಾರು 3 ಲಕ್ಷ ಮೆಗಾವ್ಯಾಟಿನಷ್ಟು ವಿದ್ಯುತ್ ಉತ್ಪಾದನೆಯಾಗುತ್ತಿದೆ. ಇದು 2005ನೇ ಇಸವಿ ವೇಳೆಗೆ 5 ಲಕ್ಷ ಮೆಗಾವ್ಯಾಟಿಗೆ ಹೆಚ್ಚುವ ಸಂಭವವಿದೆ. ಇತರ ಕೈಗಾರಿಕಾ ಅಭಿವೃದ್ಧಿ ರಾಷ್ಟ್ರಗಳ ಜಾಡಿನಲ್ಲಿಯೇ ಪರಮಾಣು ತಂತ್ರಜ್ಞಾನದ ವಿಧಾನಗಳೆನಿಸಿದ ಗಣಿ ಕೆಲಸ, ಯುರೇನಿಯಂ ಅದಿರು ಅರೆಯುವುದು ಅಥವಾ ಶುದ್ಧೀಕರಿಸುವುದು, ಅಣು ಸ್ಥಾವರಗಳ ನಿರ್ಮಾಣ ಮತ್ತು ಅದರ ನಿರ್ವಹಣೆ, ಉರಿಸಿದ ಇಂಧನದ ಪುನರ್‌ಶುದ್ಧೀಕರಣ, ಇಂಧನ ಕಸವನ್ನು ಸರಿಯಾಗಿ ಉಪಯೋಗಿಸುವ ವಿಧಾನ ಮತ್ತು ಸ್ಥಾವರಗಳ ಬಳಕೆಯ ನಂತರ ಬಿಚ್ಚಲು ಹೊಂದಿರುವ ಸುರಕ್ಷತಾ ಅನುಕೂಲಗಳು ಮೇಲಾಗಿ 'ಸುರಕ್ಷತೆ'ಯ ವಿಧಾನಗಳನ್ನು ಹೊಂದಿರುವ ಬೆರಳೆಣಿಕೆಯ ರಾಷ್ಟ್ರಗಳಲ್ಲಿ ಭಾರತವೂ ಒಂದಾಗಿದ್ದು ಅದೂ ಸಂಪೂರ್ಣವಾಗಿ ತನ್ನ ಕಾಲ ಮೇಲೆ ನಿಂತು ಅಣುಕಸವನ್ನು ನಿವಾರಿಸುವ ಶಕ್ತಿಯನ್ನು ಪಡೆದಿದೆ.

## ಕರ್ನಾಟಕದಲ್ಲಿ ವಿದ್ಯುಚ್ಛಕ್ತಿ

ಕರ್ನಾಟಕವು ಕೈಗಾರಿಕಾ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದ ರಾಜ್ಯ. 1902ರಲ್ಲಿ ಶಿವನ ಸಮುದ್ರದ ಬಳಿ ಸ್ಥಾಪನೆಯಾದ ಜಲವಿದ್ಯುತ್‌ಕೇಂದ್ರ, ಆನಂತರ 1952ರಲ್ಲಿ ಜೋಗ್ ಬಳಿ ಸ್ಥಾಪನೆಯಾದ ಮಹಾತ್ಮಾಗಾಂಧಿ ಜಲವಿದ್ಯುತ್ ಕೇಂದ್ರಗಳಿಂದ ಯಥೇಚ್ಛವಾಗಿ ಉತ್ಪಾದನೆಯಾದ ವಿದ್ಯುತ್ ಅನ್ನು ಬಳಸಿಕೊಳ್ಳಲು ಕೈಗಾರಿಕೆಗಳನ್ನು ರಾಜ್ಯದಲ್ಲಿ ಸ್ಥಾಪಿಸಬೇಕೆನ್ನುವ ಅಗತ್ಯ ಕಂಡು ಬಂದಿತು. ಈ ಹಿನ್ನೆಲೆಯಲ್ಲಿ ಭದ್ರಾವತಿಯಲ್ಲಿ ವಿದ್ಯುತ್ ಆರ್ಕ್ F (ARC)ಕುಲುಮೆ, ಬೆಳಗಾವಿಯ ಇಂಡಾಲ್, ಬಳ್ಳಾರ್‌ಪುರ್, ಸಂಡೂರ್ ಮ್ಯಾಂಗನೀಸ್ ಕಂಪನಿ ಮುಂತಾದವು ತಲೆ ಎತ್ತಿದವು. ಗ್ರಾಮಾಂತರ ವಿದ್ಯುದೀಕರಣ ಯೋಜನೆ ಬಹಳ ತೀವ್ರಗತಿಯಲ್ಲಿ ಸಾಗಿತು.



ಸರ್ವಗೃಹೋಪಯೋಗಿ ಮನೆಗಳ (ಎ.ಇ.ಹೆಚ್.) ಬೇಡಿಕೆಗಳನ್ನು ಚಕಾರವೆತ್ತದೆ ಪೂರೈಸಲಾಯಿತು. ಈ ಎಲ್ಲ ಕ್ರಮಗಳು ಸಹಜವಾಗೇ ಸೌದೆ ಮತ್ತು ಇದ್ದಿಲ ಮೇಲಿನ ಹೊರೆಯನ್ನು ಗಣನೀಯವಾಗಿ ಇಳಿಸಿದವು. ಇದರಿಂದ ಸ್ವಲ್ಪ ಮಟ್ಟಿಗೆ ಕಾಡಿನ ನಷ್ಟವೂ ಕಡಿಮೆಯಾಯಿತು. ತತ್ಪರಿಣಾಮ ವಿದ್ಯುತ್‌ಚ್ಛಕ್ತಿಯ ಮೇಲೆ ಅಧಿಕ ಹೊರೆ ಬಿದ್ದಿತು. ಇತ್ತೀಚಿನ ವರ್ಷಗಳಲ್ಲಿ ರಾಜ್ಯದಲ್ಲಿ ಮುಂಗಾರು ಕೈಕೊಟ್ಟಿದ್ದರಿಂದ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಒಂದು ದೊಡ್ಡ ಕಂದಕವೇ ಏರ್ಪಟ್ಟಿತು. 1983ರವರೆಗಿನ ಶೇಕಡಾ 50ರಷ್ಟು ವಿದ್ಯುತ್ ಖೋತಾವನ್ನು ವರ್ಷದಲ್ಲಿ 2ರಿಂದ 3 ತಿಂಗಳವರೆಗೆ ವಿಧಿಸಲಾಯಿತು. ಆನಂತರ ಇದೇ ಪರಿಸ್ಥಿತಿ ವರ್ಷಪೂರ್ತಿ ಮುಂದುವರಿದು ಈಗ ವಿದ್ಯುತ್ ಕಡಿತ ಶೇಕಡಾ 60ಕ್ಕೆ ಬಂದಿಳಿದಿದೆ. 1983ರಲ್ಲಿ ವಿದ್ಯುಚ್ಛಕ್ತಿ ಬೇಡಿಕೆ ಕುರಿತಂತೆ ನೇಮಿಸಿದ್ದ ಸಮಿತಿಯ ವರದಿಯಲ್ಲಿ ವಾರ್ಷಿಕ 3000-4000 ಮೆಗಾ ಯುನಿಟ್ಸ್‌ನಷ್ಟು ಕೊರತೆ 7ನೇ ಯೋಜನೆಯಲ್ಲಿ ತಲೆದೋರಬಹುದೆಂದೂ ಈ ಕೊರತೆ 8ನೇ ಯೋಜನೆಯಲ್ಲಿಯೂ ಮುಂದುವರಿಯುವುದೆಂದೂ ತಿಳಿಸುತ್ತದೆ. ಶ್ರೀ ಎಸ್. ಜಿ. ರಾಮಚಂದ್ರರವರ ನೇತೃತ್ವದಲ್ಲಿ ನೇಮಕವಾಗಿದ್ದ ಮತ್ತೊಂದು ಸಮಿತಿಯೂ ವರ್ಷಕ್ಕೆ 500 ಮೆಗಾವ್ಯಾಟಿನಂತೆ 2000 ನೇ ಇಸವಿಯ ವೇಳೆಗೆ 10,000 ಮೆಗಾವ್ಯಾಟ್ ವಿದ್ಯುಚ್ಛಕ್ತಿಯ ಉತ್ಪಾದನೆಗೆ ಕ್ರಮಗಳನ್ನು ಕೈಗೊಳ್ಳಲು ಸೂಚಿಸಿದೆ. ಪ್ರಸಕ್ತದ ಪ್ರಮಾಣ 2530 ಮೆಗಾವ್ಯಾಟ್ ಮಾತ್ರ. 8ನೇ ಯೋಜನೆಯ ಅಂತ್ಯದ ವೇಳೆಗೆ 3325 ಮೆಗಾವ್ಯಾಟ್ ತಲುಪಬಹುದಷ್ಟೆ. ಇದರಲ್ಲಿ 630 ಮೆಗಾವ್ಯಾಟ್ ಶಾಖೋತ್ಪನ್ನ ಕೇಂದ್ರಗಳಿಂದ ಲಭಿಸಬಹುದು. ಕರ್ನಾಟಕದಲ್ಲಿ ಜಲವಿದ್ಯುತ್ತಿಗೆ ಹೆಚ್ಚು ಅವಕಾಶವಿರುವುದು ಪಶ್ಚಿಮ ಘಟ್ಟಗಳಲ್ಲಿ ಮಾತ್ರ. ಇಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆಗಾಗಿ ಅಣೆಕಟ್ಟೆಗಳ ನಿರ್ಮಾಣವು ವಿಶಾಲವಾದ ದಟ್ಟ ಅರಣ್ಯವನ್ನು ಮತ್ತು ಫಲವತ್ತಾದ ಮಣ್ಣನ್ನು ಮುಳುಗಡೆ ಮಾಡಲಿದೆ. ಕರ್ನಾಟಕವು ಕಲ್ಲಿದ್ದಲ ಗಣಿಗಳಿಂದ ಬಹುದೂರದಲ್ಲಿದ್ದು ಅದರ ಸಾಗಾಟವು ಒಂದು ಸಮಸ್ಯೆಯೇ ಆಗಿದೆ. ಜೊತೆಗೆ ಹೆಚ್ಚು ಹೊಗೆ ಉಗುಳುವ ಕಲ್ಲಿದ್ದಲು ಅಪಾರ ವೆಚ್ಚವನ್ನು ಭರಿಸುವುದಾಗಿದ್ದು ಈ ಶಾಖೋತ್ಪನ್ನ ಕೇಂದ್ರಗಳು ಪರಿಸರ ಮಾಲಿನ್ಯದ ಸಮಸ್ಯೆಗಳನ್ನು ತಂದೊಡ್ಡುತ್ತವೆ.

ಅ-ಸಾಂಪ್ರದಾಯಿಕ ಶಕ್ತಿಯ ಮೂಲಗಳೆನಿಸಿದ ಸೌರಶಕ್ತಿ, ಗಾಳಿ, ಸಮುದ್ರದ ಅಲೆ ಹಾಗೂ ಜೈವಿಕ ಶಕ್ತಿ ಕುರಿತಂತೆ ಹೆಚ್ಚು ಮಾತು ಇಂದು ಕೇಳಿ ಬರುತ್ತಿದೆ. ಈ ಎಲ್ಲ ಆಕರಗಳಿಗೂ ತಮ್ಮದೇ ಆದ ಇತಿಮಿತಿ ಇದ್ದು ಅವುಗಳ ಕೊಡುಗೆ ಅಲ್ಪಾಂಶ ಮಾತ್ರ. ದೇಶದ ವಿವಿಧ ಭಾಗಗಳಲ್ಲಿ ಗಾಳಿಯಂತ್ರಗಳನ್ನು ಸ್ಥಾಪಿಸಬೇಕೆಂಬ ಪ್ರಸ್ತಾವನೆಯೂ ಇದೆ. ಅಂತಹದೊಂದು ಯಂತ್ರ ಮಡಿಕೇರಿಯಲ್ಲಿ ಸ್ಥಾಪನೆಗೊಳ್ಳುತ್ತಿದೆ. ಗಾಳಿಯಂತ್ರದಿಂದ ಉತ್ಪಾದನೆಯಾಗುವ ವಿದ್ಯುತ್ತು ಏಕಪ್ರಕಾರವಾಗಿರುವುದಿಲ್ಲ. ಉತ್ಪಾದನೆ ಬಹಳ ಅಲ್ಪ ಪ್ರಮಾಣವಲ್ಲದೆ ಇದಕ್ಕೆ ಸಾಂಪ್ರದಾಯಿಕ ಶಕ್ತಿಯ ಸಹಕಾರ ಬೇಕೇ ಬೇಕು. ಸಮುದ್ರದ ಅಲೆಗಳಿಂದ ಶಕ್ತಿಯ ಗಳಿಕೆ ತುಂಬಾ ಕ್ಲಿಷ್ಟಕರ. ಜೈವಿಕ ಅನಿಲ, ಮತ್ತಿತರ ಮೂಲಗಳ ಕೊಡುಗೆ ಹೆಸರಿಗಷ್ಟೇ. ಪರಮಾಣುಶಕ್ತಿ ಈಗಾಗಲೇ ಈ ನಿಟ್ಟಿನಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿದ್ದು ಕರ್ನಾಟಕ ತನ್ನ ಪಾಲಿನ ವಿದ್ಯುಚ್ಛಕ್ತಿಯನ್ನು ಮದ್ರಾಸಿನ ಪರಮಾಣು ಶಕ್ತಿ ಸ್ಥಾವರದಿಂದ ಪಡೆಯುತ್ತಿದೆ. ಪ್ರಸಕ್ತ ಸನ್ನಿವೇಶದಲ್ಲಿ ಕರ್ನಾಟಕದಲ್ಲಿ ಪರಮಾಣು ವಿದ್ಯುತ್ತಿಗೆ ಮಾತ್ರವೇ ಅವಕಾಶವಿದ್ದು ಇದೊಂದೇ ವಿದ್ಯುಚ್ಛಕ್ತಿಗೆ ಸಮರ್ಥ ಆಕರವೂ ಆಗಿದ್ದು ಪ್ರಸಕ್ತ ಲಭ್ಯವಿರುವ ಜಲವಿದ್ಯುತ್ತಿನನ ಕಣಜದ ಜೊತೆಗೆ ತನ್ನ ಬಹುಪಾಲನ್ನು ಸೇರಿಸಲಿದೆ.

ನಲ್ವತ್ತು ವರುಷಗಳ ಹಿಂದೆ ಅಣುಶಕ್ತಿ ಆಯೋಗದ ಸ್ಥಾಪನೆಯೊಂದಿಗೆ ಭಾರತದಲ್ಲಿ ಪರಮಾಣು ವಿದ್ಯುತ್ತಿನ ತಂತ್ರಜ್ಞಾನವು ಬೇರುಬಿಟ್ಟಿತು. ನಮ್ಮ ದೇಶದಲ್ಲಿ ಹೆಚ್ಚುತ್ತಿರುವ ವಿದ್ಯುತ್ ಬೇಡಿಕೆಗಳನ್ನು ಪೂರೈಸಲು ಅಣುಶಕ್ತಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಲಿದೆ ಎಂದು ಯೋಜನಾ ತಜ್ಞರು ಮನಗಂಡಿದ್ದಾರೆ. 1983ರ ಜುಲೈನಲ್ಲಿ ಮದ್ರಾಸಿನಲ್ಲಿ ಅಣುಶಕ್ತಿ ಕೇಂದ್ರದ ಮೊದಲನೆ ಘಟಕವನ್ನು ದೇಶೀಯ ತಂತ್ರಜ್ಞಾನದ ಆಧಾರದ ಮೇಲೆ ಸ್ಥಾಪಿಸಿದ್ದು ಈ ದಿಕ್ಕಿನಲ್ಲಿ ಒಂದು ಮೈಲಿಗಲ್ಲು. ಎರಡನೇ ಘಟಕ 1985ರ ಅಂತ್ಯದಲ್ಲಿ ಕಾರ್ಯ ಮಗ್ನವಾಯಿತು. ದೇಶದಲ್ಲಿಂದು ಪ್ರತಿಭಾಶಾಲಿ ಮತ್ತು ನುರಿತ ತಜ್ಞರ ಸಮೂಹವೇ ಇದರ ಹಿಂದೆ ಟೊಂಕಕಟ್ಟಿ ನಿಂತಿದೆ. ನಮ್ಮಲ್ಲಿ ಲಭ್ಯವಿರುವ ವಿಪುಲ ಪೂರಕ ಸೌಲಭ್ಯಗಳನ್ನು ಬಳಸಿಕೊಂಡು ಇಂದಿನ 1230 ಮೆಗಾವ್ಯಾಟನಿಂದ 2000 ನೇ ಇಸವಿಯ ವೇಳೆಗೆ 10,000 ಮೆಗಾವ್ಯಾಟ್ ಶಕ್ತಿಯ ಉತ್ಪಾದನೆಗೆ ಜಿಗಿಯಲು ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ಇದು ಕೇವಲ ಶೇಕಡ 10ರ ದರದ ಸಾಧನೆಯಷ್ಟೇ! ಈ 10,000 ಮೆಗಾವ್ಯಾಟಿನ ಉದ್ದೇಶಿತ ಉತ್ಪಾದನೆಯಲ್ಲಿ ಕೈಗಾದಲ್ಲಿ 235 ಮೆಗಾವ್ಯಾಟ್ ಸಾಮರ್ಥ್ಯದ ಎರಡು ಘಟಕಗಳು ಸಹ ಸೇರಿವೆ.

**ಸುರಕ್ಷತೆ**

ಭಾರತದ ಅಣುಸ್ಥಾವರಗಳಲ್ಲಿ ಚರ್ನೋಬಿಲ್ ಮಾದರಿಯ ಅಪಘಾತ ನಡೆದರೆ ಹೇಗೆ ಎಂಬ ಪ್ರಶ್ನೆ ಅನೇಕ ಸಾರಿ ಏಳುತ್ತಿದೆ. ಇದಕ್ಕೆ ನನ್ನ ನಿಖರವಾದ ಉತ್ತರ 'ಇಲ್ಲ' ಎನ್ನುವುದು. ಚರ್ನೋಬಿಲ್ ದುರಂತಕ್ಕೆ ಪ್ರಮುಖ ಕಾರಣ ಅಲ್ಲಿ ಕೆಲಸ ಮಾಡುವವರು ಸುರಕ್ಷತಾ ನಿಯಮಗಳನ್ನು ಉಲ್ಲಂಘಿಸಿದ್ದು, ಜೊತೆಗೆ ಆ ಸ್ಥಾವರವನ್ನು ಸ್ಥಾಪಿಸಿದಾಗಿನಿಂದಲೂ ಅಂತರ್ಗತವಾಗಿ ಅಂಟಿ ಬಂದ ಕೆಲವು ನ್ಯೂನತೆಗಳು. ಮೇಲಾಗಿ ಚರ್ನೋಬಿಲ್ ಸ್ಥಾವರಕ್ಕೂ ಉದ್ದೇಶಿತ ಕೈಗಾ ಸ್ಥಾವರಕ್ಕೂ ಸಾಮ್ಯವಿಲ್ಲ. ಇತ್ತೀಚೆಗೆ ಭಾರತವೇ ಏಕೆ ರಷ್ಯ, ಅಮೇರಿಕ ಸಂಸ್ಥಾನಗಳಲ್ಲಿ ಸ್ಥಾಪಿಸಲಾಗುವ ಸ್ಥಾವರಗಳು ವಿಶಿಷ್ಟವಾಗಿ ಅತ್ಯಂತ ಸಮರ್ಥ ತಂತ್ರಜ್ಞಾನವನ್ನು ಬಳಸಿ ನಿರ್ಮಿಸಲ್ಪಡುವಂತಹವು. ಆ ದೃಷ್ಟಿಯಿಂದ ಅಪಘಾತ ಎಂಬ ಸಂದೇಹಕ್ಕೆ ಎಡೆಯೇ ಇಲ್ಲ. ಸುರಕ್ಷತಾ ಕ್ರಮಗಳು ಪರಮಾಣು ಶಕ್ತಿ ಸ್ಥಾವರಗಳಲ್ಲಿ ನಿರಂತರ ನಡೆಯುವ ಪ್ರಕ್ರಿಯೆ. ಜೊತೆಗೆ ಚರ್ನೋಬಿಲ್‌ನಲ್ಲಿ ನಡೆದ ಅಪಘಾತದಿಂದ ಮಾನವನ ಕಣ್‌ತಪ್ಪಿನ ಕೃತ್ಯ ಸಹ ನಮ್ಮ ಸ್ಥಾವರಗಳಲ್ಲಿ ಮರುಕಳಿಸದಂತೆ ನಿಗಾ ಇಡಲು ಪಾಠ ಕಲಿತಂತಾಗಿದೆ.

**ಅಣುಕಸದ ನಾಶ**

ಅಣುಕಸವು ಘನ ಅಥವಾ ದ್ರವ ಅಥವಾ ಅನಿಲ ರೂಪದಲ್ಲಿ ಇರಬಹುದು. ಮೂಲತಃ ಅಣುಕಸವನ್ನು ಸಾಧ್ಯವಾದಮಟ್ಟಿಗೆ ಘನಸ್ಥಿತಿಯಲ್ಲಿ ಶೇಖರಿಸಿಡುವುದೇ ಹೆಚ್ಚು. ಅಣುಕಸವನ್ನು ವಾತಾವರಣಕ್ಕೆ ಹೊರಚೆಲ್ಲುವ ಸಂದರ್ಭ ಬಂದಾಗ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಂಗೀಕರಿಸಿದ ಮೌಲ್ಯಕ್ಕೆ ಅನುಗುಣವಾಗಿ ಅದನ್ನು ಹೊರಬಿಡಲಾಗುತ್ತದೆ. ದ್ರವರೂಪದಲ್ಲಿರುವ ಅಣುಕಸವನ್ನು ವಿಟ್ರಿಫೈಡ್ ಗಾಜಿನ ರೂಪಕ್ಕೆ ಪರಿವರ್ತಿಸಲಾಗುವುದು. ಇದು ಸೋರುವದಾಗಲಿ, ಹತ್ತಿಕೊಂಡು ಉರಿಯುವುದಾಗಲಿ, ಆಸ್ಫೋಟಗೊಳ್ಳುವುದಾಗಲಿ ಆಗುವುದಿಲ್ಲ. ತಾರಾಪುರದಲ್ಲಿ ಈ ಮಾದರಿಯ ಒಂದು ಘಟಕವನ್ನು ಸ್ಥಾಪಿಸಲಾಗಿದೆ. ಅಣುಕಸದ ಪ್ರಮಾಣವು ತುಂಬಾ ಕಡಿಮೆ ಪ್ರಮಾಣದಲ್ಲಿ ಉತ್ಪಾದನೆಯಾಗುವುದರಿಂದ ಅದರ ನಿವಾರಣೆ ಅಂತಹ ತ್ರಾಸದಾಯಕವಾದದ್ದೇನಲ್ಲ. ಉದಾಹರಣೆಗೆ ಒಂದು ಸಾವಿರ ಮೆಗಾವ್ಯಾಟ್ ಶಕ್ತಿಯ ಸ್ಥಾವರದಿಂದ ಒಂದು ವರ್ಷದಲ್ಲಿ ಉತ್ಪಾದನೆಯಾಗುವ ಕಸವನ್ನು ಕೇವಲ ಎರಡು ಘನ ಮೀಟರು ವಿಟ್ರಿಫೈಡ್ ಗಾಜಿನ ರೂಪಕ್ಕೆ

ಸಂಕುಚಿಸಬಹುದು. ಅದೇ ರೀತಿಯಲ್ಲಿ 10,000 ಮೆಗಾವ್ಯಾಟ್ ಅಣುಸ್ಥಾವರವೊಂದು ತನ್ನ ಜೀವಿತಾವಧಿಯಲ್ಲಿ ಹೊರಚೆಲ್ಲುವ ಅಣುಕಸ ಸುಮಾರು 800 ಘನ ಮೀಟರ್ ಅಂದರೆ ಸುಮಾರು 100 ಜನರು ಕೂಡಬಹುದಾದ ಒಂದು ಸಭಾಂಗಣದಷ್ಟಾಗುತ್ತದೆಯಷ್ಟೇ! ಈ ರೀತಿ ಸಂಕುಚಿಸಿ ಶೇಖರಿಸಿದ ಕಸವನ್ನು ಭೂಗರ್ಭದಲ್ಲಿ ಹೂಳುವ ತಂತ್ರಜ್ಞಾನದಲ್ಲೂ ನಾವು ಮುಂದುವರಿದ ರಾಷ್ಟ್ರಗಳಿಗಿಂತ ಯಾವ ವಿಧದಲ್ಲೂ ಹಿಂದೆ ಬಿದ್ದಿಲ್ಲ. ಸಂಕುಚಿಸಿದ ಫ್ಲೋರೈಡ್ ಗಾಜಿನ ರೂಪದ ಈ ಕಸವನ್ನು ಭೂಗರ್ಭದಲ್ಲಿ ಹೂಳಿದರೆ ಅದು ಇಪ್ಪತ್ತು ಲಕ್ಷ ವರುಷಗಳವರೆಗೆ ಅಲ್ಲೇ ಸುರಕ್ಷಿತವಾಗಿರುತ್ತದೆ!

## ಅಣುವಿದ್ಯುತ್ತಿನ ಬೆಲೆ, ಇತ್ಯಾದಿ

1969ರಲ್ಲಿ ತಾರಾಪುರದಲ್ಲಿ ಸ್ಥಾಪನೆಯಾದ ಅಣುವಿದ್ಯುತ್ತು ಶಾಖೋತ್ಪನ್ನ ವಿದ್ಯುಚ್ಛಕ್ತಿಗೆ ಪ್ರತಿಸ್ಪರ್ಧಿಯಾಗಿ ನಿಂತಿದೆ. ಭಾರತದ ಪಶ್ಚಿಮ ಭಾಗಕ್ಕೆ ತೀರಾ ಅಗ್ಗದ ದರದಲ್ಲಿ ತಾರಾಪುರ ಸ್ಥಾವರದಿಂದ ವಿದ್ಯುತ್ತನ್ನು ಒದಗಿಸಲಾಗುತ್ತಿದೆ. ಅಂತೆಯೇ ಮದ್ರಾಸ್ ಮತ್ತು ರಾಜಸ್ಥಾನ್ ಸ್ಥಾವರಗಳಿಂದ ಉತ್ಪಾದನೆಯಾಗುವ ವಿದ್ಯುತ್ತನ್ನು ಸ್ಪರ್ಧಾತ್ಮಕ ಬೆಲೆಗೆ ವಿತರಿಸಲಾಗುತ್ತಿದೆ. 1984ರಲ್ಲಿ ಪರಮಾಣು ವಿದ್ಯುತ್ ಮತ್ತು ಶಾಖೋತ್ಪನ್ನ ಘಟಕಗಳಿಂದ ಪಡೆದ ವಿದ್ಯುತ್ ನಡುವಿನ ಬೆಲೆ, ಖರ್ಚು ವೆಚ್ಚಕ್ಕೆ ಸಂಬಂಧಿಸಿದಂತೆ ಅರಿಯಲು ನೇಮಿಸಿದ ಸಮಿತಿಯ ಹೇಳಿಕೆಯಿಂದ ಪರಮಾಣು ವಿದ್ಯುತ್ತಿನ ಬೆಲೆಯು ಶಾಖೋತ್ಪನ್ನ ಮೂಲಗಳಿಂದ ಗಳಿಸಿದ ವಿದ್ಯುತ್ತಿನ ಬೆಲೆಗಿಂತ ಅಗ್ಗವೆಂದು ತಿಳಿದುಬಂದಿದೆ. ಎರಡನೆಯದಾಗಿ ಶಾಖೋತ್ಪನ್ನ ಘಟಕದಿಂದ ಪಡೆದ ವಿದ್ಯುತ್ತು ಪರಮಾಣು ವಿದ್ಯುತ್ತಿಗಿಂತ ತುಂಬಾ ದುಬಾರಿಯೆ.

## ಇಂದಿನ ಪರಮಾಣು ಶಕ್ತಿ

ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಅಣುಸ್ಥಾವರಗಳನ್ನು ಮೊಟಕುಗೊಳಿಸುವ ಪ್ರವೃತ್ತಿಯನ್ನು ಸಮೂಹ ಮಾಧ್ಯಮಗಳು ವರದಿ ಮಾಡುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಸ್ವೀಡನ್, ಜರ್ಮನಿ ಹಾಗೂ ಅಮೇರಿಕದಂತಹ ರಾಷ್ಟ್ರಗಳಲ್ಲಿ ಪರಮಾಣು ಶಕ್ತಿಯ ವೃದ್ಧಿಯ ಪ್ರಮಾಣ ಗಮನಾರ್ಹವಾಗಿ ಕಡಿಮೆಯಾಗಿದೆ ಇಲ್ಲವೆ ಸ್ಥಗಿತಗೊಂಡಿದೆ. ಫ್ರಾನ್ಸ್, ಜಪಾನ್, ಬೆಲ್ಜಿಯಮ್, ಇಂಗ್ಲಂಡ್, ಕೆನಡಾ, ರಶಿಯ ಮುಂತಾದ ರಾಷ್ಟ್ರಗಳು ಪರಮಾಣು ಶಕ್ತಿಯ ಮೇಲೆ ಹೆಚ್ಚು ಅವಲಂಬಿತವಾಗಿವೆ. ಉದಾಹರಣೆಗೆ ಫ್ರಾನ್ಸ್, ಜಪಾನ್ ಹಾಗೂ ರಶಿಯದಲ್ಲಿ ಪ್ರಸಕ್ತ ಪರಮಾಣು ಶಕ್ತಿಯ ಬಳಕೆಯ ಪ್ರಮಾಣ ಕ್ರಮವಾಗಿ ಶೇಕಡಾ 70, 27, 15 ರಷ್ಟಿವೆ. ಜೊತೆಗೆ ಈ ದೇಶಗಳು ಮುಂಬರುವ ವರ್ಷಗಳಲ್ಲಿ ಮೇಲಿನ ಈ ಪ್ರಮಾಣವನ್ನು ಹೆಚ್ಚಿಸಿ-ಕೊಳ್ಳಲು ನಿರ್ಧರಿಸಿವೆ. ಈ ಮಧ್ಯೆ ಸ್ವೀಡನ್ ತನ್ನ ಮೊದಲಿನ ಅಭಿಪ್ರಾಯವನ್ನು ಪುನಃ ಬದಲಾಯಿಸಿದೆ. ಆರ್ಥಿಕ ದುಃಸ್ಥಿತಿಯ ಪರಿಣಾಮದಿಂದ ಅದು ಮತ್ತೆ ಪರಮಾಣು ಶಕ್ತಿಗೆ ಮೊರೆ ಹೋಗಲು ನಿರ್ಧರಿಸಿದ. ಅಮೇರಿಕದ ಪರಿಸ್ಥಿತಿಯೇ ಬೇರೆ. ಈ ರಾಷ್ಟ್ರ ಈಗಾಗಲೇ 90,000 ಮೆಗಾವ್ಯಾಟ್ ಅಣುಶಕ್ತಿಯನ್ನು ಹೊಂದಿದ್ದು ಇದು ಜಗತ್ತಿನಲ್ಲಿಯೇ ಹೆಚ್ಚು.

ಸಾಂಪ್ರದಾಯಿಕ ಶಕ್ತಿಯ ಮೇಲಿನ ಹೊರೆಯನ್ನು ಕಡಿಮೆ ಮಾಡಬೇಕಾದರೆ ಅಣುಶಕ್ತಿಯಿಂದ ಮಾತ್ರವೇ ಸಾಧ್ಯ. ಕಲ್ಲಿದ್ದಲು ಉರಿಸಿ ವಿದ್ಯುತ್ತನ್ನು ಪಡೆಯುವಾಗ ಮೇಲೇಳುವ ಹೊಗೆಯಿಂದ ಪರಿಸರದ ಮೇಲಾಗುವ ಪರಿಣಾಮವನ್ನು ಗಮನಿಸಿದ ಪರಮಾಣು ವಿರೋಧಿಗಳು ಸಹ ಈಗ ತಮ್ಮ ಅಭಿಪ್ರಾಯವನ್ನು ಬದಲಿಸಿಕೊಂಡಿರುವರು. ಬ್ರಿಟನ್ನಿನ ಟ್ರೇಡ್ ಯೂನಿಯನ್ ತನ್ನ ಅಭಿಪ್ರಾಯದಲ್ಲಿ ಪರಮಾಣು ಶಕ್ತಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಡಬೇಕೆಂದು ತಿಳಿಸಿದೆ. ದಿನೇ

ದಿನೇ ಬೆಳೆಯುತ್ತಿರುವ ಜಗತ್ತಿನ ಬೇಡಿಕೆಗಳನ್ನು ನೀಗಿಸಲು ಪರಮಾಣು ಶಕ್ತಿಯಿಂದ ಮಾತ್ರವೇ ಸಾಧ್ಯವೆಂದು ಅದು ಅಭಿಪ್ರಾಯಪಟ್ಟಿದೆ. ಇದೇ ಟ್ರೇಡ್ ಯೂನಿಯನ್ ಬ್ರಿಟನ್ನಿನಲ್ಲಿ ಪರಮಾಣು ಶಕ್ತಿಯನ್ನು ನಿವಾರಿಸಬೇಕೆನ್ನುವವರ ಕರೆಯನ್ನು ಖಡಾಖಂಡಿತವಾಗಿ ತಿರಸ್ಕರಿಸಿದೆ. ಇವರಿಗೆ ಬೆಂಬಲವಾಗಿ ಸುಮಾರು 90,000 ವಿಜ್ಞಾನಿಗಳು, ತಂತ್ರಜ್ಞರು ಮತ್ತು ಸರಕಾರದ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ತಜ್ಞರು ನಿಂತಿದ್ದಾರೆ.

ಕಲ್ಲಿದ್ದಲು, ಇಂಧನ ಮುಂತಾದ ನೈಸರ್ಗಿಕ ಮೂಲಗಳನ್ನು ವಿದ್ಯುಚ್ಛಕ್ತಿಯ ಉತ್ಪಾದನೆಗೆ ಬಳಸುವುದನ್ನು ಕಡಿಮೆ ಮಾಡಬೇಕು. ಭೂಗರ್ಭದಲ್ಲಿ ಇವುಗಳ ಸಂಗ್ರಹ ಈಗಾಗಲೇ ಮುಗಿಯುತ್ತಾ ಬಂದಿದೆ. ಜೊತೆಗೆ ಕಲ್ಲಿದ್ದಲು ಮತ್ತು ಇಂಧನ ಹೆಚ್ಚಾಗಿ ರಾಸಾಯನಿಕ ಕಾರ್ಖಾನೆಗಳಿಗೆ ಮತ್ತು ಇತರ ಉದ್ದೇಶಗಳಿಗೆ ಅಗತ್ಯವಾಗಿ ಬೇಕಾಗಿದೆ.

2000 ನೇ ಇಸವಿಯ ವೇಳೆಗೆ ಕೈಗಾದಲ್ಲಿ 1400 ಮೆಗಾವ್ಯಾಟ್ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಬಹುದು. ಈ ಬೃಹತ್ ಪ್ರಮಾಣದ ವಿದ್ಯುಚ್ಛಕ್ತಿಯ ಉತ್ಪಾದನೆಯನ್ನು ನಾವು ಸುರಕ್ಷಿತ ವಿಧಾನಗಳಿಂದ ಹಾಗೂ ಪರಿಸರಕ್ಕೆ ಯಾವ ಧಕ್ಕೆಯೂ ಬರದಂತೆ ಸಾಧಿಸಬಹುದೆಂದು ಭರವಸೆ ನೀಡಬಲ್ಲೆ. ಸ್ವಾತಂತ್ರ್ಯ ಪೂರ್ವದಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಮುಂಚೂಣಿಯಲ್ಲಿದ್ದ ಈ ರಾಜ್ಯ ಮುಂದೆ ದೊರೆಯಲಿರುವ ತಂತ್ರಜ್ಞಾನವನ್ನು- ಅಂದರೆ ಪರಮಾಣು ತಂತ್ರಜ್ಞಾನವನ್ನು ಬಳಸಿಕೊಂಡು ಅಭಿವೃದ್ಧಿಯನ್ನು ಗಳಿಸಲಿದೆ ಎಂದು ಕನ್ನಡಾಂಬೆಯ ಮಗನಾಗಿ ನಾನು ಭರವಸೆ ಹೊಂದಿದ್ದೇನೆ.

*(ದಿನಾಂಕ 10-11 ಡಿಸೆಂಬರ್ 1988ರಂದು ಭಾರತೀಯ ವಿಜ್ಞಾನ ಸಂಸ್ಥೆಯ ಆವರಣದಲ್ಲಿ ನಡೆದ ರಾಷ್ಟ್ರೀಯ ಚರ್ಚಾಗಾರದಲ್ಲಿ ಅಣುಶಕ್ತಿ ಆಯೋಗದ ಅಧ್ಯಕ್ಷ ಹಾಗೂ ಕನ್ನಡಿಗ ಶ್ರೀ.ಎಂ.ಆರ್. ಶ್ರೀನಿವಾಸನ್‌ರು ಮಾಡಿದ ಭಾಷಣದ ಭಾವಾನುವಾದ.)*

# ವಿರೋಧ

## ಭಾರತ ಮತ್ತು ಕರ್ನಾಟಕದಲ್ಲಿ ವಿದ್ಯುತ್ತಿಗಾಗಿ ಜೈವಿಕ ವಸ್ತುವಿನ ಆಯ್ಕೆ

**ಕೆಳಗಿನ ಎರಡು ಪ್ರಶ್ನೆಗಳು ಈ ಸಂಕ್ಷಿಪ್ತ ವಿವರಣೆಗೆ ಉತ್ತರವನ್ನು ಹುಡುಕಲು ಅನುವಾಗುತ್ತವೆ:**

**1. ವಿದ್ಯುಚ್ಛಕ್ತಿಯ ಬೇಡಿಕೆಗಳನ್ನು ಪೂರೈಸಿಕೊಳ್ಳುವಲ್ಲಿ ಏತಕ್ಕೆ ಯಾರೊಬ್ಬರೂ ಪರಮಾಣುವಿನ ಆಯ್ಕೆಯನ್ನು ಕೈಬಿಡುತ್ತಾರೆ ಇಲ್ಲವೆ ಮುಂದೂಡುತ್ತಾರೆ?**

**2. ವಿದ್ಯುತ್ ಮತ್ತು ಚಾಲಕಶಕ್ತಿಯ ಉತ್ಪಾದನೆಯಲ್ಲಿ ಜೈವಿಕ ವಸ್ತುವಿನ ಆಯ್ಕೆಯ ಸಾಮರ್ಥ್ಯವೇನು?**

### ವಿದ್ಯುಚ್ಛಕ್ತಿ ಹಾಗೂ ಹಳ್ಳಿಗಳ ಏಳಿಗೆ

ಹಳ್ಳಿಯ ಏಳಿಗೆಯ ವಾಸ್ತವಿಕ ದೃಷ್ಟಿಯ ಹಿನ್ನೆಲೆಯಲ್ಲಿ ಈ ಎರಡು ಪ್ರಶ್ನೆಗಳಿಗೆ ನಾನು ಹೆಚ್ಚು ಒತ್ತು ಕೊಟ್ಟು ವಿಶ್ಲೇಷಿಸಲು ಬಯಸುತ್ತೇನೆ. ಪ್ರಾಯಶ: ಕಳೆದ ಹಲವಾರು ದಶಕಗಳಿಂದ

ಗ್ರಾಮಾಂತರ ಪ್ರದೇಶಗಳನ್ನು ಅಲಕ್ಷಿಸಲಾಗಿದೆ ಎಂದು ಒತ್ತಿ ಹೇಳಬೇಕಾಗಿಲ್ಲ. ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿರುವಂತೆ ಕರ್ನಾಟಕದಲ್ಲಿ ಬಳಕೆಯಾಗುತ್ತಿರುವ ವಿದ್ಯುತ್ತಿನ ಪ್ರಮಾಣ ದಿಂದಲೇ ಇದು ತಿಳಿದುಬರುತ್ತದೆ.

**ಫಲಕ-1**

**1985-86ರ ಸಾಲಿನ ಕರ್ನಾಟಕ ವಿದ್ಯುಚ್ಛಕ್ತಿಯ ವಿತರಣೆ**

| ಬಳಕೆದಾರರು | ಬಳಕೆ ಪ್ರಮಾಣ | ಪಾಲು |
|---|---|---|
| ಲಘು ಕೈಗಾರಿಕೆಗಳು | 668.00 ಮೆಗಾವ್ಯಾಟ್ | |
| ಭಾರಿ ಕೈಗಾರಿಕೆಗಳು | 3413.00 " " | 69.7% ನಗರ |
| ಸರ್ವ ವಿದ್ಯುತ್ ಗೃಹಗಳು | 934.00 " " | |
| ಕೃಷಿ ಪಂಪ್ ಸೆಟ್ಟುಗಳು | 1291.00 ಮೆಗಾವ್ಯಾಟ್ | 16.9% ಗ್ರಾಮಾಂತರ |

ಒಟ್ಟು ಬಳಕೆಯಾದ ವಿದ್ಯುತ್ 7192.00 ಮೆಗಾವ್ಯಾಟ್

ಒಟ್ಟು ಮಾರಾಟವಾದ ವಿದ್ಯುತ್ತಿನಲ್ಲಿ ಗ್ರಾಮಾಂತರ ಭಾಗಗಳು ಪಡೆಯುವ ಪಾಲು ಶೇಕಡಾ 16.9 ಮಾತ್ರವಿದ್ದು ಕರ್ನಾಟಕದ ಶೇಕಡಾ 70 ರಷ್ಟು ಮಂದಿ ಹಳ್ಳಿಗರಿಗೆ ಕೇವಲ ಕೆಲವೇ ಭಾಗ ಹಂಚಿಕೆಯಾಗುತ್ತಿರುವುದು ಇದರಿಂದ ಸ್ಪಷ್ಟವಾಗುತ್ತದೆ. (ದೀಪ ಮತ್ತು ಇತರ ಬಾಬುಗಳಿಗೆ ಬಳಸಲ್ಪಡುವ ಅಲ್ಪಾಂಶ ವಿದ್ಯುತ್ತನ್ನು ಇಲ್ಲಿ ಅಲಕ್ಷಿಸಲಾಗಿದೆ.) ಆರ್ಥಿಕ ಚಟುವಟಿಕೆಗಳಿಗೆ ವಿದ್ಯುಚ್ಛಕ್ತಿ ಚೈತನ್ಯದಾಯಕ. ಆದರೆ ಹಳ್ಳಿಗಳಿಗೆ ಇದರ ಪಾಲು ಹರಿದು ಬರುವುದು ಕೇವಲ ಅತ್ಯಲ್ಪ. ಇದಕ್ಕೆ ಎರಡು ಕಾರಣಗಳನ್ನು ಉದಾಹರಣೆಯಾಗಿ ಕೊಡಬಹುದು. ಪ್ರಾಯೋಗಿಕ ವಾಗಿ ಇಡೀ ವಿದ್ಯುಚ್ಛಕ್ತಿಯೇ ಬೃಹತ್ ಕೇಂದ್ರೀಯ ವ್ಯವಸ್ಥೆಯಲ್ಲಿ ಉತ್ಪಾದನೆಯಾಗುತ್ತಿದೆ. ಹೀಗೆ ಉತ್ಪಾದನೆಯಾಗುವ ವಿದ್ಯುಚ್ಛಕ್ತಿಯನ್ನು ರಾಜಕೀಯಶಕ್ತಿಗೆ ತೀರ ಹತ್ತಿರದಲ್ಲಿರುವ ಕೈಗಾರಿಕೆಗಳು ಹಾಗೂ ನಗರವಾಸಿಗಳು ಕಬಳಿಸುವುದು ತೀರ ಸುಲಭವೆನಿಸುತ್ತದೆ. ಎರಡನೆಯ ದಾಗಿ, ಅಪಾರ ವೆಚ್ಚದ ಜಾಲದ ಮೂಲಕ ಗ್ರಾಮಾಂತರ ಪ್ರದೇಶಗಳಿಗೆ ವಿದ್ಯುಚ್ಛಕ್ತಿಯನ್ನು ಸರಬರಾಜು ಮಾಡುವುದು ಆರ್ಥಿಕವಾಗಿ ಲಾಭದಾಯಕವಲ್ಲ. ಕೃಷಿ ಪಂಪ್ ಸೆಟ್ಟುಗಳು ಕೆಲ ಋತುಗಳಲ್ಲಿ ಮಾತ್ರವೇ ಚಾಲನೆಯಲ್ಲಿರುತ್ತವೆ. ಇಷ್ಟಾದರೂ ಸರಕಾರ ಹಳ್ಳಿಗಳ ಪುರೋಭಿವೃದ್ಧಿಗೆ ಶ್ರಮಿಸುವುದರ ಮೂಲಕ ದೇಶದಾದ್ಯಂತ ವಿದ್ಯುತ್ ವಿಸ್ತರಣಾ ಜಾಲಗಳನ್ನು ಹರಡಿದೆ. ನೀತಿ ಮತ್ತು ಸಹಜತೆಯ ನಡುವಿನ ಈ ದ್ವಿಮುಖತೆಯ ಪರಿಣಾಮವಾಗಿ ತೀರ ಕಡಿಮೆ ಪ್ರಮಾಣದ ವಿದ್ಯುಚ್ಛಕ್ತಿ ಹಳ್ಳಿಗಳಿಗೆ ಹರಿದುಬರುತ್ತಿದೆ.

ಆದ್ದರಿಂದ, ಹಳ್ಳಿಗಳ ಬೇಡಿಕೆಗಳನ್ನು ನೀಗಿಸಿಕೊಳ್ಳಬೇಕಾದರೆ ವಿಕೇಂದ್ರೀಕೃತ ಶಕ್ತಿಯ ಮೂಲದೆಡೆಗೆ ಗಮನ ಹರಿಸಬೇಕೆಂದು ನಿಚ್ಚಳವಾಗಿ ಇದರಿಂದ ವ್ಯಕ್ತವಾಗುತ್ತದೆ. ಬೃಹತ್ ವಿದ್ಯುತ್ ಯೋಜನೆಗಳ ಸ್ಥಾಪನೆಯ ಬದಲಿಗೆ ವಿಕೇಂದ್ರೀಕೃತ ಸಣ್ಣ ಪ್ರಮಾಣದ ಸ್ಥಾವರಗಳಲ್ಲಿ ಹಣ ವಿನಿಯೋಗಿಸುವುದು ಸೂಕ್ತವೆನ್ನುವುದನ್ನು ಇದು ತೋರಿಸುತ್ತದೆ. ಪರಮಾಣುಶಕ್ತಿಯು ಬೃಹತ್ ಕೇಂದ್ರೀಕೃತ ವ್ಯವಸ್ಥೆಯಲ್ಲಿ ಉತ್ಪಾದನೆಯಾಗುವುದರಿಂದ ಹಳ್ಳಿಗಳ ಅಭಿವೃದ್ಧಿಗೆ ಅದು ಯಾವ ಕೊಡುಗೆಯನ್ನೂ ನೀಡಲಾರದು. ಉತ್ತರ ಕನ್ನಡ ಜಿಲ್ಲೆ ಮತ್ತು ಅದರ ಬಹು ಸಂಖ್ಯಾತ ಗ್ರಾಮೀಣ ಜನಸಂಖ್ಯೆ ಕೈಗಾದಿಂದ ಯಾವ ಪ್ರಯೋಜನವನ್ನೂ ಪಡೆಯಲಾರದೆಂದು ಇದರಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

# ಪಂಪು ನಡೆದರೆ ಬೆಳೆ ಸೊಂಪು,
# ಪಂಪು ನಿಂತರೆ ಕಷ್ಟ ಬಂತು



ರೈತನ ಜೀವ ಅವನ ಬೆಳೆ. ಬೆಳೆಯ ಜೀವ ನೀರು. ಬೆಳೆಗೆ ಸಕಾಲದಲ್ಲಿ ನೀರು ದೊರೆಯದಿದ್ದರೆ ಒಳ್ಳೆಯ ಬೀಜ, ಒಳ್ಳೆಯ ಗೊಬ್ಬರ ಹಾಗೂ ಸೊಂಟ ಮುರಿಯುವಂತಹ ದುಡಿಮೆ ಎಲ್ಲವೂ ವ್ಯರ್ಥವಾಗುತ್ತವೆ.

ಬೆಳೆಯುತ್ತಿರುವ ಪೈರಿಗೆ ನೀರಿನ ಅವಶ್ಯಕತೆ ಇರುವಾಗ, ಬಾವಿಯಲ್ಲಿ ನೀರು ಕೂಡ ಇರುವಾಗ ಪಂಪು ಸುಟ್ಟು ಹೋದರೆ, ಮುರಿದುಹೋದರೆ, ಹಾಳಾದರೆ ಇಲ್ಲವೆ ಕದ್ದುಹೋದರೆ—ರೈತನ ಬಾಳು ಗೋಳು.

ಇಂತಹ ಸಂಕಟಕಾಲದಲ್ಲಿ ರೈತನಿಗೆ ಆಧಾರ ನೀಡುವುದಕ್ಕಾಗಿಯೇ ಇದೆ **ನ್ಯೂ ಇಂಡಿಯಾದ ಕೃಷಿ ಪಂಪ್‌ಸೆಟ್ ವಿಮೆ.**
ಪಂಪ್‌ಸೆಟ್‌ನ ವಿಮಾ ಯೋಜನೆಯಲ್ಲಿ ಸಬ್‌ಮರ್ಸಿಬಲ್ ಪಂಪ್‌ಸೆಟ್ ಸಹಿತ ಎಲ್ಲಾ ತರದ ಪಂಪ್‌ಸೆಟ್‌ಗಳ ವಿಮೆ ಮಾಡಲಾಗುತ್ತದೆ.

**ಕೃಷಿ ಪಂಪ್‌ಸೆಟ್ ವಿಮೆಯ ದರ**
ಮೋಟರಿನ ಹಾರ್ಸ್ ಪವರ್ ಪ್ರಕಾರ ವರ್ಷಕ್ಕೆ ಕಡಿಮೆ ಎಂದರೆ 50 ರೂಪಾಯಿ.

ನ್ಯೂ ಇಂಡಿಯಾದ 1000ಕ್ಕಿಂತಲೂ ಹೆಚ್ಚು ಆಫೀಸುಗಳು ದೇಶದಲ್ಲೆಲ್ಲ ಹರಡಿವೆ.

ಹೆಚ್ಚಿನ ವಿವರಗಳಿಗಾಗಿ ನಿಮ್ಮ ಸಮೀಪದ ಆಫೀಸಿಗೆ ಬನ್ನಿರಿ ಇಲ್ಲವೆ ಏಜಂಟರನ್ನು ಕಾಣಿರಿ. ನಿಮ್ಮ ಸೇವೆಗಾಗಿ ದೂರದೂರದ ಹಳ್ಳಿಗಳಲ್ಲಿಯೂ ನ್ಯೂ ಇಂಡಿಯಾದ ಗ್ರಾಮೀಣ ಪ್ರತಿನಿಧಿಗಳಿದ್ದಾರೆ.

ಕೃಷಿ ಪಂಪ್‌ಸೆಟ್ ವಿಮೆಗಾಗಿ

## ನ್ಯೂ ಇಂಡಿಯಾ ಎಶ್ಯುರೆನ್ಸ್







ಜನರಲ್ ಇನ್ಶುರೆನ್ಸ್ ಕಾರ್ಪೊರೇಶನ್ ಆಫ್ ಇಂಡಿಯಾದ ಸಹಾಯಕ ಸಂಸ್ಥೆ

**ಸಂಕಟಕಾಲದಲ್ಲಿ ನಿಮಗೆ ಆಧಾರ**

ಗ್ರಾಮಾಂತರ ಪ್ರದೇಶಗಳ ಅಗತ್ಯಗಳು ತೀರ ತುರ್ತಿನವೆಂದೂ ಇನ್ನು ಹೆಚ್ಚು ದಿನ ಅವುಗಳನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲವೆಂದೂ ನಾವು ಪರಿಗಣಿಸಿದ್ದೇ ಆದರೆ ಅಣುಸ್ಥಾವರ ಗಳನ್ನು ಒಳಗೊಂಡಂತೆ ಎಲ್ಲ ಬೃಹತ್ ವಿದ್ಯುತ್ ಕೇಂದ್ರಗಳನ್ನು ಕೈಬಿಡಬೇಕು ಇಲ್ಲವೆ ಮುಂದೂಡಬೇಕು. ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸಣ್ಣ ಪ್ರಮಾಣದ ವಿಕೇಂದ್ರೀಕೃತ ವಿದ್ಯುತ್ ಕೇಂದ್ರಗಳ ಸ್ಥಾಪನೆಯ ಮೇಲೆ ದೃಷ್ಟಿ ಹರಿಸಬೇಕು. ನಗರ ಹಾಗೂ ಕೈಗಾರಿಕೆಗಳ ಬೇಡಿಕೆಯು ಕೇಂದ್ರೀಕೃತ ವಿದ್ಯುತ್ ಯೋಜನೆಗಳಿಂದ ಸಂಪೂರ್ಣವಾಗಿ ಪೂರೈಸಲ್ಪಡುತ್ತದೆ ಎಂದು ಮನದಟ್ಟು ಮಾಡಿಕೊಳ್ಳಿ. ಜಲ ಮತ್ತು ಶಾಖೋತ್ಪನ್ನಗಳ ಸಾಮರ್ಥ್ಯವನ್ನು ಮೊದಲು ಸಂಪೂರ್ಣವಾಗಿ ಬಳಸಿಕೊಂಡ ನಂತರವೇ ಪರಮಾಣುವಿನ ಆಯ್ಕೆಗೆ ಕೈ ಹಾಕಬೇಕು. ಬೇರೆ ಬೇರೆ ಸ್ಥಳಗಳಿಗೆ ಅಣುಸ್ಥಾವರಗಳನ್ನು ಆಯ್ಕೆ ಮಾಡುವ ಮುನ್ನ ಯಾವುದೇ ಶಂಕೆಗೆ ಆಸ್ಪದ ಕೊಡದಂತೆ ಪರಮಾಣುಶಕ್ತಿಯ ವಿಶ್ವಾಸಾರ್ಹತೆ ಬಗ್ಗೆ ಸ್ವತಂತ್ರ ಸಂಸ್ಥೆಯೊಂದರ ಮೂಲಕ ಪ್ರಸಕ್ತ ಕಾರ್ಯ ನಿರ್ವಹಿಸುತ್ತಿರುವ ಅಣುಸ್ಥಾವರಗಳ ಕ್ಷಮತೆಯನ್ನು ತಿಳಿದುಕೊಳ್ಳಬೇಕು.

**ಜೈವಿಕವಸ್ತು ಹಾಗೂ ವಿದ್ಯುಚ್ಛಕ್ತಿ**

ಒಂದು ದೇಶದ ಸಾಂಪ್ರದಾಯಿಕ ಶಕ್ತಿಯ ಮಾರ್ಗವೆಂದರೆ ಪಳೆಯುಳಿಕೆ ಇಂಧನ, ವಿದ್ಯುತ್ ಚ್ಛಕ್ತಿ ಹಾಗೂ ಉರುವಲು. ವಿದ್ಯುಚ್ಛಕ್ತಿಯ ಬಗೆಗೆ ಪಾಶ್ಚಾತ್ಯರಿಗೆ ಇರುವ ಒಂದು ಸಾಧಾರಣ ಮನೋಭಾವ ಇದು. ಜೈವಿಕ ವಸ್ತುವಿನ ಪ್ರಸ್ತುತತೆಯನ್ನು (ಉರುವಲು/ಕೃಷಿ ಸಂಪನ್ಮೂಲಗ ಳನ್ನು ಹೊರತುಪಡಿಸಿ) ಅವರು ಎಂದೂ ಗಂಭೀರವಾಗಿ ಪರಿಗಣಿಸಿಲ್ಲ. ನಾವು ಈಗ ಬಳಸುತ್ತಿ ರುವ ವಿದ್ಯುತ್ತಿನ ಅಂಕಿ ಅಂಶಗಳ ಕಡೆ ಹರಿಸುವ ಒಂದು ನೋಟ ಈ ವಸ್ತುಸ್ಥಿತಿಯನ್ನು ನಮ್ಮ ಎದುರು ತೆರೆದಿಡುತ್ತದೆ. ವಿದ್ಯುಚ್ಛಕ್ತಿ ಸಲಹಾ ಮಂಡಳಿ ಹಾಗೂ ಹಂಡರ್‌ಸನ್ ವರದಿಯ ಪ್ರಕಾರ ಭಾರತದಲ್ಲಿ ವಿದ್ಯುಚ್ಛಕ್ತಿಯ ಬಳಕೆಯ ಪ್ರಮಾಣವನ್ನು ಸಂಕ್ಷಿಪ್ತವಾಗಿ ಈ ರೀತಿ ಹೇಳಬಹುದು:

| | | | |
|---|---|---|---|
| ವಾಣಿಜ್ಯ ವಿದ್ಯುಚ್ಛಕ್ತಿ: | 339.9 Mtcr | (1982-83) | (ಕಲ್ಪಿತ) |
| ವಾಣಿಜ್ಯೇತರ ವಿದ್ಯುಚ್ಛಕ್ತಿ: | 220.0 Mtcr | (1978-79) | |

ಹುಲ್ಲಿನ ಜೈವಿಕವಸ್ತು ವಿದ್ಯುತ್ತಿನ ಆಕರವೆಂದು ವಾಣಿಜ್ಯೇತರ ವಿದ್ಯುಚ್ಛಕ್ತಿಯ ಲೆಕ್ಕಕ್ಕೆ ಇದನ್ನು ತೆಗೆದುಕೊಂಡಿಲ್ಲ. ಭಾರತದಲ್ಲಿ ದನಕರುಗಳ ಒಟ್ಟು ಸಂಖ್ಯೆ ಎರಡೂವರೆ ಕೋಟಿ ಎಂದು ಲೆಕ್ಕಕ್ಕೆ ತೆಗೆದುಕೊಂಡರೆ ಪ್ರತಿ ಗೋವು ವರ್ಷವೊಂದಕ್ಕೆ 2.19 ಟನ್ನಿನಷ್ಟು ಮೇವನ್ನು ತಿನ್ನುತ್ತದೆ ಎಂದು ಊಹಿಸಿಕೊಂಡರೂ ವರ್ಷದಲ್ಲಿ ತಿನ್ನುವ ಒಟ್ಟು ಮೇವು 550 ಮೆಟ್ರಿಕ್ ಟನ್ನುಗಳಷ್ಟು. ಪರಿವರ್ತನ ಕೋಷ್ಟಕ 0.8 ಅನ್ನು ಬಳಸಿದರೆ ಇದು 440.0 Mtcrಗೆ ಸಮನಾಗಿರು ತ್ತದೆ. ಹೀಗಾಗಿ, ಶಕ್ತಿಯ ಅತ್ಯದ್ಭುತ ಆಕರವೆನಿಸಿದ ಮೇವು ವಿದ್ಯುಚ್ಛಕ್ತಿಯ ತಂತ್ರಜ್ಞರ ಲೆಕ್ಕಾಚಾರಕ್ಕೆ ಸಿಕ್ಕದೆ ಪೂರ್ಣವಾಗಿ ಕೈತಪ್ಪಿಹೋಗಿದೆ. ಈ ಮೇವನ್ನು ಲೆಕ್ಕಕ್ಕೆ ತೆಗೆದುಕೊಂಡಿದ್ದೇ ಆದರೆ ನಮ್ಮ ಸರಾಸರಿ ತಲಾವಾರು ವಿದ್ಯುತ್ ಬಳಕೆಯ ಪ್ರಮಾಣ ಸುಮಾರು ದ್ವಿಗುಣಗೊಳ್ಳು ವುದು. ಇಲ್ಲಿ ಎರಡು ವಾಸ್ತವಗಳನ್ನು ಹೇಳುವ ಅಗತ್ಯತೆ ಉಂಟು. ಜೈವಿಕ ವಸ್ತು (ಉರವಲು+ ಮೇವು) ಈ ದೇಶದಲ್ಲಿ ಇಂದಿಗೂ ಪ್ರಮುಖವಾದ ಶಕ್ತಿಯ ಮೂಲ ಆಕರ. ಈ ಆಕರದ ಬಳಕೆಯ ಕ್ಷಮತೆಯೂ ಕಡಿಮೆ. ಭವಿಷ್ಯತ್ತಿನಲ್ಲಿ ವಿದ್ಯುಚ್ಛಕ್ತಿಯ ಬೇಡಿಕೆಯ ಬಗ್ಗೆ ಮೂಡುವ ಯಾವುದೇ ಲೆಕ್ಕಾಚಾರವು (1) ಮೇವಿನ ಬಳಕೆಯಲ್ಲಿ ಜಾಗರೂಕತೆ ವಹಿಸುವುದು. (2) ಜಾನು ವಾರುಗಳ ಪೋಷಣೆ ಕುರಿತಂತೆ ವಿವೇಚನೆಯಿಂದ ಮೇವನ್ನು ಉಳಿತಾಯ ಮಾಡುವುದು ಹಾಗೂ 3) ವಿದ್ಯುಚ್ಛಕ್ತಿಯ ಉತ್ಪಾದನೆಗೆ ಮೇವನ್ನು ಬಳಸುವುದು ಇವುಗಳನ್ನು ಒಳಗೊಂಡಿರಬೇಕು.

## ಜೈವಿಕ ಅನಿಲ ಅಥವಾ ಜೈವಿಕವಸ್ತುಗಳ ಮೂಲಕ ವಿಕೇಂದ್ರೀಕೃತ ವಿದ್ಯುಚ್ಛಕ್ತಿ

ಗ್ರಾಮಾಂತರ ಪ್ರದೇಶದ ಮಟ್ಟದಲ್ಲಿ ವಿದ್ಯುತ್ತಿನ ವಿಕೇಂದ್ರೀಕೃತ ಸ್ಥಾವರಗಳು ಬೇಕೆಂಬ ಈಗಿನ ವಾದವು ಎಲ್ಲ ಸರಂಧ್ರ (Cellulosic) ಜೀವಕೋಶಗಳ ಆಕರವನ್ನು ಜೈವಿಕ ಅನಿಲವನ್ನಾಗಿ ಪರಿವರ್ತಿಸುವುದರ ಮೂಲಕ ವಿದ್ಯುತ್ ಇಂಜಿನ್ನುಗಳನ್ನು ನಡೆಸುವುದರ ಮೇಲೆ ಅವಲಂಬಿತವಾಗಿದೆ ಎಂದು ಭಾವಿಸಲಾಗಿದೆ. ಈ ನಿಟ್ಟಿನಲ್ಲಿ ಅಗತ್ಯವೆನಿಸಿದ ಎಲ್ಲ ತಾಂತ್ರಿಕ ಜ್ಞಾನವು ಸುಲಭವಾಗಿ ದೊರೆಯುತ್ತದೆ ಇಲ್ಲವೆ ದೇಶೀಯವಾಗಿ ಅನತಿಕಾಲದಲ್ಲಿ ನಾವೇ ತಯಾರಿಸಲೂಬಹುದು. ಈ ಕೆಳಕಂಡ ಮೂರು ಹಂತಗಳಲ್ಲಿ ಇದನ್ನು ಸಾಧಿಸಬಹುದು.

(1) ಸಗಣಿಯಿಂದ ಜೈವಿಕ ಅನಿಲ ಸ್ಥಾವರಗಳು

ಕರ್ನಾಟಕದಲ್ಲಿ ದೊರೆಯುವ ಒಟ್ಟು ಸಗಣಿಯ ಪ್ರಮಾಣದ ಮೇಲೆ ಇದನ್ನು ನಿರ್ಧರಿಸಬಹುದು. ನಾವು ವಿಕೇಂದ್ರೀಕೃತ ವಿದ್ಯುತ್ ಸ್ಥಾವರಗಳನ್ನು ಶಿಫಾರಸ್ಸು ಮಾಡಿದರೂ, ಇಡೀ ಕರ್ನಾಟಕ ರಾಜ್ಯಕ್ಕೆ ಬೇಕಾಗುವ ಒಟ್ಟು ವಿದ್ಯುತ್ತಿನ ಪ್ರಮಾಣವನ್ನು ರಾಜ್ಯದಲ್ಲಿರುವ ಒಟ್ಟು ಹಳ್ಳಿಗಳ ಸಂಖ್ಯೆಯಿಂದ ಭಾಗಿಸಿದರೆ ಆಗ ಪ್ರತಿ ಹಳ್ಳಿಯ ಸರಾಸರಿಯ ವಿದ್ಯುತ್ತಿನ ಅಗತ್ಯ ತಿಳಿದು ಬರುತ್ತದೆ. ಕರ್ನಾಟಕದಲ್ಲಿ ಜಾನುವಾರುಗಳ ಒಟ್ಟು ಸಂಖ್ಯೆ ಸುಮಾರು ಒಂದು ಕೋಟಿ ಮೂವತ್ತು ಲಕ್ಷ. ದಿನವೊಂದಕ್ಕೆ ಒಂದು ಪಶು 4 ಕಿಲೋಗ್ರಾಮ್ ಸಗಣಿ ಕೊಡುತ್ತದೆ ಎಂದು ಲೆಕ್ಕಕ್ಕೆ ತೆಗೆದುಕೊಂಡರೆ ಈ ಕೆಳಗಿನ ಮೊತ್ತ ಲಭಿಸುತ್ತದೆ.

ದಿನವೊಂದಕ್ಕೆ ದೊರೆವ ಸಗಣಿ: 4 x 13 x 106 =52 x 10 ಕಿಲೊ ಗ್ರಾಂ

ದಿನವೊಂದಕ್ಕೆ ಜೈವಿಕ ಅನಿಲದ ಉತ್ಪಾದನೆ: 2.0 x 10 = 52 x 10 ಕಿಲೊ ಗ್ರಾಂ

ದಿನವೊಂದಕ್ಕೆ ಉತ್ಪಾದನೆಯಾಗುವ ವಿದ್ಯುಚ್ಛಕ್ತಿ: 2 x 106 ಕಿಲೊ ವ್ಯಾಟ್

ದಿನಕ್ಕೆ 8ಗಂಟೆ ವಿದ್ಯುತ್
ಬಳಸುತ್ತೇವೆಂದುಕೊಂಡರೆ ವಿದ್ಯುತ್ ಸಾಮರ್ಥ್ಯ: 250.0 ಮೆಗಾವ್ಯಾಟ್

ಇದರಿಂದ ಪ್ರತಿ ಹಳ್ಳಿಯೂ ಸರಾಸರಿ 10 ಕಿಲೋವ್ಯಾಟ್ ಸಾಮರ್ಥ್ಯದ ವಿದ್ಯುತ್ ಕೇಂದ್ರವೊಂದನ್ನು ಪಡೆಯುತ್ತದೆ ಎಂದಾಯಿತು. ಇದು ಆ ಹಳ್ಳಿಯ ಅಗತ್ಯಗಳೆನಿಸಿದ ದೀಪ, ನೀರೆತ್ತುವಿಕೆ ಹಾಗೂ ಸಣ್ಣ ಪ್ರಮಾಣದ ಕೈಗಾರಿಕೆಗೆ ಸಾಕಾಗುತ್ತದೆ.

ಶಕ್ತಿಯ ಆಕರ ಹಾಗೂ ತಂತ್ರಜ್ಞಾನ ಸುಲಭವಾಗಿ ದೊರೆಯುವುದರಿಂದ ಈ ಬಗೆಯ ವಿದ್ಯುತ್ ಆಯ್ಕೆಯನ್ನು ಬಹು ಶೀಘ್ರವಾಗಿ ಅನುಷ್ಠಾನಕ್ಕೆ ತರಬಹುದು.

(2) ಕೃತಕ ಅರಣ್ಯದಿಂದ ಜೈವಿಕ ಅನಿಲ

ಕರ್ನಾಟಕದಲ್ಲಿ ಒಂದು ಕೋಟಿ ಇಪ್ಪತ್ತು ಲಕ್ಷ ಹೆಕ್ಟೇರುಗಳಷ್ಟು ಉಳುವರಿ ಮಾಡಬಲ್ಲ ಬಂಜರು ಭೂಮಿ ಇದೆ. ಈ ಪಾಳು ಭೂಮಿಯನ್ನು ಸಸಿ ಬೆಳೆಸುವುದಕ್ಕೂ ಬಹುಪಯೋಗಿ ಅರಣ್ಯ ಸಸಿ ಬೆಳೆಸುವುದಕ್ಕೂ ಹುಲ್ಲು ಬೆಳೆಸುವುದಕ್ಕೂ ಪರಿವರ್ತಿಸಬಹುದು. ಈ ಭೂಮಿಯಲ್ಲಿ ಬೆಳೆವ ಜೈವಿಕ ಸಸ್ಯಗಳ ಉತ್ಪನ್ನವನ್ನು ಕೆಳಕಂಡಂತೆ ಲೆಕ್ಕ ಹಾಕಿದಾಗ:

ವಾರ್ಷಿಕ ಒಂದು ಹೆಕ್ಟೇರು ಭೂಮಿಯಲ್ಲಿ ಸಸ್ಯಗಳ ಬೆಳವಣಿಗೆ: 2.0 ಟನ್ (ಒಣಗಿರುವುದು)

ಒಣ ಹುಲ್ಲು ಒಂದು ವರ್ಷದಲ್ಲಿ ಒಂದು ಹೆಕ್ಟೇರಿಗೆ: 2.0 ಟನ್

ನಿತ್ಯ ದೊರೆವ ಒಣಗಿದ ಜೈವಿಕ ವಸ್ತು: $\frac{4 \times 1200}{365} \times 10^{6} = 13.3 \times 10^{6}$ ಕಿಲೋಗ್ರಾಂ

ಇದರಿಂದ ಪ್ರತಿನಿತ್ಯ $2.67 \times 10^{6}$ ಘನ ಮೀಟರು = $2.67 \times 10^{6}$ ಕಿಲೋವ್ಯಾಟನಷ್ಟು ಜೈವಿಕ ಅನಿಲ ಉತ್ಪನ್ನವಾಗುತ್ತದೆ.

ನಿತ್ಯ 8.00 ಗಂಟೆಗಳ ಅವಧಿಯಲ್ಲಿ 330.0 ಮೆಗಾವ್ಯಾಟ್ ವಿದ್ಯುತ್ ಉತ್ಪಾದನೆಯಾಗುತ್ತದೆ. ಪ್ರತಿ ಹಳ್ಳಿ ಸರಾಸರಿ 13.0 ಕಿಲೋವ್ಯಾಟ್ ಶಕ್ತಿಯ ವಿದ್ಯುತ್ ಕೇಂದ್ರವನ್ನು ಪಡೆಯಬಲ್ಲದು. ಈ ಹಂತದಲ್ಲಿ ಇಂತಹ ಪಾಳು ಭೂಮಿಯನ್ನು ಕ್ರಮಬದ್ಧ ಸಸಿಗಳ ಕ್ಷೇತ್ರವನ್ನಾಗಿಸಬೇಕಷ್ಟೆ. ಈ ಕಾರ್ಯಕ್ಕೆ ಐದು ವರ್ಷಗಳ ಅವಧಿಯಲ್ಲಿ ಸಸಿಗಳನ್ನು ನೆಡುವ ಯೋಜನೆಯೊಂದನ್ನು ಹಮ್ಮಿಕೊಳ್ಳಬೇಕು. ಈ ಕ್ರಮವನ್ನು ಅನುಸರಿಸುವುದರಿಂದ ಸಮಸ್ಯೆಗಳನ್ನೆಲ್ಲ ಒಂದೇ ಏಟಿಗೆ ಪರಿಹರಿಸಬಹುದು. ಇದರಿಂದ ಭೂ ಸವೆತ ನಿಂತು ಗ್ರಾಮಾಂತರ ವಿದ್ಯುಚ್ಛಕ್ತಿಯ ಸಮಸ್ಯೆ ಬಗೆಹರಿಯುತ್ತದೆ.

(3) ಗೋ ಶಕ್ತಿಯನ್ನು ಮೇವು ಆಧಾರಿತ ಜೈವಿಕ ಅನಿಲದಿಂದ ಬದಲಿಸುವುದು

ಕರ್ನಾಟಕದಲ್ಲಿ 1970ರಲ್ಲಿ ಸುಮಾರು ಮೂವತ್ತು ಲಕ್ಷ ಎತ್ತುಗಳಿದ್ದಿರಬಹುದೆಂದು ಅಂದಾಜು ಮಾಡಲಾಗಿದೆ. ಈಗ ಇದರ ಸಂಖ್ಯೆ ನಲವತ್ತು ಲಕ್ಷ ಎಂದು ಊಹಿಸಿಕೊಳ್ಳಿ. ಕ್ರಮೇಣವಾಗಿ ಈ ಎತ್ತುಗಳನ್ನು ಬದಲಾಯಿಸಿದರೆ, ಬದಲಿಗೆ ಉಳಿತಾಯವಾದ ಮೇವಿನಿಂದ ನೇರವಾಗಿ ಜೈವಿಕ ಅನಿಲವನ್ನು ಉತ್ಪಾದಿಸಿ ಎತ್ತುಗಳು ಮಾಡುತ್ತಿದ್ದ ಕಾರ್ಯವನ್ನು ಯಂತ್ರಗಳಿಂದ ಮಾಡಿಸಬಹುದು. ಇದರ ಅರ್ಥವೇನೆಂದರೆ ಹೊಸ ತಲೆಮಾರಿನ ಸಣ್ಣ ಪ್ರಮಾಣದ ಟ್ರ್ಯಾಕ್ಟರ್‌ಗಳು ಮಿನಿ ಸಾರಿಗೆ ವಾಹನಗಳ ಅಭಿವೃದ್ಧಿಯನ್ನು ಸಾಧಿಸಬಹುದು (ಈಗಾಗಲೇ ಭಾರತದಲ್ಲಿ ಅಂತಹ ಸಾಧನಗಳು ಬಳಕೆಯಲ್ಲಿವೆ). ನಾವೀಗ ಬಂಡಿಗಳ ಕ್ಷಮತೆಯನ್ನು ನೇರವಾಗಿ ಶಕ್ತಿಯನ್ನಾಗಿ ಪರಿವರ್ತಿಸಿ ಎರಡನ್ನು ತಾಳೆ ಮಾಡಿ ನೋಡೋಣ:

ಎತ್ತುಗಳನ್ನು ವರ್ಷ ಪೂರ್ತಿ ಕೃಷಿ ಕೆಲಸದಲ್ಲಿ ತೊಡಗಿಸದೇ ಇರುವುದರಿಂದ ಅವುಗಳು ವರ್ಷದಲ್ಲಿ ಕೆಲಸ ಮಾಡುವ ದಿನಗಳನ್ನಷ್ಟೆ ಲೆಕ್ಕಕ್ಕೆ ತೆಗೆದುಕೊಂಡು ಶಕ್ತಿಯ ಸಾಮರ್ಥ್ಯವನ್ನು ವಿಶ್ಲೇಷಿಸೋಣ. ಕೆಲಸ ಮಾಡುವ ದಿನಗಳು 100 ಎಂದು ಊಹಿಸಿಕೊಂಡರೆ ಎತ್ತುಗಳು ವರ್ಷದಲ್ಲಿ ಉತ್ಪಾದಿಸುವ ಶಕ್ತಿ:-

$$\frac{(.675 + .16 + 0.244) \times 100}{365 \times 24.6} = 1.20\%$$ (ಚಿತ್ರ 1 ನೋಡಿ)

ಬದಲಾಗಿ, ನೇರ ಜೈವಿಕ ಅನಿಲದಿಂದ ಶಕ್ತಿಯ ಉತ್ಪಾದನೆ:

$$\frac{1.2 + 1.29}{24.6} = 10.1\%$$ (ಚಿತ್ರ 2 ನೋಡಿ)

ಎತ್ತುಗಳನ್ನು ಬಳಸಿ ಉತ್ಪಾದಿಸುವ ಶಕ್ತಿಗಿಂತ ಮೇವನ್ನು ಬಳಸಿ ಉತ್ಪಾದಿಸುವ ಜೈವಿಕ ಅನಿಲ ಹೆಚ್ಚು ಲಾಭದಾಯಕವೆಂದು ಮೇಲಿನ ಈ ಲೆಕ್ಕಾಚಾರ ವ್ಯಕ್ತಪಡಿಸುತ್ತದೆ. ಆದರೆ ಈ ಕಾರ್ಯವನ್ನು ಒಂದೇ ರಾತ್ರಿಗೆ ಕಾರ್ಯರೂಪಕ್ಕೆ ತರಲು ಸಾಧ್ಯವಿಲ್ಲವೆನ್ನುವುದೂ ಇದರಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಜೈವಿಕ ಅನಿಲದ ವ್ಯವಸ್ಥೆಯನ್ನು ಜಾರಿಗೆ ತರುವ ಮೂಲಕ ಕರ್ನಾಟಕದಲ್ಲಿ 7 ವರ್ಷಗಳ ಅವಧಿಯಲ್ಲಿ ಶೇಕಡಾ 10ರಷ್ಟು ಎತ್ತುಗಳನ್ನು ತಮ್ಮ ಸಾಂಪ್ರದಾಯಿಕ ವೃತ್ತಿಯಿಂದ ಬದಲಿಸಬಹುದೆಂದು ಊಹಿಸಿಕೊಳ್ಳೋಣ. ಆ ಮೇರೆಗೆ ಈ ಕೆಳಗಿನ ಲೆಕ್ಕಾಚಾರದಂತೆ ಹೆಚ್ಚುವರಿ ವಿದ್ಯುತ್ ನಮಗೆ ಲಭಿಸಲಿದೆ:-

$4 \times 10^5$ ಎತ್ತುಗಳ ಬದಲಿಗೆ ಉಳಿತಾಯವಾಗುವ ಮೇವು

$= 6 + 4 \times 10^5 = 2.4 \times 10^6$ ಕಿಲೋಗ್ರಾಂ/ದಿನಕ್ಕೆ

$= 0.48 \times 10^6$ ಘನಮೀಟರು ಜೈವಿಕ ಅನಿಲ

$= 0.48 \times 10^6$ ಕಿಲೋವ್ಯಾಟ್/ದಿನಕ್ಕೆ

$= 0.06 \times 10^6$ ಕಿಲೋವ್ಯಾಟ್

ಅಥವಾ 60 ಮೆಗಾವ್ಯಾಟ್ ವಿದ್ಯುಚ್ಛಕ್ತಿ ಅಥವಾ ಇದನ್ನೆ ಬೇರೆ ಮಾತಿನಲ್ಲಿ ಹೇಳುವುದಾದರೆ ಪ್ರತಿ ಹಳ್ಳಿಯು 2.4 ಕಿಲೋವ್ಯಾಟ್ ಚಾಲಕ ಶಕ್ತಿಯನ್ನು ಗಳಿಸಲಿದ್ದು ಸ್ವಲ್ಪ ಭಾಗ ಕೃಷಿಯನ್ನು ಸಹ ಯಾಂತ್ರೀಕರಣಗೊಳಿಸಬಹುದು.

ಮೇಲೆ ವಿವರಿಸಿದ ಮೂರು ಹಂತಗಳಲ್ಲೂ ಗೊಬ್ಬರದ ಉತ್ಪತ್ತಿಯಾಗುತ್ತದೆ. ಇದರ ಆರ್ಥಿಕ ಮಹತ್ವ ಹಾಗೂ ಶಕ್ತಿಯ ಪ್ರಭಾವವನ್ನು ಉಪೇಕ್ಷಿಸಲು ಸಾಧ್ಯವಿಲ್ಲ. ಕೃಷಿ ಅಥವಾ ಅರಣ್ಯ ಭೂಮಿಯನ್ನು ಇನ್ನೂ ಹೆಚ್ಚು ಫಲವತ್ತಾಗಿಸಲು ಈ ಗೊಬ್ಬರವನ್ನು ಬಳಸಬಹುದು.

**ಸಾರಾಂಶ**

1) ಅಣುಸ್ಥಾವರಗಳು ಬಹುತೇಕವಾಗಿ ವಿಶಾಲ ಪ್ರದೇಶವನ್ನು ವ್ಯಾಪಿಸಿರುವಂತಹವು. ಜೊತೆಗೆ ಇವು ಕೇಂದ್ರೀಕೃತ ವ್ಯವಸ್ಥೆ ಹೊಂದಿ ಹಳ್ಳಿಗಳ ಅಭಿವೃದ್ಧಿಗೆ ಪ್ರತಿಕೂಲವನ್ನುಂಟು ಮಾಡುತ್ತವೆ.

2) ನಿರಾಶಾವಾದದ ಅಂದಾಜಿನಲ್ಲಿ ಸಹ ಜೈವಿಕ ಅನಿಲ ಕೇಂದ್ರಗಳು ಕರ್ನಾಟಕದ

ಪ್ರತಿಯೊಂದು ಹಳ್ಳಿಗೆ 23 ಕಿಲೋವ್ಯಾಟ್ ವಿದ್ಯುಚ್ಛಕ್ತಿಯನ್ನು ಹಾಗೂ 2.4 ಕಿಲೋ ವ್ಯಾಟ್ ಚಾಲಕ ಶಕ್ತಿಯನ್ನೂ ದೊರಕಿಸಿ ಕೊಡಬಲ್ಲವು. ಉತ್ತಮ ರೀತಿಯ ಭೂ ನಿರ್ವಹಣೆ ಹಾಗೂ ಜಾನುವಾರುಗಳ ಅಭಿವೃದ್ಧಿ ಮಾಡಿದ್ದ ಆದರೆ ಇನ್ನೂ ಅಧಿಕ ವಿದ್ಯುತ್ತಿನ ಉತ್ಪಾದನೆ ಸಾಧ್ಯವಿದೆ. ಜೈವಿಕ ವಸ್ತುವಿನ ಬಳಕೆಯಿಂದ ಕರ್ನಾಟಕ ಸುಲಭವಾಗಿ 640 ಮೆಗಾವ್ಯಾಟಿನಷ್ಟು ವಿದ್ಯುತ್ತನ್ನು ಉತ್ಪಾದಿಸಬಲ್ಲದು.

3) ಜೈವಿಕ ವಸ್ತುವಿನ ಬಳಕೆಯಿಂದ ಅಪರಿಮಿತ ಪರಿಸರ ಮತ್ತು ಆರ್ಥಿಕ ಸೌಲಭ್ಯಗಳು ಅಂದರೆ ಗೊಬ್ಬರದ ಉತ್ಪಾದನೆ, ಜಲ ಮತ್ತು ಮಣ್ಣು ಸಂರಕ್ಷಣೆ ಹಾಗೂ ಉದ್ಯೋಗಗಳ ಸೃಷ್ಟಿಯಾಗಲಿದೆ. ಪರಮಾಣು ಶಕ್ತಿ ಈ ಯಾವುದೇ ಸೌಲಭ್ಯಗಳನ್ನು ದೊರಕಿಸಿ ಕೊಡಲಾರದು.

ಚಿತ್ರ - 1 ಎತ್ತುಗಳಿಂದ ಶಕ್ತಿಯ ಪರಿವರ್ತನೆ




ಚಿತ್ರ-2 ಜೈವಿಕ ಅನಿಲ ವ್ಯವಸ್ಥೆಯಿಂದ ಶಕ್ತಿಯ ಪರಿವರ್ತನೆ




*(ಶ್ರೀ.ಕೆ.ಎಸ್. ಜಗದೀಶ್, ಪ್ರಾಧ್ಯಾಪಕರು, ಭಾರತೀಯ ವಿಜ್ಞಾನ ಸಂಸ್ಥೆ ಬೆಂಗಳೂರು, ಕೃಗಾ ಕುರಿತು ದಿನಾಂಕ 10-11ನೇ ಡಿಸೆಂಬರ್ 1988ರಂದು ನಡೆದ ರಾಷ್ಟ್ರೀಯ ಚರ್ಚಾಗಾರದಲ್ಲಿ ಮಂಡಿಸಿದ ಲೇಖನದ ಭಾವಾನುವಾದ.)*

# ಕೈಗಾ ಯೋಜನೆ

ಭಾರತ ಸರಕಾರ ಉತ್ತರ ಕನ್ನಡ ಜಿಲ್ಲೆಯ ಕೈಗಾದಲ್ಲಿ 255 ಮೆಗಾವ್ಯಾಟ್ ಸಾಮರ್ಥ್ಯದ ಎರಡು ಘಟಕಗಳನ್ನು ಸ್ಥಾಪಿಸಲು ಅನುಮತಿಯನ್ನಿತ್ತಿದೆ. ಅಣುಶಕ್ತಿ ಆಯೋಗದ ಶಿಫಾರಸ್ಸಿನ ಮೇರೆಗೆ ಈ ತೀರ್ಮಾನವನ್ನು 1985ರಲ್ಲಿ ಸರಕಾರ ತೆಗೆದುಕೊಂಡಿತು. ಸ್ಥಳ ಆಯ್ಕೆ ಸಮಿತಿಯ ನಿಪುಣರು ಅಣುಶಕ್ತಿಯ ಇಲಾಖೆ, ಕೇಂದ್ರ ವಿದ್ಯುತ್ ಪ್ರಾಧಿಕಾರ, ಪರಿಸರ ಮಂತ್ರಾಲಯ ಇತ್ಯಾದಿಗಳ ನಿರ್ಣಯದ ಮೇಲೆ ಕೈಗಾ ಸ್ಥಳದ ಆಯ್ಕೆಯಾಯಿತು. ಈ ಸಮಿತಿಯು ಅನೇಕ ಅಂಶಗಳನ್ನು-ಜನಸಂಖ್ಯಾ ಸಾಂದ್ರತೆ, ಕೃಷಿ, ನೀರಿನ ಬಳಕೆ, ಅರಣ್ಯದ ಮೇಲಿನ ಪ್ರಭಾವ, ಬೃಹತ್ ಜನಸಂಖ್ಯೆಯ ನಗರ/ಪಟ್ಟಣಕ್ಕಿರುವ ದೂರ, ಭೂಗರ್ಭ ಮತ್ತು ಜಲ ವಿಜ್ಞಾನದ ಪರಿಣಾಮಗಳು, ಕಂಪನ ಪರಿಣಾಮಗಳು, ಬೃಹತ್ ಹಾಗೂ ಭಾರಿ ಗಾತ್ರದ ವಸ್ತುಗಳ ಸಾಗಾಟಕ್ಕೆ ಇರುವ ಮಾರ್ಗದ ಅನುಕೂಲ, ಆ ಪ್ರದೇಶದ ವಿದ್ಯುತ್ತಿನ ಬೇಡಿಕೆ-ಮುಂತಾದವನ್ನೆಲ್ಲ ಗಮನದಲ್ಲಿಟ್ಟುಕೊಂಡು ಕೈಗಾ ಪ್ರದೇಶವನ್ನು ಆಯ್ಕೆ ಮಾಡಿತು. ಇದಾದ ನಂತರ ಭಾರತ ಸರ್ವೇಕ್ಷಣ ಇಲಾಖೆ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ (K.E.B.), ಕರ್ನಾಟಕ ಶಕ್ತಿ ನಿಗಮ (KPC), ಅರಣ್ಯ ಇಲಾಖೆ ಹಾಗೂ ಪರಿಸರ ಮಂತ್ರಾಲಯ ಮುಂತಾದ ಹಲವು ಸಂಸ್ಥೆಗಳು ಪ್ರತ್ಯೇಕವಾಗಿ ಸ್ಥಳದ ಆಯ್ಕೆ ಕುರಿತಂತೆ ಪರಿಶೀಲಿಸಿವೆ.

ಅಣುವಿಕಿರಣ ಹಾಗೂ ಅಣುಕಸದ ನಿರ್ವಹಣೆ ಕುರಿತಂತೆ ಕೈಗಾ ಯೋಜನೆಯು ಅಂತಾರಾಷ್ಟ್ರೀಯ ನಿಯಮಗಳನ್ನು ಪಾಲಿಸುವುದು. ಅಣುಸ್ಥಾವರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆಯಿಂದ ಆ ಪ್ರದೇಶದ ಮೇಲೆ ಮತ್ತು ಪರಿಸರದ ಮೇಲೆ ಬೀರುವ ಪರಿಣಾಮಗಳ ಅಧ್ಯಯನವು ಒಂದು ನಿರಂತರ ನಡೆಯುವ ಪ್ರಕ್ರಿಯೆ. ಈ ಪ್ರಕ್ರಿಯೆಯು ಸ್ಥಳದ ಆಯ್ಕೆ ಹಂತದಿಂದ ಪ್ರಾರಂಭಗೊಂಡು ಸ್ಥಾವರದ ಆಯುಷ್ಮಾನದವರೆಗೆ ಮುಂದುವರಿಯುತ್ತಿರುತ್ತದೆ.

ಅಣುವಿಕಿರಣ ಸಂರಕ್ಷಣೆ ಕಾರ್ಯಕ್ರಮವನ್ನು ಭಾರತ ಅಣುಸ್ಥಾವರಗಳಲ್ಲಿ ಅಳವಡಿಸಲಾಗುವುದು. ಈ ನಿಗಮಗಳು ಅಂತಾರಾಷ್ಟ್ರೀಯ ಅಣುವಿಕಿರಣ ಸುರಕ್ಷಣಾ ಆಯೋಗದಿಂದ ಶಿಫಾರಸ್ಸುಗೊಂಡಿವೆ. ಈ ನಿಯಮಗಳನ್ನು ಅಂತರಾಷ್ಟ್ರೀಯ ಅಣುಶಕ್ತಿ ನಿಗಮ, ವಿಶ್ವ ಆರೋಗ್ಯ ಸಂಸ್ಥೆ ಹಾಗೂ ಅಂತಾರಾಷ್ಟ್ರೀಯ ನೌಕರರ ಸಂಸ್ಥೆಗಳು ಒಟ್ಟಿಗೆ ಸೇರಿ ರೂಪಿಸಿವೆ. ಭಾರತವು ಇದರ ಸದಸ್ಯತ್ವವನ್ನು ಹೊಂದಿದೆ.

**ಸುರಕ್ಷತಾ ಕ್ರಮಗಳು**

ಅಣುಶಕ್ತಿ ಕಾರ್ಯಕ್ರಮಗಳ ಅನುಷ್ಠಾನಕರು ವಿಧಿಸಿದ ಸುರಕ್ಷತಾ ತತ್ವಗಳನ್ನು ಸ್ಥಾವರಗಳ ಸ್ಥಾಪನೆಯಲ್ಲಿ ಅಳವಡಿಸಿಕೊಳ್ಳಲಾಗುತ್ತದೆ. ಅಣುಸ್ಥಾವರಗಳ ಸ್ಥಾಪನೆಯಿಂದಾಗಿ ಯಾವುದೇ ತೊಂದರೆ ನೌಕರರಿಗೆ ತಾಗದಂತೆ ಅಣುವಿಕಿರಣ ವಸ್ತು ಹಾಗೂ ವಿಕಿರಣದ ಮೂಲವನ್ನು ಬಹಳ ಎಚ್ಚರಿಕೆಯಿಂದ ಕಾಯಲಾಗುವುದು.

ಮೇಲಿನ ಉದ್ದೇಶಿತ ಗುರಿಯನ್ನು ಸಾಧಿಸಲು ಈ ಕೆಳಕಂಡ ಕ್ರಮಗಳನ್ನು ಅನುಸರಿಸಲಾಗುವುದು:

1. ಅಪಘಾತಗಳನ್ನು ತಡೆಯಲು, ಅಪಘಾತದ ಪ್ರಮಾಣವನ್ನು ಕನಿಷ್ಠಗೊಳಿಸಲು, ಸ್ಥಾವರದ ವಿನ್ಯಾಸದಲ್ಲಿ ವಿಶೇಷವಾದ ತಾಂತ್ರಿಕ ಸುರಕ್ಷತೆಗಳನ್ನು ಪಾಲಿಸಲಾಗುವುದು.

2. ಸ್ಥಾವರ ಕಾರ್ಯನಿರ್ವಹಿಸುವ ಸಾಮಾನ್ಯ ದಿನಗಳಲ್ಲಿ ಸ್ಥಾವರದಲ್ಲಿ ಕೆಲಸ ಮಾಡುವ ನೌಕರರಿಗೆ ಹಾಗೂ ಸಾರ್ವಜನಿಕರಿಗೆ (ಸ್ಥಾವರದ ಸುತ್ತ 1.6 ಕಿಲೋಮೀಟರು ಸುತ್ತಳತೆಯಲ್ಲಿರುವವರಿಗೆ) ತೊಂದರೆಯಾದಂತೆ ನೋಡಿಕೊಳ್ಳುವ ಸಲುವಾಗಿ ವಿಕಿರಣದ ಪ್ರಮಾಣ ಕನಿಷ್ಠಮಟ್ಟದಲ್ಲಿರುವ ಹಾಗೆ ನೋಡಿಕೊಳ್ಳಲಾಗುತ್ತದೆ.

3. ಸ್ಥಾವರಗಳಲ್ಲಿ ಅಣುವಿಕಿರಣವಲ್ಲದ ಅಪಘಾತಗಳು, ಅಣುಸ್ಥಾವರಗಳಲ್ಲದ ಕಾರ್ಖಾನೆಗಳಲ್ಲಿ ಉಂಟಾಗುವ ಅಪಘಾತದ ಪುನರಾವರ್ತನೆ ಮತ್ತು ಕಠೋರತೆಗಳಿಗೆ ಹೋಲಿಸಿದರೆ ಅಪಘಾತದ ಸಂಭವ ಇಲ್ಲಿ ತೀರ ಕಡಿಮೆ.

4. ಈ ಯೋಜನೆಯಲ್ಲಿ ಕೆಲಸ ಮಾಡುವ ಸಿಬ್ಬಂದಿಗೆ ಸ್ಥಾವರದ ನಿರ್ವಹಣೆ, ದುರಸ್ತಿ/ಸಂರಕ್ಷಣೆಗಳನ್ನು ಕುರಿತಂತೆ ತರಬೇತಿಯನ್ನು ಕೊಡಲಾಗುತ್ತದೆ. ವಹಿಸಿದ ಕೆಲಸವನ್ನು ಸ್ವತಂತ್ರವಾಗಿ ನಿರ್ವಹಿಸುವಂತೆ ತಯಾರು ಮಾಡಲಾಗುವುದು.

ಪರಿಸರದ ಮೇಲಾಗುವ ಪರಿಣಾಮಗಳು ಅತ್ಯಲ್ಪವಾಗಿರಲು ಈ ಕೆಳಗಿನ ತತ್ವಗಳನ್ನು ಅನುಸರಿಸಲಾಗುವುದು:

ಅ) ಸ್ಥಾವರವು ತನ್ನ ಪ್ರದೇಶದ ವ್ಯಾಪ್ತಿಯನ್ನು ಮೀರಿದ ಪ್ರದೇಶದಲ್ಲಿರುವ ನೈಸರ್ಗಿಕ ಸಂಪತ್ತಿನಲ್ಲಿ ಯಾವುದೇ ರೀತಿಯಲ್ಲಿ ತಲೆಹಾಕದು.

ಆ) ತೀಕ್ಷ್ಣವಾದದ್ದಾಗಲಿ, ದೀರ್ಘಕಾಲದ್ದಾಗಲಿ, ಹಾನಿಕಾರಕ ಪರಿಣಾಮಗಳು ಸ್ಥಾವರದ ಕಾರ್ಯಾಚರಣೆಯಿಂದ ಅಧಿಕಗೊಳ್ಳದಂತೆ ನೋಡಿಕೊಳ್ಳಲಾಗುವುದು.

ಇ) ಮಾನವನೂ ಸೇರಿದಂತೆ ಜೀವಸಂಪತ್ತಿನಿಂದ ಕೂಡಿದ ನಿಸರ್ಗದ ಸಮತೋಲನ ಕದಡದಂತೆ ನೋಡಿಕೊಳ್ಳಲಾಗುವುದು.

ಈ) ಸ್ಥಾವರದಿಂದ ಬಿಡುಗಡೆಯಾಗುವ ವಿಕಿರಣ ವಸ್ತುಗಳು ಹಾಗೂ ವಿಕಿರಣಯುಕ್ತ ಮಲಿನ ವಸ್ತುಗಳಿಂದ ಪರಿಸರದ ಜೀವಿಗಳ ಸಮತೋಲನಕ್ಕೆ ಧಕ್ಕೆಬಾರದಂತೆ ನೋಡಿಕೊಳ್ಳಲಾಗುವುದು.

**ಸುರಕ್ಷತೆಯ ಮೌಲ್ಯಮಾಪನ**

1) ಪರಮಾಣು ಸ್ಥಾವರದ ಧಕ್ಕೆಗೆ ಹೊರಗಿನ ನೈಸರ್ಗಿಕ ಹಾಗೂ ಮಾನವ ನಿರ್ಮಿತ ಪ್ರಕೋಪಗಳ ಪ್ರಭಾವಕ್ಕಿಂತ ಸ್ವತಃ ಸ್ಥಾವರದ ಸಂಕೀರ್ಣ ತೊಂದರೆಗಳು ಕನಿಷ್ಠಮಟ್ಟದಲ್ಲಿರುತ್ತವೆ.

2) ಪರಿಸರದ ಮೇಲೆ ಅಣುಸ್ಥಾವರಗಳಿಂದಾಗುವ ವಿಕಿರಣದ ಪ್ರಭಾವವು, ಸ್ಥಾವರವು ಸಾಧಾರಣವಾಗಿ ಕಾರ್ಯ ನಿರ್ವಹಿಸುವ ಸಮಯದಲ್ಲಿ ಹಾಗೂ ಅಪಘಾತದ ಸಮಯದಲ್ಲಿ ಹತೋಟಿಗೆ ತರಬಲ್ಲಂತಹ ಕೆಳಮಟ್ಟದಲ್ಲಿ ಇರುತ್ತದೆ.

ಈ ಶರತ್ತುಗಳನ್ನೆಲ್ಲ ಪೂರೈಸಲು ಈ ಕೆಳಕಂಡ ಪ್ರಾಥಮಿಕ ವಿಶ್ಲೇಷಣೆಗಳನ್ನು ಕೈಗೊಳ್ಳಲಾಗಿದೆ:-

**ಬಾಹ್ಯ ನೈಸರ್ಗಿಕ ವಿಕೋಪಗಳು:**

1) ಇಲ್ಲಿನ ಭೂಗರ್ಭದಾಳದಲ್ಲಿ ಗ್ರಾನೈಟ್-ನೈಸ್ ಎಂಬ ಪ್ರಾಥಮಿಕ ಗಟ್ಟಿ ಶಿಲೆ ಇದೆ. ಸುಮಾರು 300 ಕಿಲೋಮೀಟರಿನ ವ್ಯಾಪ್ತಿಯೊಳಗೆ ಸ್ಥಾವರದ ಸುತ್ತ ಭೂಗರ್ಭ ಮತ್ತು ಭೂಕಂಪನ ವ್ಯತ್ಯಾಸಗಳನ್ನು ಪರಿಶೀಲಿಸಲಾಗಿದೆ. ಭೂಕಂಪವನ್ನು ಕುರಿತಂತೆ ಕೈಗಾ ಸ್ಥಾವರದಿಂದ

20 ಕಿಲೋಮೀಟರು ದೂರದವರೆಗೆ ಸುರಕ್ಷಿತ ವಲಯವಿದೆ ಎಂದು ತಿಳಿದು ಬಂದಿದೆ. ಕೈಗಾ ಪ್ರದೇಶದಲ್ಲಿ ಭೂಕಂಪವೇನಾದರೂ ಸಂಭವಿಸಿದ್ದೇ ಆದರೆ ಅದು ಲಕ್ಷ ವರುಷಗಳಿಗೊಮ್ಮೆ ಮಾತ್ರ!

೨) ಪ್ರವಾಹ: ಈ ಸ್ಥಾವರಕ್ಕಾಗಿ ಆಯ್ಕೆ ಮಾಡಿರುವ ಸ್ಥಳವು ಕದ್ರ ಅಣೆಕಟ್ಟಿನಿಂದ ಮೇಲ್ಭಾಗಕ್ಕೆ ಸುಮಾರು 12 ಕಿಲೋಮೀಟರು ದೂರದಲ್ಲಿದೆ. ಸ್ಥಾವರದ ಈ ಸ್ಥಳದ ಸರಾಸರಿ ಮಟ್ಟ 40 ಮೀಟರಿನಷ್ಟು ಎರೆತ್ತರದಲ್ಲಿದೆ. 38 ಮೀಟರ್ ಎತ್ತರದಲ್ಲಿರುವ ಕದ್ರ ಅಣೆಕಟ್ಟೆಗಿಂತ 2 ಮೀಟರ್ ಎತ್ತರದಲ್ಲಿದೆ ಕೈಗಾ ನೆಲೆ. ಕದ್ರ ಅಣೆಕಟ್ಟಿನ ಮೇಲ್ಭಾಗದ 6 ಅಣೆಕಟ್ಟೆಗಳಿಂದ ಕದ್ರ ಅಣೆಕಟ್ಟೆಗೆ ನುಗ್ಗಿ ಬರುವ ಪ್ರವಾಹವು ಕದ್ರ ಅಣೆಕಟ್ಟೆಯ 9 ಬಾಗಿಲುಗಳ ಮೂಲಕ ಹೊರಹೋಗುತ್ತದೆ. ಆದ್ದರಿಂದ 40 ಮೀಟರ್ ಎತ್ತರದಲ್ಲಿರುವ ಸ್ಥಾವರ ಪ್ರವಾಹದಿಂದ ಸುರಕ್ಷಿತವಾಗಿರುವುದರಲ್ಲಿ ಅನುಮಾನವಿಲ್ಲ.

3) ಮಾನವ ನಿರ್ಮಿತ ಅವಘಡಗಳು: ಸ್ಥಾವರಕ್ಕೆ ಆಯ್ಕೆ ಮಾಡಿರುವ ಈ ಸ್ಥಳದ ಸುತ್ತಮುತ್ತ ಸುಮಾರು 50 ಕಿಲೋಮೀಟರು ದೂರದಲ್ಲೂ ವಿಮಾನ ನಿಲ್ದಾಣವಿಲ್ಲ. ನಂಜಿನ ರಾಸಾಯನಿಕಗಳ ಸಂಗ್ರಹಾಲಯವಾಗಲಿ ಆಸ್ಫೋಟ ವಸ್ತುವಿನ ಉಗ್ರಾಣವಾಗಲಿ ದಹನಾನುಕೂಲ ಇಂಧನಗಳಾಗಲಿ ಇಲ್ಲ. ಸ್ಥಾವರದ ಸುತ್ತಮುತ್ತ 10 ಕಿಲೋಮೀಟರು ವ್ಯಾಪ್ತಿಯೊಳಗೆ ಗಣಿ ಚಟುವಟಿಕೆ ನಡೆಯುತ್ತಿಲ್ಲ. ರಾಜ್ಯ ಸರಕಾರದ ಸಹಕಾರದೊಂದಿಗೆ ಸ್ಥಾವರದ ಆಸುಪಾಸಿನಲ್ಲಿ ಕೈಗಾರಿಕೆಗಳ ಅಭಿವೃದ್ಧಿಯನ್ನು ಸಹ ನಿಯಂತ್ರಿಸಲಾಗುತ್ತದೆ.

## ಅಣುವಿಕಿರಣದ ಪ್ರಭಾವ ಮತ್ತು ಅದರ ಮೌಲ್ಯಮಾಪನ

ಸ್ಥಾವರದ ಸುತ್ತಮುತ್ತ ವಾಸಿಸುವ ಜನರ ಮೇಲೆ ಉಂಟಾಗುವ ವಿಕಿರಣದ ಪ್ರಭಾವವನ್ನು ಕಡಿಮೆಗೊಳಿಸಲು ಆಗಿಂದಾಗ್ಗೆ ವಿಕಿರಣದ ಪ್ರಭಾವವನ್ನು ಅಳೆಯಲಾಗುತ್ತದೆ. ಮೇಲಾಗಿ ಜನವಸತಿ ಹಾಗೂ ಜನಸಾಂದ್ರತೆಯ ನಿಯಂತ್ರಣ ಅತಿ ಮುಖ್ಯ. ಅದಕ್ಕಾಗಿ ಸ್ಥಾವರದ ನೆಲೆಯನ್ನು ಒಂದು ಸಂಸ್ಕರಿಸಿದ ವಲಯ (Sterilized Zone)ಎಂದು ವಿಭಾಗಿಸಲಾಗಿದೆ. ಈ ಪ್ರದೇಶದ ವಿಸ್ತೀರ್ಣ 1.6 ಕಿಲೋಮೀಟರ್ ಸುತ್ತಳತೆಯದಾಗಿರುತ್ತದೆ. ಜೊತೆಗೆ ಈ ರೀತಿಯ ಸಂಸ್ಕರಿಸಿದ ವಲಯದೊಳಗೆ ಜನವಸತಿಯನ್ನು ನಿಷೇಧಿಸಲಾಗುವುದು. ಜೊತೆಗೆ 5 ಕಿಲೋಮೀಟರ್ ವಿಸ್ತೀರ್ಣದವರೆಗೆ ಮತ್ತೊಂದು ಸಂಸ್ಕರಿಸಿದ ವಲಯವಿದ್ದು ಇಲ್ಲಿ ನಿಸರ್ಗ ಸಹಜವಾದ ಮರಗಿಡಗಳ ಬೆಳವಣಿಗೆಗೆ ಅನುವು ಮಾಡಿಕೊಳ್ಳಲಾಗುವುದು. ಈ ಪ್ರದೇಶದ ವ್ಯಾಪ್ತಿಯೊಳಗಿನ ನೀರು, ಆಹಾರ ಪದಾರ್ಥ, ವಾಯು, ಮಾಂಸ, ಮೀನು, ಮೊಟ್ಟೆ ಹಾಗೂ ಹಾಲಿನ ಮಾದರಿಗಳನ್ನು ಪರಿಶೀಲಿಸಿ ಅದರ ಮೇಲೆ ಅಣುವಿಕಿರಣದ ಪ್ರಭಾವವನ್ನು ಅಳೆಯಲಾಗುವುದು. ಈ ಕ್ರಮದಿಂದ ಸಾರ್ವಜನಿಕರ ಮೇಲೆ ವಿಕಿರಣದಿಂದಾಗುವ ಪ್ರಭಾವವನ್ನು ನಿಯಂತ್ರಣಕ್ಕೆ ತರಲು ಸಹಕಾರಿಯಾಗುತ್ತದೆ. ಈ ಬಗೆಯ ಕಾರ್ಯಕ್ರಮಗಳಿಂದ ಆಕಸ್ಮಾತ್ತಾಗಿ ಅಪಾಯ ಸ್ಥಿತಿ ಒದಗಿದಾಗ ಅದನ್ನು ನಿಯಂತ್ರಿಸಲು ತುರ್ತಾಗಿ ಕ್ರಮಗಳನ್ನು ಕೈಗೊಳ್ಳಬಹುದು.

## ಜನವಸತಿ:

1981ರ ಜನಗಣತಿಯಂತೆ ರಾಜ್ಯದ ಸರಾಸರಿ ಜನಸಾಂದ್ರತೆ ಒಂದು ಚದರ ಕಿಲೋಮೀಟರಿಗೆ 193. ಈ ಸ್ಥಾವರದ ಸುತ್ತಮುತ್ತ 10 ಕಿಲೋಮೀಟರ್ ತ್ರಿಜ್ಯದ ವ್ಯಾಪ್ತಿಯೊಳಗೆ ಸರಾಸರಿ

ಜನಸಾಂದ್ರತೆ ಒಂದು ಚದರ ಕಿಲೋಮೀಟರಿಗೆ 9 ಮಾತ್ರ ಇದೆ. ಈ ಸ್ಥಾವರದಿಂದ 50 ಕಿಲೋಮೀಟರ್ ತ್ರಿಜ್ಯದ ಸುತ್ತ 1 ಲಕ್ಷಕ್ಕೂ ಮೀರಿದ ಜನವಸತಿ ಇರುವ ಪಟ್ಟಣಗಳು ಯಾವವೂ ಇಲ್ಲ. ಸ್ಥಾವರದ ಸುತ್ತ ಇರುವ ಸಂಸ್ಕರಿತ ವಲಯದಲ್ಲಿ ಕೇವಲ ಎರಡು ಹಳ್ಳಿ (ಬಾಳೆಮನೆ ಹಾಗು ಹರತುಂಗಾ) ಇದ್ದು ಇಲ್ಲಿನ ಜನಸಂಖ್ಯೆ ಕ್ರಮವಾಗಿ 87 ಮತ್ತು 199 (ಒಟ್ಟು 286) ಮೊತ್ತ ಇದೆ. ಕದ್ರ ಅಣೆಕಟ್ಟಿನಲ್ಲಿ ಮುಳುಗಡೆಯಾಗುವ ಕಾರಣದಿಂದ ಬಾಳೆಮನೆ ಗ್ರಾಮವನ್ನು ಬೇರೆಡೆಗೆ ಸ್ಥಳಾಂತರಿಸಲಾಗುವುದು. ಪ್ರತ್ಯೇಕವಲಯದ (Exclusive Zone) ವ್ಯಾಪ್ತಿಯಲ್ಲಿರುವ ಕೈಗಾ ಗ್ರಾಮದ 395 ಜನರನ್ನು ಸಂಸ್ಕರಿಸಿದ ವಲಯದಾಚೆಗೆ ಸ್ಥಳಾಂತರಿಸಿ ಮರುವಸತಿ ಕಲ್ಪಿಸಿಕೊಡಲಾಗುತ್ತದೆ.

ಮೇಲಿನ ಈ ಅಂಕಿ ಅಂಶಗಳಿಂದ ಸ್ಥಾವರದ ಸುತ್ತಮುತ್ತ ಜನಸಂಖ್ಯೆ ತೀರಾ ವಿರಳ ಎಂದು ವ್ಯಕ್ತವಾಗುತ್ತದೆ.

**ಪವನಶಾಸ್ತ್ರ:**

1978ರಿಂದ 1982ರ ಸಾಲಿನ ಸರಾಸರಿ ವಾರ್ಷಿಕ ಮಳೆ 3180 ಮೀಲಿಮೀಟರಿನಷ್ಟು ಮಾತ್ರ ಎಂದು ತಿಳಿದುಬಂದಿದೆ. ಇಲ್ಲಿ ಗಾಳಿ ಬೀಸುವುದು ಪಶ್ಚಿಮ ಹಾಗೂ ವಾಯವ್ಯ ದಿಕ್ಕಿನಿಂದ ಪ್ರಶಾಂತ ಮಾರುತ ಶೇಕಡಾ 37. ಭರದ ಮಾರುತ ಬೀಸುವ ದಿಕ್ಕಿನಲ್ಲಿ ಜನವಸತಿಯಿಲ್ಲ. ಚಂಡಮಾರುತದ ಭಯ ಸ್ಥಾವರ ಪ್ರದೇಶದಲ್ಲಿ ಇಲ್ಲ.

**ಭೂಮಿಯ ಬಳಕೆ:**

10 ಕಿಲೋಮೀಟರ್ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಶೇಕಡಾ 85ರಷ್ಟು ಪ್ರದೇಶದಲ್ಲಿ ಅರಣ್ಯ ವಿದೆ. ಉಳಿದ ಸ್ವಲ್ಪ ಭಾಗ ಕದ್ರ ಅಣೆಕಟ್ಟಿನಲ್ಲಿ ಹಿನ್ನೀರಿನ ವ್ಯಾಪ್ತಿಗೂ, ಸ್ವಲ್ಪ ಭಾಗ ಬೇಸಾಯ ಜಮೀನಿನ ವ್ಯಾಪ್ತಿಗೂ ಸೇರುತ್ತದೆ. ಇಲ್ಲಿ ಬಿದಿರು, ಉರುವಲು ಕಟ್ಟಿಗೆ, ಮರಮಟ್ಟು ಬೆಳೆಯುತ್ತಿದೆ. ಸನಿಹದ ದಾಂಡೇಲಿಯ ಬಳಿ ವನ್ಯಮೃಗಧಾಮವಿದೆ. 120 ಹೆಕ್ಟೇರು ಅರಣ್ಯಪ್ರದೇಶವನ್ನು ಪರಮಾಣು ಸ್ಥಾವರ ನಿರ್ಮಿಸಲು ಬಳಸಿಕೊಳ್ಳಲಾಗುವುದು. ಇದರ ಜೊತೆಗೆ ಈ ಸ್ಥಾವರದ ಸುತ್ತಮುತ್ತ 1.6 ಕಿಲೋಮೀಟರ್ ಸುತ್ತಳತೆಯಲ್ಲಿ ಬರುವ ಪ್ರತ್ಯೇಕ ವಲಯದಲ್ಲಿ ಸುಮಾರು 150 ಹೆಕ್ಟೇರಿನಷ್ಟು ಖಾಸಗಿ ಭೂಮಿ ಮತ್ತು 540 ಹೆಕ್ಟೇರು ಅರಣ್ಯ ಪ್ರದೇಶವಿದೆ. ಈ 540 ಹೆಕ್ಟೇರಿನಲ್ಲಿರುವ ಮರಗಳನ್ನು ಕಡಿಯಲಾಗುವುದಿಲ್ಲ. ಮೊದಲನೆ ಹಂತದಲ್ಲಿ ಕಾಲೋನಿ ಕಟ್ಟಲು ಸುಮಾರು 100 ಹೆಕ್ಟೇರಿನಷ್ಟು ಖಾಸಗಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲಾಗುತ್ತದೆ. ಪರಿಹಾರಾರ್ಥವಾಗಿ ಅಷ್ಟೇ ಮೊತ್ತದ ಜಮೀನಿನಲ್ಲಿ ಕಾಡನ್ನು ಬೆಳೆಸಲಾಗುವುದು.

**ಭೂ-ಜಲಶಾಸ್ತ್ರ:**

ಸ್ಥಾವರದಲ್ಲಿ ಕಟ್ಟುವ ಕಟ್ಟಡಗಳಿಗೆ ಪೂರ್ವಭಾವಿಯಾಗಿ ಭೂಸ್ತರದ ಮಾಹಿತಿಗಳನ್ನು ವಿವರವಾಗಿ ಅಧ್ಯಯನ ಮಾಡಿದೆ. ಈ ಪ್ರದೇಶದಲ್ಲಿ 38 ಕೊಳವೆ ಬಾವಿಗಳನ್ನು ಕೊರೆದು 10 ರಿಂದ 12 ಮೀಟರ್ ಒಳಗಡೆ ದೊರೆತ ಶಿಲೆಗಳನ್ನು ಪರಿಶೀಲಿಸಲಾಗಿದೆ. ಭೂಗರ್ಭದೊಳಗೆ ಸುಮಾರು 7ರಿಂದ 9 ಮೀಟರ್ ಆಳದಲ್ಲಿ ಅಂತರ್ಜಲದ ಮಟ್ಟ ವಿರುವುದು ಕಂಡುಬಂದಿದೆ. ಅದು ಮಳೆಗಾಲದ ಬಳಿಕ ಅಂತರ್ಜಲ 0.5 ಮೀಟರಿನಿಂದ 1 ಮೀಟರ್‌ನವರೆಗೆ ಏರುತ್ತದೆ. ಸಾಮಾನ್ಯವಾಗಿ ಅಂತರ್ಜಲದ ಚಲನೆಯು ಉತ್ತರ ದಿಕ್ಕಿಗೆ ಅಂದರೆ ನದಿಯ ಕಡೆಗೆ ಇದ್ದು ಇದು ಕದ್ರ ಅಣೆಕಟ್ಟು ತುಂಬುವುದರೊಂದಿಗೆ ಬದಲಾಗಬಹುದು. ಸ್ಥಾವರದ ಕೆಳಭಾಗದಲ್ಲಿ ಎಲ್ಲೂ ಸೋರಿಕೆ ಸಂಭವಿಸದಂತೆ ತಾಂತ್ರಿಕ ವಿನ್ಯಾಸವನ್ನು ರಚಿಸಲಾಗುವುದು.

**ಪರಿಸರ ಸಮೀಕ್ಷಾ ಪ್ರಯೋಗಾಲಯ**

ಕೈಗಾ ಪ್ರದೇಶದಲ್ಲಿ ಪರಮಾಣು ಸ್ಥಾವರದ ಘಟಕಗಳು ಕಾರ್ಯಾರಂಭ ಮಾಡುವ ಮುನ್ನವೇ ಪರಿಸರ ಸಮೀಕ್ಷಾ ಪ್ರಯೋಗಾಲಯವೊಂದನ್ನು ಸ್ಥಾಪಿಸಲಾಗುತ್ತದೆ. ಪರಮಾಣು ಘಟಕಗಳು ಕಾರ್ಯಾರಂಭ ಮಾಡುವ ಮುನ್ನ ಹಾಗೂ ಕಾರ್ಯಾರಂಭ ಮಾಡಿದ ಸಮಯದಲ್ಲಿ ಪರಿಸರದ ಮೇಲೆ ಬೀರಬಹುದಾದ ವಿಕಿರಣದ ಪ್ರಭಾವವನ್ನು ಅಧ್ಯಯನ ಮಾಡುವುದೇ ಇದರ ಉದ್ದೇಶ.

ಸ್ಥಾವರ ಕಾರ್ಯಾರಂಭ ಮಾಡುವ ಮುನ್ನ ಈ ಕೆಳಕಂಡ ಪ್ರಯೋಗಗಳನ್ನು ಕೈಗೊಳ್ಳಲಾಗುವುದು:

1) ಸ್ಥಾವರದ ಆಸುಪಾಸಿನ ವಿಕಿರಣದ ಪ್ರಮಾಣವನ್ನು ಅಳೆಯುವುದು.

2) ಪರಿಸರದಲ್ಲಿನ ವಸ್ತುಗಳ ಮೇಲೆ ವಿಕಿರಣದ ಪಾಲನ್ನು ಅಳೆಯುವುದು ಇತ್ಯಾದಿ.

ಪರಮಾಣು ಸ್ಥಾವರ ಕಾರ್ಯಾರಂಭ ಮಾಡುವುದಕ್ಕಿಂತ ಮೊದಲಿನ ವಿಕಿರಣದ ಅಂಕಿ ಅಂಶಗಳನ್ನು ಕಾರ್ಯಾರಂಭ ಮಾಡಿದ ನಂತರದ ಸಮಯದಲ್ಲಿನ ಅಂಕಿಅಂಶಗಳಿಗೆ ಹೋಲಿಸಿ ವ್ಯತ್ಯಾಸವೇನಾದರೂ ಇದೆಯೇ ಎಂದು ತಾಳೆ ನೋಡುವುದರಿಂದ ಪರಿಸರದ ಮೇಲೆ ಅಣು ವಿಕಿರಣದ ಪರಿಣಾಮ ತಿಳಿದುಬರುತ್ತದೆ.

ಇಲ್ಲಿ ಕೊರೆದಿರುವ 38 ಕೊಳವೆ ಬಾವಿಗಳು ಭೂಗರ್ಭದೊಳಗಿನ ಸ್ತರಗಳ ಗಡಸುತನವನ್ನು ತೋರಿಸುತ್ತವೆ. ಭೂಸ್ತರವು ಗಟ್ಟಿ ಶಿಲೆಯಿಂದ ಕೂಡಿದ್ದು ತಳಪಾಯ ಎಂತಹ ಭಾರವನ್ನೂ ಹೊರಲು ಶಕ್ತವಾಗಿದೆ ಎಂದು ತಿಳಿದುಬರುತ್ತದೆ.

**ನೀರು:**

ಪರಮಾಣು ಸ್ಥಾವರಕ್ಕೆ ಅವಶ್ಯವಿರುವ ತಂಪಾದ ನೀರು ಕಾಳಿನದಿಗೆ ಕಟ್ಟಿರುವ ಕದ್ರ ಆಣೆಕಟ್ಟಿನಿಂದ ಯಥೇಚ್ಛವಾಗಿ ದೊರೆಯುತ್ತದೆ. 2000 ಮೆಗಾವ್ಯಾಟ್ ವಿದ್ಯುಚ್ಛಕ್ತಿಯ ಉತ್ಪಾದನೆಗೆ ಸಾಕಾಗುವಷ್ಟು ನೀರು ಧಾರಾಳವಾಗಿ ಲಭಿಸುತ್ತದೆ.

**ಸುರಕ್ಷತಾ ಕ್ರಮಗಳು:**

ಪರಮಾಣು ಸ್ಥಾವರ ಕಾರ್ಯ ನಿರತವಾಗುವುದಕ್ಕಿಂತ ಮುಂಚೆಯೇ ಅದರ ಸಿಬ್ಬಂದಿಗೆ ಸ್ಥಾವರದ ನಿರ್ವಹಣೆಗೆ, ಕಾರ್ಯಾಚರಣೆ ಹಾಗೂ ಇತರ ತತ್ಸಂಬಂಧದ ಕಾರ್ಯಕ್ರಮಗಳ ಬಗ್ಗೆ ತರಬೇತಿಯನ್ನು ವಿವಿಧ ಹಂತಗಳಲ್ಲಿ ಮತ್ತು ಕಾರ್ಯನಿರತ ಸ್ಥಾವರಗಳಲ್ಲಿ ಕೊಡಿಸಲಾಗುತ್ತದೆ. ಸಿಬ್ಬಂದಿಯು ಅರ್ಹತೆ ಗಳಿಸುವ ಮೊದಲು ಪ್ರವೇಶ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಯಲ್ಲಿ ಜಯಗಳಿಸಬೇಕು.

ಜೊತೆಗೆ, ಸ್ಥಾವರದ ಸುರಕ್ಷತೆ ಹಾಗೂ ಪರಿಸರದ ಸುರಕ್ಷತೆ ಕುರಿತಂತೆ ಸ್ವಾಯತ್ತ ತಜ್ಞ ಮಂಡಳಿಯೊಂದಿದ್ದು ಅದು ನಿತ್ಯ ಸ್ಥಾವರದ ಮೇಲೆ ನಿಗಾ ಇಟ್ಟಿರುತ್ತದೆ. ಸ್ಥಾವರವು ಸುರಕ್ಷತಾ ವಿಧಿಗಳನ್ನು ಚಾಚು ತಪ್ಪದೆ ಪಾಲಿಸುತ್ತಿವೆಯೇ ಎಂದು ಈ ಮಂಡಳಿಯು ಕಾಯುತ್ತಿರುತ್ತದೆ. ಸುರಕ್ಷತಾ ಕ್ರಮಗಳ ಉಲ್ಲಂಘನೆ ಕಂಡುಬಂದಲ್ಲಿ ತತ್‌ಕ್ಷಣವೇ ಸ್ಥಾವರದ ವಿರುದ್ಧ ಸೂಕ್ತ ಕ್ರಮಗಳನ್ನು ಕೈಗೊಳ್ಳುವ ಸ್ವತಂತ್ರ ಅಧಿಕಾರ ಈ ಮಂಡಳಿಗೆ ಇದೆ. ಗೊತ್ತಾದ ಮಾಹಿತಿಗಿಂತ ಹೆಚ್ಚು ವಿಕಿರಣ ಸ್ಥಾವರದಿಂದ ಹೊರಸೂಸಿದರೆ ಅದನ್ನು ಕೂಡಲೇ ಮಂಡಳಿ ತನಿಖೆ ಮಾಡುವುದು. ಪರಿಸರದ ಮೇಲೆ ಕೈಗಾ ಅಣುಸ್ಥಾವರದ ಭಯವಿಲ್ಲ. 1.6. ಕಿಲೋಮೀಟರ್ ದೂರದಲ್ಲಿರುವ ಜನವಸತಿ 395 ಮಂದಿ ಮಾತ್ರ. ಸ್ಥಾವರದಿಂದ ಆರ್ಗನ್-41 ಹೊರಸೂಸುವುದನ್ನು ಪೂರ್ಣ ತಡೆಗಟ್ಟಲಾಗುವುದು. ಕಾರ್ಬನ್-14, ಐಯೋಡಿನ್-131, ಟ್ರಿಟಿಯಮ್

ಬಹಳ ಕಡಿಮೆ ಪ್ರಮಾಣದಲ್ಲಿ ಹೊರ ಚೆಲ್ಲುತ್ತದೆ. ಸ್ಥಾವರದಿಂದ ಹೊರಬರುವ ಗಾಳಿಯನ್ನು ಸೋಸು ಸಾಧನದ ಮೂಲಕ ಸೋಸಿ ಹೊರಬಿಡಲಾಗುವುದು. ಆದುದರಿಂದ ಗಾಳಿಯಲ್ಲಿ ಹೊರ ಚೆಲ್ಲುವ ಅಲ್ಪ ಪ್ರಮಾಣದ ಈ ಟ್ರಿಟಿಯಮ್ ಹಾಗೂ ಜಡ ಅನಿಲಗಳು ಮನುಷ್ಯ ತಾಳಿಕೊಳ್ಳುವ ಮಿತಿಗಿಂತ ತೀರಾ ಕೆಳಮಟ್ಟದಲ್ಲಿರುತ್ತವೆ.

235 ಮೆಗಾವ್ಯಾಟ್ 2 ಸ್ಥಾವರಗಳಿಂದ ನದಿಗೆ ಹೊರಬಿಡುವ ಕಲ್ಮಶದ ಪ್ರಮಾಣವನ್ನು ವರ್ಷಕ್ಕೆ 0.15 msv ಎಂದು ನಿಗದಿಪಡಿಸಲಾಗಿದೆ. ಈ ಪ್ರಮಾಣವನ್ನು ಅಣುಶಕ್ತಿ ನಿಯಂತ್ರಣ ಮಂಡಳಿ ನಿಗದಿಪಡಿಸಿದೆ. ಸ್ಥಾವರದ ಮೂಲದಲ್ಲೇ ಕಲ್ಮಶ ನೀರನ್ನು ಪ್ರತ್ಯೇಕಿಸಿ, ಸೋಸಿ ಹೊರಬಿಡಲಾಗುತ್ತದೆ. ಕಲ್ಮಶ ನಿವಾರಣೆಗೆ ಸೂಕ್ತ ತಾಂತ್ರಿಕ ವ್ಯವಸ್ಥೆಯನ್ನು ಅಳವಡಿಸಲಾಗುವುದು. ಕಲ್ಮಶ ನೀರನ್ನು ಹೊರಚೆಲ್ಲುವ ಮುನ್ನ ಸೋಸುವಿಕೆ, ಐಯಾನ್‌ಗಳ ಪರಿವರ್ತನೆ, ಬಾಷ್ಪೀಕರಣ, ಹಾಗೂ ರಾಸಾಯನಿಕ ಪರೀಕ್ಷೆಗೆ ಒಳಪಡಿಸಲಾಗುತ್ತದೆ. ಅಣುಶಕ್ತಿ ನಿಯಂತ್ರಣ ಮಂಡಳಿ ನಿಗದಿಪಡಿಸಿದ ಮಿತಿಯೊಳಗೆ ಕಲ್ಮಶ ನೀರು ಇದೆಯೇ? ಎಂದು ಪರೀಕ್ಷಿಸಿದ ನಂತರವೇ ಸ್ಥಾವರದಿಂದ ನದಿಗೆ ನೀರನ್ನು ಹೊರಬಿಡಲಾಗುತ್ತದೆ. ಸಹಜವಾಗಿ ನದಿಯಲ್ಲಿ ಪ್ರವಾಹ ಬಹಳವಾಗಿರುವುದರಿಂದ ಹಾಗೂ ನೀರನ್ನು ಸ್ಥಾವರಕ್ಕೆ ಪಡೆಯುವ ಮುನ್ನ ಹಾಗೂ ಹೊರ ಬಿಡುವ ಮುನ್ನ ಚೆನ್ನಾಗಿ ಶೋಧಿಸುವುದರಿಂದ ನದಿಗೆ ಹೊರ ಚೆಲ್ಲುವ ಕಲ್ಮಶ ನೀರಿನಿಂದ ಜಲಚರಗಳಿಗೆ ಅಪಾಯದ ಭಯವಿಲ್ಲ.

ಕೈಗಾ ಸುತ್ತಮುತ್ತ ಪ್ರಕೃತಿದತ್ತವಾದ ಹಸಿರು ತೊಡುಗೆ ಇದೆ. ಈ ಹೊದಿಕೆಯನ್ನು ಕೈಗಾ ಪರಮಾಣು ಸ್ಥಾವರ ಉಳಿಸಿಕೊಳ್ಳುವುದಲ್ಲದೆ ಅದನ್ನು ಇನ್ನೂ ಹೆಚ್ಚಾಗಿ ಅಭಿವೃದ್ಧಿಪಡಿಸುತ್ತದೆ.

*(ಪರಮಾಣು ಶಕ್ತಿ ನಿಗಮ, ಮುಂಬೈ, ದಿನಾಂಕ: 10-11ನೇ ಡಿಸೆಂಬರ್ 1988ರಂದು ಕೈಗಾ ಕುರಿತು ನಡೆದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನದ ಭಾವಾನುವಾದ.)*

## ವಿರೋಧ

## ಅಣುಶಕ್ತಿ ಅಗತ್ಯವೇ ?
## ಆರ್ಥಿಕವಾಗಿ ಅನುಕೂಲವೇ ?

ಅಣುಶಕ್ತಿ ಯೋಜನೆಗಳು ಅನೇಕ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳು ಇವು:

1. ಯುರೇನಿಯಂ ಗಣಿ-ಇಲ್ಲಿಂದಲೇ ಅಪಾಯಗಳು ಪ್ರಾರಂಭಗೊಳ್ಳುವುದು.

2. ಸ್ಥಾವರಗಳ ನೆಲೆ.

3. ಸ್ಥಾವರಗಳು, ಗಿಡಮರದ, ಪಶುಪಕ್ಷಿ, ವಾತಾವರಣ, ನೀರಿನ ಮೂಲ ಮತ್ತು ಮಾನವನ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ.

4. ಸ್ಥಾವರಗಳ ಸುರಕ್ಷತೆ.

5. ಆಕಸ್ಮಾತ್ ಸ್ಥಾವರಗಳು ಅಪಘಾತಕ್ಕೀಡಾದರೆ ತುರ್ತು ಸಮಯದಲ್ಲಿ ಕೈಗೊಳ್ಳಬೇಕಾದ ಕಾರ್ಯಕ್ರಮಗಳು.

6. ಅಣುಕಸದ ವಿಸರ್ಜನೆ/ನಿವಾರಣೆ.

7. ಅಪ್ರಯೋಜಕ ಸ್ಥಾವರಗಳ ಬಿಚ್ಚುವಿಕೆ.

8. ಬಾಂಬ್ ಭೀತಿ ಹಾಗೂ ಬಾಂಬ್ ತಯಾರಿಕೆಗೆ ದೊರೆಯುವ ವಸ್ತುಗಳು ಬೇರೆಯವರಿಂದ ಕಳುವಾಗುವ ಶಂಕೆ.

ಈಗ ಮೇಲಿನ ಸಮಸ್ಯೆಗಳನ್ನು ಹಾಗೇ ಬಿಟ್ಟು ಈ ಕೆಳಗಿನ ಎರಡು ಪ್ರಶ್ನೆಗಳ ಮೇಲೆ ಮಾತ್ರ ಕೇಂದ್ರೀಕರಿಸೋಣ:

1. ಅಣುಶಕ್ತಿಯಿಂದ ಉತ್ಪಾದನೆಯಾಗುತ್ತದೆನ್ನುವ ಈ ವಿದ್ಯುಚ್ಛಕ್ತಿ ಅಭಿವೃದ್ಧಿಗೆ ಅಷ್ಟು ಅಗತ್ಯವೇ?

2. ಈ ವಿದ್ಯುಚ್ಛಕ್ತಿ ಆರ್ಥಿಕವಾಗಿ ಲಾಭದಾಯಕವೇ?

ವಿದ್ಯುಚ್ಛಕ್ತಿಯ ಯೋಜನೆಗಳಲ್ಲಿ ಅಣುಶಕ್ತಿಯ ವಿದ್ಯುತ್ತು ಕೇವಲ ಸಾಂಪ್ರದಾಯಿಕ ಶಕ್ತಿಯ ಒಂದು ಭಾಗವಷ್ಟೆ. ಭವಿಷ್ಯತ್ತಿನಲ್ಲಿ ವಿದ್ಯುತ್ ಬೇಡಿಕೆಯನ್ನು ಅಳೆಯುವುದೇ ಇಂದು ಪ್ರಮುಖವಾದ ವಿಷಯ. ಇಂತಹ ಕಲ್ಪನೆ ಕೆಲವು ವೇಳೆ ಬೇಡಿಕೆ ಮತ್ತು ವಿತರಣೆಯ ನಡುವಿನ ಭಾರಿ ಕಂದಕವನ್ನು ಮೂನ್ಸೂಚಿಸುತ್ತದೆ. ಹೀಗಾಗಿ ಸಾಂಪ್ರದಾಯಿಕ ವಿದ್ಯುಚ್ಛಕ್ತಿಯ ಪ್ರಮುಖ ಪ್ರಶ್ನೆ ಎಂದರೆ ಬೇಡಿಕೆ ಮತ್ತು ವಿತರಣೆ ನಡುವಿನ ಭಾರಿ ಅಂತರವನ್ನು ಹೇಗೆ ನಿವಾರಿಸುವುದು ಎನ್ನುವುದೇ ಆಗಿದೆ. ಈ ಪ್ರಶ್ನೆಗೆ ಉತ್ತರ ಹುಡುಕಲು ಹೊರಟಾಗ ನಮ್ಮ ಅರಿವಿಗೆ ಬರುವುದು ಬೃಹತ್ ಗಾತ್ರದ ಸ್ಥಾವರಗಳು. ಮೇಲಿನ ಈ ಪ್ರಶ್ನೆಯನ್ನು ಈಗ ದೇಶದಾದ್ಯಂತ ಮನೆ ಮಾತಾಗಿರುವ ಕೈಗಾದಿಂದಲೇ ಪ್ರಾರಂಭಿಸೋಣ.

ಭವಿಷ್ಯತ್ತಿನಲ್ಲಿ ರಾಜ್ಯದ ವಿದ್ಯುತ್ತಿನ ಬೇಡಿಕೆಯನ್ನು ಅರಿಯಲು 1983ರಲ್ಲಿ ಮೂವರು ಸದಸ್ಯರ ಸಮಿತಿಯೊಂದನ್ನು ನಿಯಮಿಸಲಾಯಿತು. ಸಮಿತಿಯ ವರದಿಯಂತೆ ವಿದ್ಯುತ್ತಿನ ಕೊರತೆ 1982–83ರಿಂದ 1989–90ರ ವೇಳೆಗೆ ಕನಿಷ್ಠ 223 ಮೆಗಾವ್ಯಾಟಿನಿಂದ ಗರಿಷ್ಠ 593 ಮೆಗಾವ್ಯಾಟಿನಷ್ಟಿರುವುದು. ಈ ಕೊರತೆಯೇ ''ಕೈಗಾ ಮಾತ್ರವೇ ವಿದ್ಯುತ್ತಿನ ಬವಣೆಗೆ ದಾರಿದೀಪ, ಕೈಗಾ ಬಿಟ್ಟರೆ ಅನ್ಯಮಾರ್ಗ ಇಲ್ಲ. ಅಣುಶಕ್ತಿಯೇ ಆಶಾಕಿರಣ. ಅಣುಶಕ್ತಿ ಬಿಟ್ಟರೆ ಗತಿ ಇಲ್ಲ'' ಎಂಬ ಘೋಷಣೆಗಳಿಗೆ ಎಡೆ ಮಾಡಿ ಕೊಟ್ಟಿತು. ಆದರೆ ಈ ಎಲ್ಲ ಪ್ರತಿಪಾದನೆಗಳು ಸಮರ್ಥನೀಯವೇ? ವಿದ್ಯುತ್ತಿನ ಬೇಡಿಕೆ ಮತ್ತು ಪೂರೈಕೆಗಳ ನಡುವಿನ ಭಾರಿ ಅಂತರವನ್ನು ಸಮಿತಿ ಹೇಗೆ ಲೆಕ್ಕ ಹಾಕಿತು?

ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಮುನ್ನ ಸಮಿತಿ ಹೇಗೆ ಈ ಲೆಕ್ಕಾಚಾರಕ್ಕೆ ಬಂದಿತು ಎಂಬುದನ್ನು ತಿಳಿಯುವಾ.

ಸರ್ವ ವಿದ್ಯುತ್ ಗೃಹ (AEH)ಗಳು ವರ್ಷಕ್ಕೆ 2375 ಕಿಲೋವ್ಯಾಟುಗಳಷ್ಟು ವಿದ್ಯುತ್ ಬಳಕೆ ಮಾಡುವುದೆಂಬ ಊಹೆಯ ಆಧಾರದ ಮೇಲೆ, ಕಳೆದ ವರ್ಷ ಮನೆಗಳಿಗೆ ನೀಡಿದ ವಿದ್ಯುತ್ತಿನ ಮಂಜೂರಾತಿ ಆಧಾರದ ಮೇಲೆ ಹಾಗೂ ವರ್ಷವೊಂದಕ್ಕೆ 6000 ಹೊಸ ಮನೆಗಳಿಗೆ ವಿದ್ಯುತ್ ಸೌಕರ್ಯ ಬೇಕಾಗುತ್ತದೆನ್ನುವ ಲೆಕ್ಕದ ಅಂದಾಜಿನ ಮೇಲೆ ಇದನ್ನು ಲೆಕ್ಕಹಾಕಲಾಗಿದೆ. ಅಂತೆಯೇ ವ್ಯವಸಾಯ ಮತ್ತು ಮನೆ ದೀಪಕ್ಕೆ ಈ ಸಮಿತಿಯ ಲೆಕ್ಕಾಚಾರದ ಪ್ರಕಾರ ವಾರ್ಷಿಕ ಹೆಚ್ಚಳ ಕ್ರಮವಾಗಿ 60 ಮೆಗಾಯುನಿಟ್ ಮತ್ತು 83 ಮೆಗಾಯುನಿಟ್ಟುಗಳು. ಹಾಗೆಯೇ, ವಾಣಿಜ್ಯಕ್ಕೆ ಬಳಸುವ ವಿದ್ಯುತ್, ಸಣ್ಣ ಕೈಗಾರಿಕೆಗೆ, ಸಾರ್ವಜನಿಕ ಸೌಕರ್ಯಕ್ಕೆ ಬಳಸುವ ವಿದ್ಯುತ್ತಿನಲ್ಲಿನ ಹೆಚ್ಚಳ ವರ್ಷಕ್ಕೆ ಶೇಕಡಾ 12, ಶೇಕಡಾ 11 ಹಾಗೂ ಶೇಕಡಾ 10 ಮಾತ್ರ. ಭಾರಿ

ಕೈಗಾರಿಕೆಗಳಿಗೆ ಬೇಕಾಗುವ ವಿದ್ಯುತ್ತಿನ ಪ್ರಮಾಣವನ್ನು ಐದು ಬೃಹತ್ ಘಟಕಗಳು ಬಳಸುವ ಪ್ರಮಾಣದ ಮೇಲೆ ಲೆಕ್ಕ ಹಾಕಲಾಗಿದೆ.

ಈ ಸಮಿತಿಯ ಲೆಕ್ಕಾಚಾರ ಊಹೆಯನ್ನಾಧರಿಸಿದೆ. ವಿವಿಧ ಬಗೆಯ ಬಳಕೆದಾರರನ್ನು ಗಮನದಲ್ಲಿಟ್ಟುಕೊಂಡ ಅವರ ಕಲ್ಪನೆಯು ಕೊನೆಯ ಪಕ್ಷ ಈ ರೀತಿಯ 16 ಸ್ಪಷ್ಟ ಊಹೆಗಳನ್ನು ಆಧರಿಸಿದೆ. ಇದರ ಜೊತೆಗೆ ಅಸಂಖ್ಯಾತ ದೃಢ ನಂಬಿಕೆಗಳು ಉಂಟು:

1. ಸಾಗಾಟ ಮತ್ತು ಬೇಡಿಕೆಯ ನಷ್ಟ 1989-90ರಲ್ಲಿ ಶೇಕಡಾ 20ಕ್ಕೂ ಕಡಿಮೆ ಆಗದು. (1982-83ರಲ್ಲಿ ಇದು ಶೇಕಡಾ 22 ರಷ್ಟಿತ್ತು)

2. 1989-90ರ ಸಾಲಿನಲ್ಲಿ ಸಂಚಯನ ಶಕ್ತಿಯ ಅಳವಡಿಕೆಯನ್ನು ಲಭ್ಯವಿರುವ ಶಕ್ತಿಯನ್ನಾಗಿ ಪರಿವರ್ತಿಸಿದರೆ ಅದರ ಮೊತ್ತ ಗಂಟೆಗೆ 460 ಕಿಲೋ ವ್ಯಾಟ್/ಕಿಲೋವ್ಯಾಟ್ ಮೀರುವುದಿಲ್ಲ. (1982-83ರಲ್ಲಿ ಈ ಮೊತ್ತ 3681 ಇತ್ತು) ಉದಾ: ವಿದ್ಯುತ್ ಪ್ರವಾಹದ ಪ್ರಸಕ್ತ ಮೊತ್ತವು ಈಗಿನ ಶೇಕಡಾ 42 ರ ತನ್ನ ಪ್ರಮಾಣದಿಂದ ಶೇಕಡಾ 52ಕ್ಕೆ ಏರಿ ಉತ್ತಮಗೊಳ್ಳುವುದು.

3. ವಿದ್ಯುತ್ ಬಳಸುವ ಎಲ್ಲ ವರ್ಗದ ಬಳಕೆದಾರರು 1982-83ರಲ್ಲಿ ಬಳಸುತ್ತಿದ್ದ ಪರಿಮಾಣದಲ್ಲಿ ಬದಲಾವಣೆ ಇಲ್ಲವೆಂದಾಯಿತು. ವಿವಿಧ ವರ್ಗದ ಬಳಕೆದಾರರು ಬಳಸುವ ವಿದ್ಯುತ್ತಿನಲ್ಲಿ ಅವರು ವಿದ್ಯುತ್ ಉಳಿಸುವ ಸಾಧನೆಗಳನ್ನು ಉಪಯೋಗಿಸುವುದಿಲ್ಲವೆಂದಾಯಿತು.

ಮೇಲಿನ ಈ ಲೆಕ್ಕಾಚಾರದ ಬೇಡಿಕೆಯು ತೀವ್ರ ಊಹೆಯದಾಗಿದೆ. ಉದಾ: ಒಟ್ಟು ಬೇಡಿಕೆಯ ಪ್ರಮಾಣದಲ್ಲಿ ಶೇಕಡಾ 6 ರಷ್ಟು ಕಡಿತವನ್ನು ಸಾಧಿಸಿದರೆ 1989-90ರ ಸಾಲಿನ ಕಡಿತದಿಂದ ಉದ್ದೇಶಿತ ಕೈಗಾ 1ನೇ ಹಂತದಲ್ಲಿ ಉತ್ಪಾದನೆಯಾಗುವಷ್ಟು ವಿದ್ಯುತ್ (ಅಂದರೆ 470 ಮೆಗಾ ವ್ಯಾಟ್) ಅನ್ನು ಉಳಿಸಬಹುದು.

ಇಂತಹುದೇ ಕೆಲವು ಆಯ್ಕೆಗಳನ್ನು ಮಾಡಿ ಕರ್ನಾಟಕಕ್ಕೆ ಯಥಾದೃಷ್ಟಿಯ ಯೋಜನೆಯೊಂದನ್ನು ರಚಿಸಲು ನಿಯಮಿಸಿದ್ದ ತಜ್ಞರ ಸಮಿತಿಯು ತನ್ನ ಇತ್ತೀಚಿನ ವರದಿಯಲ್ಲಿ ಕೆಳಕಂಡ ವಿದ್ಯುತ್ ಉಳಿತಾಯದ 5 ಮಾರ್ಗೋಪಾಯಗಳನ್ನು ಸೂಚಿಸಿದೆ.

1. ವಿದ್ಯುತ್ ಬಳಕೆಯಲ್ಲಿ ಮಿತವನ್ನು ಸಾಧಿಸುವ ಉದ್ದೇಶದಿಂದ ಕರ್ನಾಟಕದ ಬೃಹತ್ ಕೈಗಾರಿಕೆಗಳನ್ನು ಆಧುನೀಕರಣಗೊಳಿಸಬೇಕು.

2. ಕೃಷಿ ಪಂಪ್ ಸೆಟ್ಟುಗಳಲ್ಲಿ ಘರ್ಷಣೆ ಇಲ್ಲದ ಫುಟ್-ವಾಲ್ವ್‌ಗಳ ಅಳವಡಿಕೆಯಾಗಬೇಕು.

3. ಫ್ಲೂರಸಂಟ್ ಬಲ್ಬ್‌ಗಳನ್ನು ಬಳಸಬೇಕು.

4. ಮನೆಗಳಲ್ಲಿ ನೀರು ಕಾಯಿಸುವ ಸಾಧನಗಳನ್ನು ಕೈಬಿಟ್ಟು ಸೌರಶಕ್ತಿಯನ್ನು ಬಳಸಿಕೊಳ್ಳಬೇಕು.

5. ಅಡಿಗೆ ಮಾಡಲು ವಿದ್ಯುತ್ ಬಳಸುವ ಬದಲು ದ್ರವೀಕೃತ ಪೆಟ್ರೋಲ್ ಅನಿಲ (LPG) ಬಳಸಬೇಕು.

ಮೇಲಿನ ಐದು ಅಂಶಗಳನ್ನು ಪಾಲಿಸಿದ್ದೇ ಆದರೆ ಉದ್ದೇಶಿತ ಕೈಗಾದ 235 ಮೆಗಾವ್ಯಾಟ್ ಸ್ಥಾವರಗಳಿಂದ ಉತ್ಪಾದನೆಯಾಗುವ 458 ಮೆಗಾವ್ಯಾಟ್ ವಿದ್ಯುತ್ತನ್ನು ನಾವು ಉಳಿತಾಯ ಮಾಡಿದಂತಾಗುತ್ತದೆ. ಈ ಪ್ರಕಾರ ಬೇಡಿಕೆ-ವಿತರಣೆಗಳ ನಡುವಿನ ಕಂದಕವನ್ನು ಮುಚ್ಚಲು ಕೈಗಾ ಮೊದಲನೆ ಹಂತದ ಸ್ಥಾಪನೆಗಿಂತ ಬೇರೆ ಇತರ ಆಯ್ಕೆಗಳು ನಮ್ಮ ಎದುರು ಇವೆ.

ತ್ರಿಸದಸ್ಯ ಸಮಿತಿಯ ಲೆಕ್ಕಾಚಾರ ತೀರ ಹೊಸದೇನೂ ಅಲ್ಲ. "ಕರ್ನಾಟಕದಲ್ಲಿ 1987-2000ನೇ ವೇಳೆಗೆ ವಿದ್ಯುತ್ ಯೋಜನೆಗಳ ದೂರದೃಷ್ಟಿ" ಎಂಬ ಯೋಜನೆಯೊಂದನ್ನು

ತಯಾರಿಸಲು ನಿಯಮಿಸಿದ್ದ ಸಮಿತಿಯು 1987ರಲ್ಲಿ ತನ್ನ ವರದಿಯನ್ನು ಸಲ್ಲಿಸಿದೆ. ಹಿಂದಿನ ತ್ರಿಸದಸ್ಯ ಸಮಿತಿಯ ಕಡುನಿಷ್ಠೆಯ ವರದಿಗಿಂತ ಈ ಸಮಿತಿಯ ವರದಿಯು ಹಿಂಜರಿತದ್ದಾಗಿದೆ. 1986-87ರಲ್ಲಿ ವಾಸ್ತವವಾಗಿ ಬಳಕೆಯಾಗುತ್ತಿದ್ದ 7554 ಮೆಗಾಯುನಿಟ್ ಬದಲಿಗೆ ನಿಜವಾದ ಬೇಡಿಕೆ ಪ್ರಮಾಣ ಇನ್ನೂ ಹೆಚ್ಚೆಂದು ವಾದಿಸಿದೆ. ಶ್ರೀ.ಎಸ್.ಜೆ.ಆರ್. ಸಮಿತಿಯು ಈ ಪ್ರಮಾಣವನ್ನು 1999-2000ನೇ ಸಾಲಿಗೆ 47,520 ಮೆಗಾ ಯುನಿಟ್‌ಗಳೆಂದು ಹೇಳಿದೆ. ಈ ಪ್ರಮಾಣವನ್ನು ಗಳಿಸಬೇಕಾದರೆ ಕೈಗಾ ಸ್ಥಾವರದ ಸ್ಥಾಪನೆಯು ಅಗತ್ಯವೆನ್ನುತ್ತದೆ ಈ ಸಮಿತಿ.

ಸರಕಾರ ನೇಮಿಸಿದ್ದ ತಜ್ಞರ ಸಮಿತಿ ಸೂಚಿಸಿದ್ದ ಮೇಲಿನ ಐದು ಸಲಹೆಗಳನ್ನು ಅನುಸರಿಸಿದ್ದೇ ಆದರೆ 1999-2000ನೇ ಸಾಲಿನ ಬೇಡಿಕೆಯನ್ನು 47520 ಮೆಗಾಯುನಿಟ್‌ನಿಂದ 20126 ಮೆಗಾಯುನಿಟ್‌ಗಳಿಗೆ ಇಳಿಸಬಹುದು. ಇಂಥ ಸನ್ನಿವೇಶದಲ್ಲಿ ಕೈಗಾ ನಮ್ಮ ನೆನಪಿನಿಂದ ಅದೃಶ್ಯವಾಗಬಲ್ಲದು. ಅಣು ವಿದ್ಯುತ್ತಿಗೆ ತಗಲಬಹುದಾದ ಎಲ್ಲ ಬಗೆಯ ವೆಚ್ಚವನ್ನು ಲೆಕ್ಕಹಾಕಿ, ಆನಂತರ ಕಲ್ಲಿದ್ದಲಿನಿಂದ ಉತ್ಪಾದಿಸುವ ಶಾಖೋತ್ಪನ್ನ ವಿದ್ಯುತ್ತಿಗೆ ತಾಳೆ ಮಾಡಿದರೆ ಅಣು ವಿದ್ಯುತ್ತಿಗೆ ಒಂದು ಯೂನಿಟ್ಟಿಗೆ 98.98 ಪೈಸೆಗಳಾದರೆ ಶಾಖೋತ್ಪನ್ನ ವಿದ್ಯುತ್‌ಗೆ 101.17 ಪೈಸೆ ತಗಲುತ್ತದೆ. ಇವೆರಡರ ನಡುವೆ ಉತ್ಪಾದನಾ ವೆಚ್ಚದ ಅಂತರ ಇಷ್ಟು ತೀರಾ ಕಡಿಮೆ ಇದ್ದರೂ ಅಣುಶಕ್ತಿ ಆಯೋಗ ಮಾತ್ರ, ಅಣುಶಕ್ತಿ ಅತ್ಯಂತ ಅಗ್ಗವೆಂದು ಸಾರುತ್ತಿದೆ.

ತಜ್ಞರ ಸಮಿತಿ ಸೂಚಿಸಿದ ವಿದ್ಯುತ್ತಿನ ಉಳಿತಾಯದ ಪಂಚಸೂತ್ರಗಳನ್ನು ಅನುಷ್ಠಾನಕ್ಕೆ ತಂದದ್ದೇ ಆದರೆ ವಿದ್ಯುತ್ ಬೇಡಿಕೆಯ ಗರಿಷ್ಠ ಮಟ್ಟ ಗಣನೀಯವಾಗಿ ಕಡಿಮೆ ಆಗುತ್ತದೆ. ಮೇಲಾಗಿ ನಮ್ಮ ಭವಿಷ್ಯದ ವಿದ್ಯುಚ್ಛಕ್ತಿ ಅದೃಷ್ಟಕ್ಕಿಂತ ಮಿಗಿಲಾಗಿ ಆಯ್ಕೆಯನ್ನು ಹೆಚ್ಚು ಅವಲಂಬಿಸಿದೆ.

''ಪರಮಾಣುಶಕ್ತಿಯು ಶಕ್ತಿಯ ಆಕರದ ಕಟ್ಟಕಡೆಯ ಪ್ರಯತ್ನವಾಗಬೇಕು.'' ಎನ್ನುತ್ತಾರೆ Energy for a Sustainable World ಪುಸ್ತಕದ ಗ್ರಂಥ ಕರ್ತೃ ಜೆ. ಗೋಲ್ಡಮ್ ಬರ್ಗ್ ಹಾಗೂ ಮತ್ತಿತರರು. ಬೇಡಿಕೆ, ಉಳಿತಾಯ ಹಾಗೂ ವಿತರಣೆಗಳ ನಿಖರವಾದ ಪ್ರಮಾಣ ಅನುಸರಿಸಿ ಮೇಲಿನ ಮಾರ್ಗಗಳನ್ನು ಅನುಸರಿಸಿದರೆ ಅಣುಶಕ್ತಿಯ ಅಗತ್ಯಾಗತ್ಯಗಳಿಗೆ ಸ್ಥಳಾವಕಾಶ ದೊರೆಯದೇ ಹೋಗಬಹುದು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಇಲ್ಲಿ ಕೈಗಾ ಮೊದಲನೆ ಹಂತವಾಗಲಿ ಅಥವಾ ಅದರ ವಿಸ್ತರಣೆಯಾದ 2ನೇ ಹಂತವಾಗಲಿ ಅಗತ್ಯವಿಲ್ಲ.

*(ಪ್ರೊ.ಎ.ಕೆ.ಎನ್.ರೆಡ್ಡಿ, ಭಾರತೀಯ ವಿಜ್ಞಾನ ಸಂಸ್ಥೆ; ಬೆಂಗಳೂರು, ಇವರು ದಿನಾಂಕ 10-11ನೇ ಡಿಸೆಂಬರ್ 1988 ರಂದು ಕೈಗಾ ಕುರಿತು ನಡೆದ ರಾಷ್ಟ್ರೀಯ ಪ್ರಸಾರ ಸಂಕಿರಣದಲ್ಲಿ ಮಂಡಿಸಿದ ಭಾಷಣದ ಭಾವಾನುವಾದ)*

**ಪರ**

## ದೇಶದ ಹಾಗೂ ಕರ್ನಾಟಕದ ವಿದ್ಯುಚ್ಛಕ್ತಿಯ ದೃಶ್ಯ

ವಾರ್ಷಿಕ ವಿದ್ಯುಚ್ಛಕ್ತಿಯ ಬಳಕೆ ಶೇಕಡಾ ಹದಿನಾರೂವರೆ ದರದಲ್ಲಿ ವೃದ್ಧಿಸುತ್ತಿದೆ. ಹಾಗೆಯೇ ಗೃಹಕೃತ್ಯದ ಬಳಕೆಗೆ ಶೇಕಡಾ 11.54 ರಂತೆ ವೃದ್ಧಿಯನ್ನು ಕಾಣುತ್ತಿದೆ. ಇದು ವರಮಾನ ವೃದ್ಧಿಗೂ ವಿದ್ಯುಚ್ಛಕ್ತಿಯ ಬಳಕೆಗೂ ಒಂದು ಸಂಬಂಧವನ್ನು ಸೂಚಿಸುವುದಲ್ಲದೆ ಹೆಚ್ಚು ಆದಾಯವುಳ್ಳ ವರ್ಗಗಳ ಒಲವು ವಿದ್ಯುತ್ತಿನೆಡೆಗೆ ಎನ್ನುವುದು ಇದರಿಂದ ಸ್ಪಷ್ಟವಾಗು

ತ್ತದೆ. ಹಳ್ಳಿಗಳಿಗೆ ವಿದ್ಯುಜ್ಜಾಲವನ್ನು ಎಳೆಯಲು ಬೃಹತ್ ಪ್ರಮಾಣದ ವೆಚ್ಚವನ್ನು ಮಾಡಲಾಗಿದೆ ಹಾಗೂ ಇದರ ಮೇಲೆ ಮಾಡಿದ ವೆಚ್ಚವನ್ನು ಹಿಂದಿರುಗಿ ಪಡೆಯುವ ಅಗತ್ಯವೂ ಇದೆ.

ಒಟ್ಟು ಶಕ್ತಿಯ ಬಳಕೆಯಲ್ಲಿ ವಿದ್ಯುಚ್ಛಕ್ತಿಯ ಪಾಲು 1984-85ರಲ್ಲಿ ಶೇಕಡಾ 18ರಿಂದ 2004-05ನೇ ಇಸವಿಯ ವೇಳೆಗೆ ಶೇಕಡಾ 31.5ಕ್ಕೆ ಏರಬಹುದು ಹಾಗೂ 2001ನೇ ಇಸವಿ ವೇಳೆಗೆ ವಾಣಿಜ್ಯ ಉದ್ದೇಶಕ್ಕೆ ಅದು ಶೇಕಡಾ 31ರಿಂದ 39.5ಕ್ಕೆ ಏರಬಹುದು.

1984 ಹಾಗೂ 2004-05ರ ಸಾಲಿಗೆ ಬಳಕೆ ಹಾಗೂ ಅಂದಾಜು ಬಳಕೆಯ ಪ್ರಮಾಣವನ್ನು ಗಮನಿಸಿದರೆ ಮೊದಲನೆ ಸ್ಥಾನ ಕೈಗಾರಿಕೆಗಳಿಗೂ ಎರಡನೇ ಸ್ಥಾನ ಗೃಹಬಳಕೆಗೂ ಸಲ್ಲುತ್ತದೆ. ಒಟ್ಟಾರೆ ಕೈಗಾರಿಕೆಯಲ್ಲಿ ಬಳಕೆಯಾಗುತ್ತಿರುವ ಶಕ್ತಿಯ ಪಾಲಿನಲ್ಲಿ ಪ್ರಸಕ್ತ ಶೇಕಡಾ 42.5 ರ ಪ್ರಮಾಣ 2004-05ರ ವೇಳೆಗೆ ಶೇಕಡಾ 55.8ಕ್ಕೆ ಏರಬಹುದು. ಅಂತೆಯೇ ಇಂದಿನ ಒಟ್ಟು ವಿದ್ಯುತ್ತಿನ ಪಾಲಿನಲ್ಲಿ ಶೇಕಡಾ 3.3 ರಷ್ಟು ಗೃಹಕೃತ್ಯಕ್ಕೆ ಬಳಕೆಯಾಗುತ್ತಿದ್ದು ಮುಂದೆ ಇದು 17.0ಕ್ಕೆ ಏರಬಹುದು. ನಿರಂತರವಾಗಿ ಎಲ್ಲ ವರ್ಗಗಳಿಗೂ ವಿದ್ಯುತ್ತಿನ ಸರಬರಾಜು ಮಾಡಬೇಕಾದರೆ ಈ ಮೇಲಿನ ಏರುಪೇರನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಅದರಂತೆ 9ನೆಯ ಯೋಜನೆಯ ಅಂತ್ಯದ ವೇಳೆಗೆ 1,65,593 ಮೆಗಾ ವ್ಯಾಟ್ ವಿದ್ಯುಚ್ಛಕ್ತಿಯು ಅವಶ್ಯವಿದೆ. ಈ ಗುರಿಯನ್ನು ತಲುಪಲು ವಾರ್ಷಿಕ ಸುಮಾರು 10,000 ಮೆಗಾ ವ್ಯಾಟ್ ಶಕ್ತಿಯ ಉತ್ಪಾದನೆಯನ್ನು ಮುಂದಿನ ದಶಕದಲ್ಲಿ ತಲುಪಬೇಕು. ಈ ಗುರಿಯ ಹೆಚ್ಚಿನ ಭಾಗ ಕಲ್ಲಿದ್ದಲಿನಿಂದಲೂ, ಅನಿಲ ಆಧಾರಿತ ಶಾಖೋತ್ಪನ್ನ ಕೇಂದ್ರಗಳಿಂದಲೂ ಹಾಗೂ ಅಲ್ಪ ಪ್ರಮಾಣದಲ್ಲಿ ಅಣು ಸ್ಥಾವರಗಳಿಂದಲೂ ದೊರಕುತ್ತದೆ.

ಭಾರತದಲ್ಲಿ ಪ್ರಾಥಮಿಕ ಶಕ್ತಿಯ ಲಭ್ಯತೆಯ ದೃಷ್ಟಿಯಲ್ಲಿ 2000-2010ನೇ ದಶಕ ಒಂದು ಸಂದಿಗ್ಧ ಕಾಲವಾಗಬಹುದು. ವಿದ್ಯುತ್ತಿನ ಬೇಡಿಕೆಯನ್ನು ಪೂರೈಸಲು ಕಲ್ಲಿದ್ದಲು ಸರಬರಾಜಿನ ಮೇಲೆ ಅಪಾರವಾದ ಒತ್ತಡ ಬರಬಹುದು. ಆಮದು ತೈಲದ ಮೇಲಿನ ವೆಚ್ಚ ಏರುತ್ತ ಹೋಗಬಹುದು. ಆ ಕಾರಣವಾಗಿ ದೇಶದಲ್ಲಿ ನಮ್ಮ ಪ್ರಾಥಮಿಕ ವಿದ್ಯುಚ್ಛಕ್ತಿಯ ಬೇಡಿಕೆಯನ್ನು ಪೂರೈಸಲು ಒಂದು ಸುದೀರ್ಘವಾದ ನೀತಿ ಅವಶ್ಯವಿದೆ. ಕರ್ನಾಟಕದ ಇಂದಿನ ವಿದ್ಯುಚ್ಛಕ್ತಿಯ ದೃಶ್ಯ ತೀರಾ ಸಂದಿಗ್ಧದಲ್ಲಿದೆ. ಬಳಕೆದಾರರೆಲ್ಲರೂ ಅದರ ಬಿಸಿಯನ್ನು ಉಣ್ಣುತ್ತಿದ್ದಾರೆ. ಹೈಟೆನ್‌ಷನ್ ಬಳಕೆ ಸುಮಾರು 900 ಮೆಗಾವ್ಯಾಟಿನಷ್ಟಿದ್ದು ಇದು ಶೇಕಡಾ 45ರಷ್ಟು ಕಡಿತಕ್ಕೆ ಒಳಗಾಗಿದೆ. ವ್ಯವಸಾಯ ಮತ್ತು ಗೃಹಕೃತ್ಯವೇ 4000 ಮೆಗಾವ್ಯಾಟಿನಷ್ಟಿದೆ. ಇನ್ನುಳಿದ 1600 ಮೇಗಾವ್ಯಾಟ್ ಇತರ ಎಲ್ಲ ಬಾಬತ್ತುಗಳಿಗೆ ಹಂಚಿಕೆಯಾಗುತ್ತಿದೆ. ಕೈಗಾರಿಕೆಗಳಿಗೆ ಕೊರತೆ ಬೀಳುವ ವಿದ್ಯುಚ್ಛಕ್ತಿಯ ಪ್ರಮಾಣ ಇಂದು 250 ಮೆಗಾವ್ಯಾಟಗಳಿಗೂ ಹೆಚ್ಚು.

ಕರ್ನಾಟಕದಲ್ಲಿ ಜಲವಿದ್ಯುತ್ತು ಪ್ರಮುಖ ಶಕ್ತಿಯ ಆಕರವಾಗಿದ್ದು ಪ್ರಸಕ್ತ 2000 ಮೆಗಾ ವ್ಯಾಟ್ ಉತ್ಪಾದನೆಯಾಗುತ್ತಿದೆ. ಪರಿಸರ ಸಮಸ್ಯೆ ಅರಣ್ಯ ಸಂಪತ್ತಿನ ಸಂರಕ್ಷಣೆಯ ಕಾರಣ ಹೆಚ್ಚು ಉತ್ಪಾದನೆಗೆ ಕೈಹಾಕುವಂತಿಲ್ಲ. ಈ ಕಾರಣದಿಂದಾಗಿ, ರಾಜ್ಯವು ಶಾಖೋತ್ಪನ್ನ ಮೂಲಕ್ಕೆ ಕೈ ಹಾಕಿತು. ರಾಯಚೂರು (840 ಮೆಗಾವ್ಯಾಟ್) ಮತ್ತು ಮಂಗಳೂರು (420 ಮೆಗಾವ್ಯಾಟ್) ಘಟಕಗಳ ನಡುವೆ 1260 ಮೆಗಾವ್ಯಾಟ್ ವಿದ್ಯುಚ್ಛಕ್ತಿ ಉತ್ಪಾದನೆಯಾಗುತ್ತಿದೆ. ಬಹುದೂರದಿಂದ ಈ ಊರುಗಳಿಗೆ ಕಲ್ಲಿದ್ದಲನ್ನು ಸಾಗಿಸುವುದು ಒಂದು ದೊಡ್ಡ ಸಮಸ್ಯೆಯಾಗಿದೆ. ಒಂದು ಕಿಲೋ ವ್ಯಾಟ್ ವಿದ್ಯುತ್ತಿನ ಬೆಲೆ ರೂ. 1.25ಕ್ಕಿಂತ ಕಡಿಮೆಯಂತೂ ಆಗದು. ತತ್ಪರಿಣಾಮವಾಗಿ 8ನೇ ಯೋಜನಾ ಅವಧಿಯಲ್ಲಿ ಕರ್ನಾಟಕದಲ್ಲಿ ವಿದ್ಯುತ್ತಿನ ಬೆಲೆ ಗಮನಾರ್ಹವಾಗಿ ಏರಲಿದೆ.

ಈಗ ಕರ್ನಾಟಕ, ಕೇಂದ್ರದ ಯೋಜನೆಗಳಿಂದ ತನ್ನ ಪಾಲಿಗೂ ಮೀರಿ ವಿದ್ಯುತ್ತನ್ನು ಪಡೆಯುತ್ತಿದೆ. ಜೊತೆಗೆ ರಾತ್ರಿ ವೇಳೆ ಮಹಾರಾಷ್ಟ್ರ ಸಹ ವಿದ್ಯುತ್ ಸರಬರಾಜು ಮಾಡುತ್ತಿದೆ. ಈ ಹೆಚ್ಚುವರಿಯೇ ಸುಮಾರು 250 ಮೆಗಾವ್ಯಾಟಿನಷ್ಟು. ಬೇರೆ ರಾಜ್ಯಗಳಲ್ಲಿನ ಸದ್ಯದ ವಿದ್ಯುಚ್ಛಕ್ತಿಯ ಸ್ಥಿತಿ ಬದಲಾದರೆ ಈಗಿನ ಪಾಲಿಗೂ ಧಕ್ಕೆ ಬರಬಹದು. ಆದ್ದರಿಂದ 1000 ಮೆಗಾವ್ಯಾಟ್ ವಿದ್ಯುಚ್ಛಕ್ತಿಯ ಉತ್ಪಾದನೆ ರಾಜ್ಯದ ನೀತಿಯಾಗಿದ್ದು ಇದಕ್ಕೆ ಆಸರೆಯಾಗಿ ಪ್ರತಿ ವರ್ಷ 500 ಮೆಗಾವ್ಯಾಟ್‌ನಷ್ಟು ಸೇರಿಸುತ್ತಾ ಹೋಗಬೇಕೆಂದು ಆಲೋಚಿಸುತ್ತಿದೆ. ಈ ದಿಕ್ಕಿನಲ್ಲಿ ಅನೇಕ ಸಂಸ್ಥೆಗಳು, ಸಮಿತಿಗಳು ಸೂಚಿಸಿದಂತೆ ರಾಜ್ಯ ಸರಕಾರ 7200 ಮೆಗಾವ್ಯಾಟ್ ಪ್ರಮಾಣದ ವಿದ್ಯುಚ್ಛಕ್ತಿಯ ಉತ್ಪಾದನೆಯನ್ನು 9ನೇ ಯೋಜನೆಯ ಅಂತ್ಯದ ವೇಳೆಗೆ ಪೂರೈಸಲು ಆಲೋಚಿಸಿದೆ. ಅದಕ್ಕಾಗಿ ರಾಜ್ಯ ಮತ್ತು ಕೇಂದ್ರ ಸರಕಾರಗಳೆರಡೂ ಅಪಾರವಾದ ಸಂಪನ್ಮೂಲ ಹೂಡಲು ತಯಾರಾಗಬೇಕು. (8ನೇ ಮತ್ತು 9ನೇ ಯೋಜನೆಗಳ ಅವಧಿಯಲ್ಲಿ 4500 ಮೆಗಾವ್ಯಾಟ್‌ನಷ್ಟು ಹೆಚ್ಚಳ)

ದಕ್ಷಿಣ ಭಾರತದ ರಾಜ್ಯಗಳು ವಿದ್ಯುಚ್ಛಕ್ತಿಯ ಪ್ರಾಥಮಿಕ ಆಕರಗಳೆನಿಸಿದ ಕಲ್ಲಿದ್ದಲು ಅಥವಾ ಅನಿಲಗಳ ಮೂಲ ಉತ್ಪನ್ನ ಕೇಂದ್ರದಿಂದ ಬಹುದೂರದಲ್ಲಿದ್ದು ಇವುಗಳು ವಿಧಿಯಿಲ್ಲದೆ ಜಲವಿದ್ಯುತ್ತನ್ನೋ ಅಣುಶಕ್ತಿಯನ್ನೋ ಅವಲಂಬಿಸಬೇಕಾಗಿದೆ. ಕರ್ನಾಟಕದಲ್ಲಿ ಪೂರ್ಣವಾಗಿ ಜಲವಿದ್ಯುತ್ತನ್ನು ಬಳಸಿಕೊಂಡರೂ ಇದು ನಮ್ಮ ಬೇಡಿಕೆಯನ್ನು ಪೂರೈಸಲಾರದು. ಅದೇ ಕಾಲಕ್ಕೆ ವಿದ್ಯುಚ್ಛಕ್ತಿಯ ಹೊಸ ಮೂಲಗಳಾದ ಗಾಳಿ, ಸೌರಶಕ್ತಿಗಳು ನಮ್ಮ ಸೀಮಿತ ಬೇಡಿಕೆಯನ್ನು ಪೂರೈಸಿದರೂ ಈಗಿನ ಸಂದರ್ಭದಲ್ಲಿ ಅಗ್ಗದ ದರದ ವಿದ್ಯುತ್ ಉತ್ಪಾದನೆ ಅವುಗಳಿಂದ ಅಸಾಧ್ಯ.

ಇತ್ತೀಚಿನ ಅನುಭವದಂತೆ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಅಣುಶಕ್ತಿ ಕೇಂದ್ರಗಳು ಉತ್ಪಾದಿಸುವ ವಿದ್ಯುತ್ತು ಇತರ ಪಳೆಯುಳಿಕೆ ಆಧಾರಿತ (ಕಲ್ಲಿದ್ದಲು, ಎಣ್ಣೆ, ಅನಿಲ) ವಿದ್ಯುತ್ತಿಗಿಂತ ಅಗ್ಗವೆಂದು ಹಾಗೂ ಯಾವ ದೇಶ ಈ ಪಳೆಯುಳಿಕೆ ಇಂಧನದ ಸಂಪತ್ತನ್ನು ಹೊಂದಿಲ್ಲವೋ ಅಂತಹ ದೇಶ ವಿದ್ಯುಚ್ಛಕ್ತಿಗಾಗಿ ನಿರ್ವಾಹವಿಲ್ಲದೆ ಸ್ವಾವಲಂಬನೆಯನ್ನು ಗಳಿಸಲು ಅಣುಶಕ್ತಿಗೆ ಮೊರೆ ಹೋಗದೆ ನಿರ್ವಾಹವೇ ಇಲ್ಲ.

*(ದಿನಾಂಕ 10-11 ಡಿಸೆಂಬರ್ 1988ರಂದು ಭಾರತೀಯ ವಿಜ್ಞಾನ ಸಂಸ್ಥೆ ಆವರಣದಲ್ಲಿ ನಡೆದ ರಾಷ್ಟ್ರೀಯ ಚರ್ಚಾಗಾರದಲ್ಲಿ ಶ್ರೀ.ಎಸ್.ಜಿ. ರಾಮಚಂದ್ರರು ಮಾಡಿದ ಭಾಷಣದ ಭಾವಾನುವಾದ)*

*Printed and Published by V.G.VAIDYA on behalf of Loka Shikshana Trust at "Samyukta Karnataka Press", Koppikar Road, Hubli-580020. Phone:64303 - No.2 Residency Road, Bangalore - 560025. Phone: 213265 Managing Editor: K.SHAMA RAO, Rep: Bombay - V. Satyamurthy, Phone: 5510592, Madras: S.K.Murthi. Phone: 414870, New Delhi: V.K.Chopra, Phone: 7224785*

*Registered with the Registrar of Newspapers for India under No.35/3957.*

**KASTURI**
Kannada Digest
PRICE: Rs. 3-00

Reg. No. KRNA -225
Reg. No. KRNG -43
Licence No. L 2120/WPP No.33



# ದಾವಣಗೆರೆ

**ಪಾಲಿಯೆಸ್ಟರ್ ಸೂಟಿಂಗ್ಸ್, ಶರ್ಟಿಂಗ್ಸ್**

ಸೂಟಿಂಗ್ಸ್: ಎಮರಾಲ್ಡ್, ಮಾನಸಿಯರ್, ಗೇಲಾರ್ಡ್, ರಾಮ್‌ಸನ್
ಶರ್ಟಿಂಗ್ಸ್: ರಾಕಿ, ದಾವನ್‌ಲೈಟ್, ದಾವರಿನ್

**ಹೊಸ ಶೈಲಿಯಲ್ಲಿ ಸುಖಕರ ಮನಮೋಹಕ ಶ್ರೇಷ್ಠ ಉಡುಪು**




ದಾವಣಗೆರೆ
ಫ್ಯಾಶನ್
ಫ್ಯಾಬ್ರಿಕ್ಸ್

ದಿ ದಾವಣಗೆರೆ ಕಾಟನ್ ಮಿಲ್ಸ್ ಲಿಮಿಟೆಡ್, ದಾವಣಗೆರೆ 577 002.
ಸೀರೆಗಳು, ಸೂಟಿಂಗ್ಸ್, ಶರ್ಟಿಂಗ್ಸ್ ಡ್ರೆಸ್ ಮಟೀರಿಯಲ್ಸ್, ಲಾಂಗ್‌ಕ್ಲಾಥ್ ಹಾಗೂ ಧೋತರಗಳ ತಯಾರಕರು.

ಷೋರೂಮ್‌ಗಳು : • ಕಾವೇರಿ ಭವನ್ ಬೆಂಗಳೂರು 560 009 • ದಾಜೀಬಾನ್ ಪೇಟೆ, ಹುಬ್ಬಳ್ಳಿ 580 020.
• ಹೊಳಲಕೆರೆ ರೋಡ್ - ಚಿತ್ರದುರ್ಗ 577 501 • ಚಿತ್ರದುರ್ಗ ರೋಡ್ - ದಾವಣಗೆರೆ 577 002